ದಿಕ್ಸೂಚಿ ಸಂಸ್ಥೆಯ ಹೆಮ್ಮೆಯ ಕೊಡುಗೆ

ಮಾರ್ಚ್ ೧೯೯೭ ಬೆಲೆ ರೂ.೧೦/-

# ಜೀವನಾಡಿ

ಸಮಗ್ರ ಕುಟುಂಬ ಆರೋಗ್ಯ ಮಂಜರಿ

ವಿಶೇಷ ಪೋಸ್ಟರ್
ನಡೆದಾಡುವ
ಆರ್ಟ್ ಗ್ಯಾಲರಿ



## ಮುಪ್ಪನ್ನು ಮುಂದೂಡಬಹುದು!

- ಜನ್ಮದತ್ತ ವೈಕಲ್ಯಗಳನ್ನು ತಡೆಯುವುದು ಹೇಗೆ?
- ಬರಲಿದೆ! ಮಾನವನ ಹೊಸ ಭ್ರೂಣ ಬ್ಯಾಂಕ್
- ಎರಡು ಗರ್ಭಕೋಶಗಳಿದ್ದರೆ ಹೇಗೆ?
- ಬರಲಿದೆ! ರಕ್ತರಹಿತ ಶಸ್ತ್ರ ಚಿಕಿತ್ಸೆ!!
- ಹಂದಿ ವೈದ್ಯನ ಅದ್ಭುತ ರೈಲು

# ಜೀವನಾಡಿ ಆರೋಗ್ಯ ಪತ್ರಿಕೆಯ ಬಿಡುಗಡೆ ಸಮಾರಂಭ



ಜೀವನಾಡಿ ಆರೋಗ್ಯ ಪತ್ರಿಕೆಯನ್ನು ಬಿಡುಗಡೆ ಮಾಡುತ್ತಿರುವ ಎಚ್.ನರಸಿಂಹಯ್ಯನವರು. ಎಡಕ್ಕೆ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಹಿರಿಯ ಸಾಹಿತಿ ಪ್ರೊ.ರಾಜಶೇಖರ್ ಭೂಸನೂರ್ ಮಠರವರು, ಬಲಕ್ಕೆ ಇರುವವರು ಡಾ.ವೈ.ಬಿ.ಪಾಟೀಲ್.




ಜೀವನಾಡಿ ಪತ್ರಿಕೆಯ ಗೌರವ ಪ್ರಧಾನ ಸಂಪಾದಕರಾದ ನಾಗಲೋಟಿ ಮಠ ಅವರು ಸಭೆಯನ್ನು ಉದ್ದೇಶಿಸಿ ಮಾತನಾಡುತ್ತಿರುವರು.



ಜೀವನಾಡಿಯ ಸಂಪಾದಕರಾದ
ಡಾ.ನಾ.ಸೋಮೇಶ್ವರರವರು.



ಜೀವನಾಡಿಯ ವ್ಯವಸ್ಥಾಪಕ ಸಂಪಾದಕರಾದ
ಶ್ರೀ ಎ.ಟಿ.ಪಾಟೀಲ್‌ರವರು.

# ಒಳನಾಡಿ

ಸಂಚಿಕೆ - ೨ ಸಂಪುಟ - ೧ ಮಾರ್ಚ್ - ೧೯೯೭

# ಹಾರೈಕೆಗಳು

ಹೊಸ ವರ್ಷದ ಕೊಡುಗೆಯಾಗಿ ನೀವು ಕನ್ನಡಕ್ಕೆ ಕೊಡುತ್ತಿರುವ ಈ ಕೊಡುಗೆ ಅಪರೂಪ ವಾಗಿದೆ.

ಕನ್ನಡಿಗರ ಜ್ಞಾನದ ದಿಗಂತ ವಿಸ್ತಾರಗೊಳ್ಳಲು ಬೇರೆ ಬೇರೆ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿರು ವವರು ಆಯಾ ಕ್ಷೇತ್ರಕ್ಕೆ ಸಂಬಂಧಿಸಿದಂತೆ ರಚನಾತ್ಮಕ ಕೆಲಸ ಕೈಕೊಂಡರೆ ಕನ್ನಡ ಸಮೃದ್ಧಿ ಗೊಳ್ಳಲು ಸಾಧ್ಯ. ಆ ದಿಸೆಯಲ್ಲಿ ವೈದ್ಯ ವಿಜ್ಞಾನಕ್ಕೆ ಸಂಬಂಧಿಸಿದಂತೆ ''ಜೀವನಾಡಿ'' ಎಂಬ ಮಾಸ ಪತ್ರಿಕೆಯನ್ನು ಹೊರತರುತ್ತಿರುವುದು ಖುಷಿಯ ಸಂಗತಿ. ಕನ್ನಡಿಗರಿಗೆ ವೈದ್ಯಕೀಯ ವಿಷಯಗಳ ಸಾಮಾನ್ಯ ಪರಿಚಯ ಮಾಡಿಕೊಡುವುದರ ಮೂಲಕ ಕನ್ನಡದ ಶ್ರೀಮಂತಿಕೆ ಹೆಚ್ಚುವಲ್ಲಿ ನಿಮ್ಮ ಪತ್ರಿಕೆಯ ಪಾಲೂ ಸೇರುತ್ತಿರುವುದು ಸಂತಸದ ಸಂಗತಿ. ನಿಮ್ಮಂತಹ ವೈದ್ಯ ವಿದ್ವಾಂಸರ ವಿದ್ವತ್ತಿನ ವಾಹಕವಾಗಿ ಈ ಪತ್ರಿಕೆ ಶ್ರಮಿಸಲಿ ಎಂದು ಹಾರೈಕೆ.

**ತೋಂಟದ ಸಿದ್ಧಲಿಂಗಸ್ವಾಮಿಗಳು,**
ಶ್ರೀಮನ್ನಿರಂಜನ ಜಗದ್ಗುರು ತೋಂಟದ ಮಹಾಸ್ವಾಮಿಗಳವರು.
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ-ಡಂಬಳ-ಗದಗ

ತಾವು ಕಳಿಸಿದ ಆರೋಗ್ಯ ಪತ್ರಿಕೆಯ ಬಿಡುಗಡೆ ಸಮಾರಂಭದ ಆಮಂತ್ರಣ ತಲುಪಿ ಸಂತೋಷವಾಯಿತು. ನೂತನ ವರ್ಷದ ನೂತನ ಕೊಡುಗೆಯಾಗಿ ಹೊರಬರಲಿರುವ ''ಜೀವ ನಾಡಿ'' ಮಾಸಿಕ ಸಮಸ್ತ ಮಾನವ ಜನಾಂಗದ ಆರೋಗ್ಯ ರಕ್ಷಣೆಯಲ್ಲಿ ಮಹತ್ವದ ಪಾತ್ರವಹಿಸು ವುದರಲ್ಲಿ ಸಂದೇಹವಿಲ್ಲ. ತಮ್ಮ ಮಾರ್ಗದರ್ಶನ ದಲ್ಲಿ ಪತ್ರಿಕೆ ಯಶಸ್ವಿಯಾಗಿ ಪ್ರಕಟವಾಗಲಿ ಎಂದು ಹಾರೈಸುವೆವು.

**ಶ್ರೀ ಸಿದ್ಧರಾಮೇಶ್ವರಸ್ವಾಮೀಜಿ,** ರುದ್ರಾಕ್ಷಿಮಠ, ನಾಗನೂರ, ಬೆಳಗಾವಿ.

ತಾವು ಕಳಿಸಿದ ''ಜೀವನಾಡಿ'' ಮಾಸ ಪತ್ರಿಕೆಯ ಬಿಡುಗಡೆ ಸಮಾರಂಭದ ಆಮಂತ್ರಣ ಪತ್ರಿಕೆ ಮತ್ತು ತಮ್ಮ ಪತ್ರ ತಲುಪಿದೆ.

ಬಸವಾದಿ ಪ್ರಥಮರು ಹಾಗೂ ಚಿತ್ತರಾಗಿ ಶ್ರೀ ವಿಜಯ ಮಹಾಂತ ಶಿವಯೋಗಿಗಳವರ ಕೃಪೆ ಯಿಂದ ಈ ಕಾರ್ಯಕ್ರಮ ಯಶಸ್ವಿಯಾಗಿ ಜರುಗ ಲೆಂದು ಹಾರೈಸುತ್ತೇವೆ.

**ಶ್ರೀ. ಮ. ನಿ. ಪ್ರ. ಮಹಾಂತಸ್ವಾಮಿಗಳವರು** , ಚಿತ್ತರಗಿ ಸಂಸ್ಥಾನಮಠ, ಇಲಕಲ್ಲ.

ನಮ್ಮ ನಾಡಿನ ಜನತೆಗೆ ಅವಶ್ಯವಿದ್ದ ವೈದ್ಯ ಕೀಯ ವಿಷಯಗಳನ್ನು ತಿಳಿಸುವುದಕ್ಕಾಗಿ ''ಜೀವನಾಡಿ'' ಎಂಬುವ ಸಮಗ್ರ ಕುಟುಂಬ ಆರೋಗ್ಯಮಂಜರಿಯೊಂದನ್ನು ಹೊರತರುತ್ತಿರು ವುದು ಬಹಳ ಹರ್ಷದಾಯಕ ಸಂಗತಿ

''ಶರೀರ ಮಾಧ್ಯಂ ಖಲುಧರ್ಮಸಾಧನಂ'' ಎನ್ನುವಂತೆ ಶರೀರದ ಆರೋಗ್ಯವೇ ಎಲ್ಲ ಸಾಧನೆಗೂ ಮೂಲ. ಈ ಆರೋಗ್ಯದ ಬಗ್ಗೆ ನಮ್ಮ ಜನತೆಗೆ ಅರಿವನ್ನುಂಟು ಮಾಡುವ ಕೆಲಸ ನಡೆಯ ಬೇಕಾಗಿದೆ. ನಿಮ್ಮ ಪತ್ರಿಕೆಯಲ್ಲಿ ಅಲೋಪತಿಯ ನ್ನೊಳಗೊಂಡಂತೆ ಆಯುರ್ವೇದ ಮತ್ತು ಹೋಮಿಯೋಪತಿ ಹಾಗೂ ನಿಸರ್ಗ ಚಿಕಿತ್ಸೆಗಳ ಬಗ್ಗೆಯೂ ಲಭ್ಯವಾಗುತ್ತದೆಯೆಂದು ನಿರೀಕ್ಷಿಸು ತ್ತೇವೆ. ರೋಗ ಬಂದ ಮೇಲೆ ಚಿಕಿತ್ಸೆ ಪಡೆಯು ವುದಕ್ಕಿಂತ ರೋಗ ಬಾರದಂತೆ ಜಾಗೃತರಾಗಿರ ಬೇಕೆಂಬುದಕ್ಕೆ ನಿಮ್ಮ ಪತ್ರಿಕೆ ಹೆಚ್ಚು ಒತ್ತುಕೊಟ್ಟು ಆ ದಿಸೆಯಲ್ಲಿ ಹೆಚ್ಚಿನ ಲೇಖನಗಳು ಪ್ರಕಟವಾಗ ಲೆಂದು ಹಾರೈಸುತ್ತೇವೆ. ಈ ಮಾಸಪತ್ರಿಕೆಯಲ್ಲಿ ಪ್ರತಿ ತಿಂಗಳೂ ಇಂಗ್ಲಿಷಿನ ಕೆಲವು ವೈದ್ಯ ವಿಜ್ಞಾನದ ಶಬ್ದಗಳಿಗೆ ಕನ್ನಡ ಅರ್ಥ ವಿವರಣೆ ಬಂದರೆ ಎರಡೂ ಭಾಷೆಗೆ ಈ ಪತ್ರಿಕೆ ಒಂದು ಸಂಪರ್ಕ ಸೇತುವೆಯಾಗುತ್ತದೆ.

ಒಟ್ಟಾರೆ ನಿಮ್ಮ ಪತ್ರಿಕೆ ಜನ ಜೀವನಕ್ಕೆ ಹತ್ತಿರ ವಾಗಿ ಅದರಿಂದ ಸಾವಿರಾರು ಜನಕ್ಕೆ ಉಪಯೋ ಗವಾಗಲೆಂದು ಹಾರೈಸುತ್ತೇವೆ.

**ಶ್ರೀ ಶಿವಕುಮಾರಸ್ವಾಮಿಗಳು,** ಶಿವಯೋಗಾಶ್ರಮ, ಬಿದರಕುಂದಿ, ಮುದ್ದೇಹಾಳ

''ಜೀವನಾಡಿ'' ಮಾಸ ಪತ್ರಿಕೆಯ ಪ್ರಥಮ ಸಂಚಿಕೆಯನ್ನು ಕಂಡು ತುಂಬಾ ಸಂತೋಷವಾ ಯಿತು. ಶ್ರೀ ಸಾಮಾನ್ಯರಿಗೆ ಇಂತಹ ಪತ್ರಿಕೆಯೊಂದರ ಅವಶ್ಯಕತೆ ಇದ್ದಿತು. ಹಾರ್ದಿಕ ಶುಭಾಶಯ ಗಳನ್ನು ಸ್ವೀಕರಿಸಿರಿ.

**ಡಾ. ಕೆ. ಎಸ್. ಶಂಕರರಾವ್,** ಗೌನಿಪಲ್ಲಿ ಪಶುವೈದ್ಯಾಧಿಕಾರಿಗಳು ತಾ. ಶ್ರೀನಿವಾಸಪುರ

ಸಮಾರಂಭವು ಯಶಸ್ವಿಯಾಗಲೆಂದು ಶುಭ ಕೋರುವೆ.

**ಡಾ. ನಿರ್ಮಲಾ ಕೇಸರಿ,** ನಿರ್ದೇಶಕರು, ಬಾಪೂಜಿ ಚೈಲ್ಡ್ ಹೆಲ್ತ್ ಇನ್‌ಸ್ಟಿಟ್ಯೂಟ್, ದಾವಣಗೆರೆ

ದಿಕ್ಸೂಚಿ ಪತ್ರಿಕಾಸಂಸ್ಥೆಯ ಮತ್ತೊಂದು ಕೊಡುಗೆ ಜೀವನಾಡಿಯ ಬಿಡುಗಡೆ ಸಮಾರಂಭ ಯಶಸ್ವಿಯಾಗಲಿ ನಿಮ್ಮ ಸಂಸ್ಥೆಗೆ ''ಅಭಿನಂದನೆಗಳು ಮತ್ತು ಹೊಸವರ್ಷದ ಶುಭಾಶಯಗಳು''

**ಅಣ್ಣಪ್ಪ ರೇಶ್ಮಿ,** ಕಸ್ಬೇಕರ-ಮೆಟಗುಡ್ ಕ್ಲಿನಿಕ್, ಶಿವಾಜಿನಗರ, ಬೆಳಗಾವ

''ಜೀವನಾಡಿ'' ಮಾಸಿಕ ಬಿಡುಗಡೆಯ ಸಮಾರಂಭ ಯಶಸ್ವಿಯಾಗಲೆಂದು ಹಾರೈಸುವೆ.

**ಬಿ. ಬಿ. ಹಂದರಗಲ್** , ಉಪಾಧ್ಯಕ್ಷರು, ಕರ್ನಾಟಕ ವಿಜ್ಞಾನ ಪರಿಷತ್ತು , ಬೆಂಗಳೂರು

ದಿಕ್ಸೂಚಿ ಪ್ರಾರಂಭೋತ್ಸವದ ನೆನಪು ಇನ್ನೂ ನನ್ನೊಳಗೆ ಹಸಿರಾಗಿ ಉಳಿದಿದೆ. ಅಂದು ನನಗೆ ಖಾತ್ರಿಯಾಗಿತ್ತು, ದಿಕ್ಸೂಚಿ ಸಮಸ್ತ ಬದುಕಿನ ದಿಕ್ಸೂಚಿಯಾಗುವುದು, ನನ್ನ ಅನಿಸಿಕೆ ಸುಳ್ಳಾಗ ಲಿಲ್ಲ. ಬದುಕಿಗೆ ಸರ್ವಂದದ ಶಕ್ತಿ ನೀಡುವ "ಜೀವನಾಡಿ" ಇಂದು ಪ್ರಕಟಗೊಳ್ಳುತ್ತಿದೆ. ಕನ್ನಡ ಲೋಕಕ್ಕೆ ಸಂತಸದ ದಿನವಿದು.

ಪ್ರಿಯ ಪಾಟೀಲ, ನೀವು ಸ್ವತಂತ್ರ ಚಿಂತಕರು. ಹೊಸ ಹೊಸ ಆವಿಷ್ಕಾರಗಳನ್ನು ತರಲು ನೀವು ಹುಟ್ಟಿ ಬಂದವರು. ಇಪತ್ತು ವರ್ಷಗಳ ಬಳಿಕ ನನ್ನ ಮಾತನ್ನು ನೆನೆಸಿಕೊಳ್ಳಿರಿ. ನಿಮ್ಮ ಜೀವನದ ಮೂಲದ್ರವ್ಯ ಸಕಲ ಜೀವನದ ಲೇಸ ಬಯಸು ವಂಥದು. ನಿಮ್ಮ ಬದುಕು ಸಾಮಾಜಿಕ ಬದುಕು. ವ್ಯಕ್ತಿನಿಷ್ಠವಲ್ಲ. ಅಂತೆಯೇ ನಿಮಗೆ ಯಶಸ್ಸು ತಾನಾಗಿಯೇ ಬರುತ್ತದೆ. ನೀವು ಕಟ್ಟಿಕೊಂಡ ಬಳಗ, ಸಿಬ್ಬಂದಿ ಸರ್ವಕೆಲಸಕ್ಕೆ ಅನುಕೂಲವಾಗಿದೆ.

ಜೀವನದಲ್ಲಿ ಕಷ್ಟಗಳು ಸಹಜ. ಸರ್ವರಿಗೂ ಉಂಟು. ಆ ಕಷ್ಟಗಳು ಕೆಟ್ಟವರಿಗೆ ಅಂಟಿಕೊಂಡು ಅಳುತ್ತವೆ. ನಿಮ್ಮಂಥವರಿಗೆ ಅಂಟಿಕೊಳ್ಳುವ ಕಷ್ಟ ಗಳು ಹೆಮ್ಮೆಪಡುತ್ತವೆ. ಅವುಗಳಿಗೆ ನಿಮ್ಮಂಥವ ರಿಂದಲೇ ಮೋಕ್ಷ. ನೀವು ಆ ಕಷ್ಟಗಳನ್ನು ಅಳುಕದೆ, ಅಂಜದೆ, ನೋಯದೆ ಸ್ವೀಕರಿಸುತ್ತೀರಿ. ಅವು ನಿಮ್ಮ ಜೀವನ ಇತಿಹಾಸದಲ್ಲಿ ಮಹತ್ವದ ಘಟನೆಗಳಾಗಿ ರಾರಾಜಿಸುತ್ತವೆ.

ಎಲ್ಲಂದದ ಯಶಸ್ಸು ನಿಮ್ಮದಾಗಲಿ. ಧೈರ್ಯ ದಿಂದ, ಹುಮ್ಮಸ್ಸಿನಿಂದ ಸಂತೋಷದಿಂದ ಮುನ್ನ ಡೆಯಿರಿ.. ಹುಲುಗ್ಗೆ ಹುಲುಗ್ಗೆ ಹುಲಗ್ಗೆ.

**ಶಾಂತರಸ**, ಅಧ್ಯಕ್ಷರು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ದಿಕ್ಸೂಚಿ ಪತ್ರಿಕಾ ಸಂಸ್ಥೆಯ ಹೆಮ್ಮೆಯ ಕೊಡುಗೆಯಾದ "ಜೀವನಾಡಿ" ಮಾಸಿಕ ಪತ್ರಿಕೆಯ ಬಿಡುಗಡೆಯ ಆಹ್ವಾನ ಪತ್ರಿಕೆ ತಲುಪಿ ಸಂತಸವಾಯಿತು. ಅಭಿಮಾನ ಎದೆ ತುಂಬಿ ಬಂತು. ಜಿಲ್ಲೆಯ ಸಾಹಸಿಯೊಬ್ಬರಾದ (ಪತ್ರಿಕಾ ರಂಗದಲ್ಲಿ) ನೀವು "ದಿಕ್ಸೂಚಿ" ಮೂಲಕ "ದಿಗ್ಗಜ"ರಾಗಿ ಬೆಳೆದಿರುವುದು ನಮಗೆಲ್ಲ ಹೆಮ್ಮೆಯ ಸಂಗತಿ ಈಗ ಮತ್ತೆ "ಜೀವನಾಡಿ" ಮಾಸಿಕ ಪತ್ರಿಕೆ ಪ್ರಕಟಿಸುವ ಮೂಲಕ ನಾಡಿನ ಕನ್ನಡಿಗರ ನಾಡಿಮಿಡಿಯುತ್ತಿರುವುದು, ನಾಡೋ ಜಪದದತ್ತ ನೀವು ಸಾಗುತ್ತಿರುವುದು ನಮಗೆಲ್ಲ ಗರಿ ಮೂಡಿಸಿದೆ.

ಪತ್ರಿಕೆಯು "ದಿಕ್ಸೂಚಿ" ಯಂತೆ ನಾಡಿಗರ ಒಡನಾಡಿಯಾಗಲೆಂದು ಹಾರೈಸುವೆ.

**ಮಹಾಂತಪ್ರಿಯ**, ರಾಷ್ಟ್ರಪ್ರಶಸ್ತಿ ಶಿಕ್ಷಕರು, ರಾಯಚೂರು

ಜನಸಾಮಾನ್ಯರಲ್ಲಿ ಆರೋಗ್ಯದ ಅರಿವು ಮೂಡಿಸಿ ಅನೇಕ ವೈದ್ಯವಿಜ್ಞಾನದ ಹೊಸ ಹೊಸ ಸಂಶೋಧನೆಗಳನ್ನು ತಿಳಿಸುವ ಮೂಲಕ ಹಾಗೂ ಅಪೂರ್ವ ಮಾಹಿತಿಗಳಿಂದ ಕೂಡಿದ "ಜೀವ ನಾಡಿ" ಪತ್ರಿಕೆಯನ್ನು ಓದುಗ ಬಳಗಕ್ಕೆ ನೀಡಿದ್ದು ಸಂತಸದ ಸುದ್ದಿ ಸ್ವಾಗತಾರ್ಹ.

**ಮಾಂತೇಶಗೌಡ. ಸಿ. ಪಾಟೀಲ**, ಹಿರೇಗುಂಜಳ-ಕುಂದಗೋಳ

ನಿಮ್ಮ ಪ್ರಥಮ ಸಂಚಿಕೆ "ಜೀವನಾಡಿ" ಓದಿದಾಗ ತುಂಬಾ ಸಂತೋಷವಾಗಿದೆ. "ಜೀವನಾಡಿ" ಪತ್ರಿಕೆ ಕನ್ನಡಿಗರ ಆರೋಗ್ಯಕ್ಕೆ ಮಾರ್ಗದರ್ಶನವಾಗಲಿ.

**ಶ್ರೀ. ಎಂ. ಸಾಲುಮಠ**,
ಕಾರ್ಯದರ್ಶಿ, ಕರ್ನಾಟಕಕ ರೈಲ್ವೆ ನೌಕರರ ಕನ್ನಡ ಸಂಘ, ಹುಬ್ಬಳ್ಳಿ

ತಮ್ಮ ಪ್ರಥಮ ಸಂಚಿಕೆ ಓದಿ ಸಂತೋಷವಾಯಿತು. ಆರೋಗ್ಯದ ಕಡೆಗೆ, ಮನುಷ್ಯನ ರೋಗ ರುಜಿನದ ಬಗ್ಗೆ ತಿಳುವಳಿಕೆ ಮಾಡಿಕೊಡುವ ಏಕೈಕ ಪ್ರಥಮ ಕನ್ನಡ ಸಂಚಿಕೆ. ಪ್ರಖ್ಯಾತ ತಜ್ಞರ ಲೇಖನ, ಸಲಹೆಗಳನ್ನು ಸಾಧಾರಣ ಮನುಷ್ಯನಿಗೆ ತಲುಪುವಂತೆ ಮಾಡುವ ತಮ್ಮ ಕಾರ್ಯ ಶ್ಲಾಘನೀಯ. ಸಂಚಿಕೆಗೆ ಉಜ್ವಲ ಭವಿಷ್ಯ ಹಾರೈಸುವೆ.

**ಆನಂದ ಜೋಶಿ**, ಅಕೌಂಟ್ಸ್ ಆಫೀಸ್
ಕೆ.ಪಿ.ಸಿ.ಲಿ., ಶಕ್ತಿನಗರ ರಾಯಚೂರು

"ಜೀವನಾಡಿ" ಮಾಸಿಕದ ಪ್ರಥಮ ಸಂಚಿಕೆಯ ಮುಖಪುಟವೇ ಗಮನ ಸೆಳೆಯಿತು. "ಜೀವನಾಡಿ"ಯು ಸಂಗ್ರಾಹ್ಯ ಸಂಚಿಕೆಯಾಗಿದೆ, ಹೃದಯ ಪೂರ್ವಕ ವಂದನೆಗಳು

**ಶಂಕರಗೌಡ ವೈ. ಪಾಟೀಲ**,
ಬದಾಮಿ


STATE MENT ABOUT OWNERSHIP AND OTHER PARTICULARS ABOUT NEWSPAPER

**JEEVANAADI SAMAGRAKUTUMBA AAROGYA MANJARI**

**FORM-IV**

(see rule 8)

| | | |
|---|---|---|
| 1. | Place of Publication ; | BANGALORE, KARNATAKA STATE |
| 2. | Periodicity of its Publication : | Monthly |
| 3. | printers name : | ADANAGOUDA T. PATIL<br>DIKSOOCHI PRINTERS<br>No.97, west of chord road, 3rdstage, 2nd block, Basaveshwaranagar, Bangalore 560079 |
| 4. | Whether citizen of India :<br>( If foreigner, state the country of origin) | yes<br>- |
| 5. | Editors Name:<br>whether citizen of india :<br>(If foreigner,state the country of origin)<br>Address : | ADANAGOUDA T. PATIL<br>yes<br>-<br>940,8th b main, 3rd stage, 3rd block, Basaveshwara nagar, Bangalore 560079 |
| 6. | Name and Address :<br>of individuals who own the News Paper and Partners or shareholders holding more than one percent of the total capital | ADANAGOUDA T. PATIL<br>owned by individual<br>ADANAGOUDA T. PATIL |

I, ADANAGOUDA T. PATIL hereby declare that the particulars given above are true to the best my knowledge and belief

BANGALORE

DATE : 1-3-1997

Sd/-
ADANAGOUDA T. PATIL

# ಜೀವನಾಡಿಯ ಚಿಹ್ನೆ




ಜೀವನಾಡಿ ಜನಸಾಮಾನ್ಯರಿಗೆ ವೈದ್ಯಕೀಯ ಜ್ಞಾನವನ್ನು ನೀಡಲೆಂದೇ ಹುಟ್ಟಿರುವ ಪತ್ರಿಕೆ. ಹಾಗಾಗಿ ನಮ್ಮ ಪತ್ರಿಕೆ ವೈದ್ಯಕೀಯ ಪತ್ರಿಕೆ ಎಂದು ಸುಲಭವಾಗಿ ಗುರುತಿಸಲು ಬರುವಂತೆ ಒಂದು ಚಿಹ್ನೆಯನ್ನು ಬಳಸಬೇಕು ಎಂಬ ಮಾತು ನಮ್ಮಲ್ಲಿ ಬಂದಿತು. ಎಲ್ಲರೂ + ಚಿಹ್ನೆ ಬಳಸೋಣ ಎಂದರು. ಬಿಳಿಯ ಹಿನ್ನಲೆಯಲ್ಲಿರುವ ಪ್ಲಸ್ ಚಿಹ್ನೆಯು, ವೈದ್ಯಕೀಯಕ್ಕೆ ಸಂಬಂಧಪಟ್ಟಂತಹುದು ಎಂಬುದನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಅಲ್ಲದೇ ಇದು ಜನಸಾಮಾನ್ಯರಿಗೆಲ್ಲ ತಿಳಿಯುತ್ತದೆ ಎಂದು ಅಭಿಪ್ರಾಯಪಟ್ಟರು. ಬಹುಜನರ ಅಭಿಪ್ರಾಯವನ್ನು ನಾನೂ ಒಪ್ಪಿದೆನಾದರೂ, ಅದನ್ನು ಬಳಸುವ ಮೊದಲು ಅದರ ಹಿನ್ನೆಲೆಯನ್ನು ಪರಿಶೋಧಿಸಿದೆ. ಆಗ ತಿಳಿದು ಬಂದಿತು. ಕೆಳಗಿನ ವಿಷಯ. ನಮಗರಿವಿಲ್ಲದಂತೆಯೇ ಕಾನೂನು ವಿರುದ್ಧವಾದ ಕೆಲಸವನ್ನು ಮಾಡುವುದು ಸ್ವಲ್ಪದರದಲ್ಲಿಯೇ ತಪ್ಪಿತು. ಈ ಮಾಹಿತಿ ಜನಸಾಮಾನ್ಯರಿಗೆ ತಿಳಿದಿರುವುದಿಲ್ಲ. ಬಹಳಷ್ಟು ವೈದ್ಯರಿಗೂ ತಿಳಿದಿಲ್ಲ. ಅದಕ್ಕೆಂದೇ ವಿವರಿಸುತ್ತಿದ್ದೇವೆ.

ರೆಡ್ ಕ್ರಾಸ್ ಚಿಹ್ನೆಯನ್ನು ಬಳಸುವ ಹಕ್ಕು ಆ ದೇಶದ ಸೇನೆಯ ವೈದ್ಯಕೀಯ ಸಿಬ್ಬಂದಿಗೆ ಮಾತ್ರ ಸೀಮಿತವಾಗಿರುತ್ತದೆ. ರೆಡ್ ಕ್ರಾಸ್ ಚಿಹ್ನೆಗೆ ಸರಿಸಮಾನವಾಗಿ ಕೆಲವು ದೇಶಗಳಲ್ಲಿ ''ರೆಡ್ ಕ್ರೆಸೆಂಟ್'' ಬಳಸುತ್ತಾರೆ. ಇನ್ನು ಕೆಲವೆಡೆ ''ರೆಡ್ ಲಯನ್ ಅಂಡ್ ಸನ್'' ಬಳಸುತ್ತಾರೆ. ಈ ಚಿಹ್ನೆಗಳೂ ಸಹ ಆಯಾ ದೇಶದ ಸೇನಾ ವೈದ್ಯರ ಅಧಿಕೃತ ಚಿಹ್ನೆಯಾಗಿರುತ್ತವೆ.

ರೆಡ್ ಕ್ರಾಸ್ ಮತ್ತು ಇತರ ಚಿಹ್ನೆಗಳನ್ನು ಬಳಸುವ ಹಕ್ಕು ಸೇನಾ ವೈದ್ಯರಿಗೆ ಮಾತ್ರ ಇರುತ್ತದೆ ಎಂಬ ಕಾಯ್ದೆಯು ''ಜಿನೇವ ಒಡಂಬಡಿಕೆಯ ಕಾಯ್ದೆ -೧೯೬೦'' ರಲ್ಲಿ ಬರೆದಿದೆ. ಭಾರತವೂ ಸಹ ಈ ಕಾಯ್ದೆಗೆ ಬದ್ಧವಾಗಿ ನಡೆದುಕೊಳ್ಳುತ್ತಿದೆ. ಈ ಕಾಯ್ದೆಯ ಸೆಕ್ಷನ್ ೧೨- ''ರೆಡ್ ಕ್ರಾಸ್ ಮತ್ತು ಇತರ ಚಿಹ್ನೆಗಳನ್ನು ಆ ದೇಶದ ಸೇನಾ ವೈದ್ಯರು ಮಾತ್ರ ಬಳಸಬೇಕು. ಇತರರು ಬಳಸಬೇಕಾದರೆ, ಸರ್ಕಾರದ ಅನುಮತಿಯನ್ನು ಪಡೆಯಬೇಕು'' ಎನ್ನುತ್ತದೆ.

ಈ ಕಾಯ್ದೆಯ ಸೆಕ್ಷನ್ ೧೩- ''ರೆಡ್ ಕ್ರಾಸ್ ಮತ್ತು ಇತರ ಚಿಹ್ನೆಗಳನ್ನು ಸರ್ಕಾರದ ಅನುಮತಿಯಿಲ್ಲದೆ ಬಳಸುವವರು ಶಿಕ್ಷಾರ್ಹರು. ಅವರಿಗೆ ಸರ್ಕಾರವು ರೂ.೫೦೦/- ದಂಡ ವಿಧಿಸಿ, ಆ ಚಿಹ್ನೆಯನ್ನು ಬಳಸಿರುವ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳಬಹುದು'' ಎನ್ನುತ್ತದೆ.

ಈಗ ಓದುಗರು ಪ್ರಶ್ನಿಸಬಹುದು. ಈ ದೇಶದ ಯಾವುದೇ ಕ್ಲಿನಿಕ್ ನೋಡಿ, ಔಷಧದ ಅಂಗಡಿ ನೋಡಿ, ನರ್ಸಿಂಗ್ ಹೋಂ ನೋಡಿ, ಆಸ್ಪತ್ರೆ ನೋಡಿ- ಅವರು ರೆಡ್ ಕ್ರಾಸ್ ಚಿಹ್ನೆಯನ್ನು ಹಾಕಿಕೊಂಡಿರುತ್ತಾರೆ. ಅಷ್ಟೆಲ್ಲ ಏಕೆ...ಅನೇಕ ವೈದ್ಯರು ತಮ್ಮ ವಿಸಿಟಿಂಗ್ ಕಾರ್ಡಿನ ಮೇಲೆ, ಪ್ರಿಸ್ಕ್ರಿಪ್ಷನ್‌ಗಳ ಮೇಲೆ, ಕಾರಿನ ಮೇಲೆ ರೆಡ್ ಕ್ರಾಸ್ ಚಿಹ್ನೆ ಹಾಕಿಕೊಂಡಿರುತ್ತಾರಲ್ಲ, ಅವರಿಗೆ ಅನ್ವಯಿಸುವುದಿಲ್ಲವೆ ಈ ಕಾಯ್ದೆ? ಎಂದು. ಈ ಸಂದೇಹಕ್ಕೆ ಸ್ಪಷ್ಟ ಉತ್ತರವಿದೆ. ಅವರು ಕಾನೂನಿಗೆ ವಿರುದ್ಧವಾಗಿ ರೆಡ್ ಕ್ರಾಸ್ ಚಿಹ್ನೆಯನ್ನು ತಿಳಿದೋ, ತಿಳಿಯದೆಯೋ ಬಳಸುತ್ತಿದ್ದಾರೆ. ಸರ್ಕಾರ ಇಚ್ಛಿಸಿದಲ್ಲಿ ಅವರ ವಿರುದ್ಧ ಕಾನೂನಿನ ಕ್ರಮವನ್ನು ತೆಗೆದುಕೊಳ್ಳಬಹುದು.




ನಮ್ಮ ಪತ್ರಿಕೆಗೆ ರೆಡ್ ಕ್ರಾಸ್ ಚಿಹ್ನೆಯನ್ನು ಬಳಸುವಂತಿಲ್ಲ ಎಂಬುದು ಖಚಿತವಾದ ಮೇಲೆ ಇತರ ಚಿಹ್ನೆಯನ್ನು ಹುಡುಕುವ ಪ್ರಯತ್ನ ನಡೆಸಿದೆವು. ಆಗ ನಮಗೆ ಸರ್ಪ ಚಿಹ್ನೆ (ದಿ ಎಂಬ್ಲಂ ಆಫ್ ಸರ್ಪೆಂಟ್) ದೊರೆಯಿತು. ಆ ಸರ್ಪ ಚಿಹ್ನೆಯ ಕಥೆ ಕುತೂಹಲಕಾರವಾಗಿದೆ.

ಬಹಳ ಜನರು ವೈದ್ಯ ಚಿಹ್ನೆ ''ಕಾಡೀಶಿಯಸ್'' ಎಂದು ಭಾವಿಸಿದ್ದಾರೆ. ಕಾಡೀಶಿಯಸ್ ಎಂದರೆ ''ಬುಧನ ದಂಡ'' (ದಿ ಸ್ಟಾಫ್ ಆಫ್ ಮರ್ಕ್ಯುರಿ) ಈ ಚಿಹ್ನೆಯಲ್ಲಿ ಒಂದು ಕೋಲಿರುತ್ತದೆ, ಆ ಕೋಲನ್ನು ಎರಡು ಹಾವುಗಳು ಸುತ್ತಿಕೊಂಡಿರುತ್ತವೆ ಹಾಗೂ ಆ ಕೋಲಿಗೆ ಎರಡು ರೆಕ್ಕೆಗಳಿರುತ್ತವೆ. ಇದು ಬುಧನ ಮಂತ್ರದಂಡ. ಬುಧ ವೈದ್ಯಕೀಯಕ್ಕಿಂತ ವಿಜ್ಞಾನಕ್ಕೆ ಹೆಚ್ಚು ಸಂಬಂಧಿಸಿದ ವ್ಯಕ್ತಿ. ಹಾಗಾಗಿ ವಿಜ್ಞಾನಿಗಳು ನಿಜವಾಗಿಯೂ ಈ ಚಿಹ್ನೆಯ ಹಕ್ಕುದಾರರು. ವೈದ್ಯರಲ್ಲ.

ವೈದ್ಯರ ನಿಜವಾದ ಚಿಹ್ನೆಯೆಂದರೆ ''ಆಸ್ಕ್ಲೆಪಿಯಸನ ಸರ್ಪದಂಡ'' (ದಿ ಸರ್ಪೆಂಟ್ ಸ್ಟಾಫ್ ಆಫ್ ಆಸ್ಕ್ಲೆಪಿಯಸ್) ಈ ಚಿಹ್ನೆಯಲ್ಲಿ ಮರವೊಂದರಿಂದ ಮುರಿದ ಕೊಂಬೆ ಇರುತ್ತದೆ. ಈ ಕೊಂಬೆಯನ್ನು ಒಂದೇ ಒಂದು ಹಾವು ಸುತ್ತುವರಿದಿರುತ್ತದೆ.

ಗ್ರೀಕ್ ಸಂಸ್ಕೃತಿಯ ಪ್ರಕಾರ ಆಸ್ಕ್ಲೆಪಿಯಸ್ ವೈದ್ಯದೇವತೆ (ನಮ್ಮಲ್ಲಿ ಧನ್ವಂತರಿ ಇದ್ದಂತೆ). ಈತ ಅಪೋಲೊ ಮತ್ತು ಕೊರೋನಿಸಳ ಮಗ. ಈತನಿಗೆ ವೈದ್ಯ ವಿದ್ಯೆಯನ್ನು ಕಲಿಸಿಕೊಟ್ಟವನು ಸೆಂಟಾರ್ ಚಿರಾನ್. ದೇವತೆಗಳ ರಾಜ ಸ್ಯೂಸ್ (ನಮ್ಮ ದೇವೇಂದ್ರನಂತೆ) ನಿಗೆ ಈ ಆಸ್ಕ್ಲೆಪಿಯಸ್ ತನ್ನ ವೈದ್ಯ ಜ್ಞಾನದ ನೆರವಿನಿಂದ ಎಲ್ಲ ಮನುಷ್ಯರನ್ನು ಅಮರರನ್ನಾಗಿ ಮಾಡಿಬಿಡಬಹುದು ಭಯವಾಗುತ್ತದೆ. ಅದರಿಂದ ತನ್ನ ಸ್ಥಾನಕ್ಕೆ ಚ್ಯುತಿಯಾಗಬಹುದು ಎಂದು ಭಾವಿಸಿ ಅವನನ್ನು ಸಿಡಿಲಿನಿಂದ (ವಜ್ರಾಯುಧದಿಂದ) ಕೊಲ್ಲುತ್ತಾರೆ.

ನಿಜಕ್ಕೂ ಹೇಳಬೇಕಾದರೆ ಮುರಿದ ಕೊಂಬೆಯೊಂದೇ ವೈದ್ಯಕೀಯದ ಚಿಹ್ನೆ. (ಬಹುಶಃ ಆರಂಭದಲ್ಲಿ ಔಷಧಗಳೆಲ್ಲ ಸಸ್ಯ ಮೂಲದವೇ ಆಗಿದ್ದಿರಬಹುದು-ಹಾಗಾಗಿ ಕೊಂಬೆಯೇ ಚಿಹ್ನೆಯಾಗಿರಬಹುದು) ಅನಂತರ ಹಾವು ಸೇರಿರಬಹುದು ಎಂದು ಇತಿಹಾಸಕಾರರು ತರ್ಕಿಸುತ್ತಾರೆ.

ಪ್ರಾಚೀನ ಕಾಲದಲ್ಲಿ ಸರ್ಪವು ಮೂರು ಗುಣಗಳ ಸಂಕೇತವಾಗಿತ್ತು. ಅವು ಎಚ್ಚರಿಕೆ (ಕಾಶನ್) ದೂರ ದೃಷ್ಟಿ, (ಫೋರ್ ಸೈಟ್) ಮತ್ತು ಜ್ಞಾನ (ವಿಸ್‌ಡಂ). ವೈದ್ಯನಾದವನಿಗೆ ಈ ಮೂರೂ ಗುಣಗಳು ಮೂಲಭೂತವಾಗಿ ಇರಲೇಬೇಕಿತ್ತು. ಅಲ್ಲದೆ ಹಾವು ನಿರಂತರ ಪುನರುಜ್ಜೀವನದ (ಎವರ್ ರೀ ನ್ಯೂವಿಂಗ್) ಸಂಕೇತವಾಗಿತ್ತು. ಜೊತೆಗೆ ಭುವಿಯ ಜೀವರಾಶಿ ಅವನಾಶಿ ಎಂಬುದನ್ನು ಸೂಚಿಸುತ್ತಿತ್ತು. ಹಾಗಾಗಿ ಬಹುಶಃ ನಂತರದ ದಿನಗಳಲ್ಲಿ ಕೊಂಬೆಯ ಸುತ್ತ ಸುತ್ತಿಕೊಂಡಿರುವ ಹಾವಿನ ಚಿಹ್ನೆ ಜಾರಿಗೆ ಬಂದಿತೆಂದು ಕಾಣುತ್ತದೆ. ಆದರೆ ಯಾವಾಗ, ಯಾರು ಈ ಹಾವನ್ನು ಕೊಂಬೆಯೊಂದಿಗೆ ಸೇರಿಸಿದರು ಎಂಬುದು ನಮಗೆ ತಿಳಿದು ಬಂದಿಲ್ಲ.

ಕಾಲಾಂತರದಲ್ಲಿ ವಿವಿಧ ದೇಶಗಳ ಜನರು ಈ ಎರಡೂ ಚಿಹ್ನೆಗಳ ಅರ್ಥವನ್ನು ನಿಖರವಾಗಿ ತಿಳಿಯದೆ ಅದಲು ಬದಲು ಮಾಡಿ ಬಳಸಿಕೊಂಡು ಬಂದಿದ್ದಾರೆ. ಕೆಲವರಂತೂ ಈ ಮೂಲ ಚಿಹ್ನೆಯನ್ನು ಬದಲು ಮಾಡಿ ಹೊಸ ಚಿಹ್ನೆಯನ್ನು ರೂಪಿಸಿಕೊಂಡಿದ್ದಾರೆ, ಇದಕ್ಕೆ ಅತ್ಯುತ್ತಮ ಉದಾಹರಣೆ ಅಮೆರಿಕದ ಸೇನಾ ವೈದ್ಯರು ರೂಪಿಸಿಕೊಂಡಿರುವ ಚಿಹ್ನೆ. ಹೀಗೆ ವೈವಿಧ್ಯಮಯ ಚಿಹ್ನೆಗಳನ್ನು ಇಂದು ಬಳಸುತ್ತಿದ್ದಾರೆ.

ನಾವು 'ಜೀವನಾಡಿಗೆ' ಮೂಲ ''ಆಸ್ಕ್ಲೆಪಿಯಸನ ಸರ್ಪದಂಡವನ್ನೇ'' ಚಿಹ್ನೆಯಾಗಿ ಬಳಸಬೇಕೆಂದು ನಿಶ್ಚಯಿಸಿದ್ದೇವೆ.

**ಗೌರವ ಸಂಪಾದಕ ಮಂಡಳಿ**

ಡಾ|| ಪಿ.ಎಸ್.ಶಂಕರ್, ಮುಂಬೈ
ಡಾ|| ವಸಂತ ಕುಲಕರ್ಣಿ, ಬಿಜಾಪುರ
ಡಾ|| ಅಶೋಕ ಪೈ, ಶಿವಮೊಗ್ಗ
ಡಾ|| ಎ.ವಿ. ರಾಂಪ್ರಸಾದ್ ಬೆಂಗಳೂರು.
ಡಾ|| ಸಿ.ಆರ್. ಚಂದ್ರಶೇಖರ್ ಬೆಂಗಳೂರು.
ಡಾ|| ಸಿ.. ಅನ್ನಪೂರ್ಣಮ್ಮ, ಬೆಂಗಳೂರು
ಡಾ|| ಶ್ರೀನಿವಾಸಗೌಡ, ಬೆಂಗಳೂರು
ಡಾ|| ಟಿ. ಎಸ್. ಸತ್ಯನಾರಾಯಣರಾವ್, ಮಂಡ್ಯ
ಡಾ| ಜಂಗಣ್ಣವರ್, ಹುಬ್ಬಳ್ಳಿ
ಡಾ|| ಕರವೀರಪ್ರಭು ಕ್ಯಾಲಕೊಂಡ, ಹುಬ್ಬಳ್ಳಿ
ಡಾ|| ಎಂ.ಜಿ. ಹಿರೇಮಠ, ಹುಬ್ಬಳ್ಳಿ
ಡಾ|| ಜಗದೀಶ್, ಹುಬ್ಬಳ್ಳಿ
ಡಾ|| ಪ್ರಭಾಕರ, ಹುಬ್ಬಳ್ಳಿ
ಡಾ|| ವಸಂತಕುಮಾರ್, ಮೈಸೂರು
ಡಾ|| ಉದೋಶಿ, ಅಮೆರಿಕ
ಡಾ|| ಶಿವಪ್ಪ ಹುಲಬನ್ನಿ, ಅಮೆರಿಕ
ಡಾ|| ಸತೀಶ್ ಜಿಗಜಿನ್ನಿ, ಬಿಜಾಪುರ
ಡಾ|| ಕೊಳೊಳಗಿ, ಗದಗ್
ಡಾ|| ಚಂದ್ರಪ್ಪ, ಶಿವಮೊಗ್ಗ

**ವ್ಯವಸ್ಥಾಪಕ ಸಂಪಾದಕರು/ ಪ್ರಕಾಶಕರು**

ಎ.ಟಿ.ಪಾಟೀಲ್

**ಸಂಪಾದಕರು**

ಡಾ|| ನಾ.ಸೋಮೇಶ್ವರ

**ಉಪ ಸಂಪಾದಕರು**

ಪೇರೂರು ಜಾರು

**ಗೌರವ ಸಲಹೆ**

ಡಾ|| ರಾಮಕೃಷ್ಣ,ಕವಿತಾಳ
ಡಾ|| ದೀಪಕ್, ಹಳದೀಪುರ ಬೆಂಗಳೂರು
ಡಾ|| ಪಂಪನಗೌಡ ಮಾಲಿಪಾಟೀಲ್, ಬೆಂಗಳೂರು
ಡಾ|| ಬಸವಪ್ರಭು, ಮಾನ್ವಿ

**ಆಡಳಿತ ನಿರ್ವಹಣೆ**

ಸುನೀಲ್‌ಕುಮಾರ್ ಎಸ್.ಪಾಟೀಲ್

**ಮುಖಪುಟ ವಿನ್ಯಾಸ**

ಸೆವೆನ್ ಸೀಸ್


# ಜೀವಧಾರೆ



**ಗೌರವ ಪ್ರಧಾನ ಸಂಪಾದಕರು : ಡಾ|| ಸ.ಜ. ನಾಗಲೋಟಿ ಮಠ**

## ಪ್ರತಿಕ್ರಿಯೆ

*'ದಿಕ್ಸೂಚಿ' ಗೆಳೆಯರ ಬಳಗ ಕನ್ನಡದ ಮಡಿಲಿಗೆ 'ಜೀವನಾಡಿ' ಆರೋಗ್ಯ ಪತ್ರಿಕೆಯನ್ನು ಉಡುಗೊರೆಯಾಗಿ ನೀಡಿದ್ದು ಈಗಾಗಲೇ ನಿಮಗೆ ವೇದ್ಯ. ಪ್ರಥಮ ಸಂಚಿಕೆಯ ಕುರಿತಂತೆ ಬಂದ ಪ್ರತಿಕ್ರಿಯೆಗಳು ನಮ್ಮನ್ನು ಹರ್ಷದ ಕಡಲಲ್ಲಿ ತೇಲಿಸಿವೆ. ಕರ್ನಾಟಕದ ಮೂಲೆ, ಮೂಲೆಯಿಂದಲೂ ಬಂದ ಸ್ಪಂದನ ನಮ್ಮ ಪ್ರಯತ್ನಕ್ಕೆ ಸಾಕಷ್ಟು ಇಂಬು ಕೊಟ್ಟಿದೆ. ವೈದ್ಯರು ತಮಗಿದೊಂದು ವೇದಿಕೆಯಾಯಿತೆಂದರೆ, ರೋಗಿಗಳು ಜೀವನಾಡಿಯ ಸಮೃದ್ಧ ವಿಷಯಕ್ಕೆ ಮೆಚ್ಚಿ, ತಮ್ಮ ಸಾಕಷ್ಟು ಅನಿಸಿಕೆಗಳನ್ನು ನಮ್ಮ ಮುಂದಿಟ್ಟಿದ್ದಾರೆ. ಇಷ್ಟೇ ಅಲ್ಲ ವಿಮರ್ಶಕರು ತಮ್ಮ ವಿಚಾರಗಳನ್ನು ತಿಳಿಸಿದ್ದಾರೆ. ಒಟ್ಟಿನಲ್ಲಿ ''ಈ ಪತ್ರಿಕೆಯ ಜನನದ ಅವಶ್ಯಕತೆ ಕನ್ನಡ ನಾಡಿನಲ್ಲಿತ್ತು'' ಎಂಬ ಅಂಶ ನಮಗೀಗ ಮನದಟ್ಟಾಗಿದೆ. ಪ್ರಾರಂಭದಲ್ಲಿ ಕಂಡು ಬಂದ ಕೆಲವು ದೋಷಗಳನ್ನು ಸರಿಪಡಿಸಿಕೊಂಡು ಮುನ್ನಡೆಯಲು ಕನ್ನಡಿಗರು ಆದೇಶವನ್ನಿತ್ತಿದ್ದಾರೆ. ನಮಗಿದೊಂದು ಹೆಮ್ಮೆ ಹಾಗೂ ತೃಪ್ತಿ. ನಾಡನುಡಿಯ ಸೇವೆ ಮಾಡಲು ನಮಗೆ ಹೆಚ್ಚಿನ ಶಕ್ತಿ ಬಂದಂತಾಗಿದೆ.*

*ಆದರೂ ಜೀವನಾಡಿ ಒಂದು ನೂತನ ಪ್ರಯೋಗ. ಪ್ರತಿ ತಿಂಗಳೂ ಅದರ ಅಭಿವೃದ್ಧಿಗೆ ನಾವು ನಮ್ಮ ಶಕ್ತಿ ಮೀರಿ ಪ್ರಯತ್ನಿಸುತ್ತಿದ್ದೇವೆ. ಒಂದು ಶಿಶು ಬೆಳವಣಿಗೆಯಾಗಬೇಕಾದರೆ ಹೇಗೆ ಮಾತಾ-ಪಿತರು ಅವಶ್ಯಕವೋ, ಹಾಗೆಯೇ ಜೀವನಾಡಿಯ ಭ್ರೂಣ ಬೃಹದೆತ್ತರಕ್ಕೆ ಬೆಳೆಯಲು ನಿಮ್ಮ ಹಾರೈಕೆ, ಮಾರ್ಗದರ್ಶನ ಅತ್ಯಗತ್ಯ. ಎಡವಿದಲ್ಲಿ ಕೈ ಹಿಡಿದು ನಡೆಸುವಿರೆಂಬ ನಂಬಿಕೆಯೊಡನೆ ನಾವು ಮುನ್ನುಗ್ಗುತ್ತಿದ್ದೇವೆ.*

*ವೈದ್ಯಕೀಯ ರಂಗದ ಅಂತರಂಗ - ಬಹಿರಂಗಗಳನ್ನು ತಮಗೆ ಪರಿಚಯಿಸಲು ಕಾಯಾ-ವಾಚಾ ಪ್ರಯತ್ನಿಸುವೆವು.*

*ಶುಭ ಹಾರೈಕೆಗಳೊಂದಿಗೆ,*

**ಸ.ಜ.ನಾಗಲೋಟಿಮಠ**

● ಟಿ. ತಿಪ್ಪೇರುದ್ರಪ್ಪ

# ಮಾದಕತೆಯನ್ನು ಮೂಡಿಸಿ



## ಮೋಹಕ ಪ್ರಸಾದನದ ಸಮಸ್ಯೆಗಳು

ಮುಂಜಾನೆದ್ದು ಕುಂಬಾರಣ್ಣ
ಹಾಲು ಬಾನುಂಡನಾ
ಹಾರ್‍ಯಾಡಿ ಮಣ್ಣ ತುಳಿದಾನಾ.......

ನಮ್ಮ ನಾಡಿನ ಜೀವನಾಡಿ ಹಳ್ಳಿಯ ಶ್ರಮಿಕರ ಕಾರ್ಯ ಹೀಗೆ ಯಾವುದೋ ಕಾರ್ಯದಿಂದ ಅವರ ದಿನ ಆರಂಭವಾಗುತ್ತದೆ. ನಗರಗಳಲ್ಲೂ ಶ್ರಮಿಕರದು ಇದೇ ಹಾಡೇ. ಆದರೆ ನಗರದ ನಗರೀಕರಣ ದಾಳಿಯಲ್ಲಿ ನಲುಗಿದ ಸ್ತ್ರೀಯರು ಭಾರತೀಯ ಸದ್ಗೃಹಿಣಿಯಂತೆ ಗಂಡ- ಮಕ್ಕಳನ್ನು ಆ ದಿನಕ್ಕೆ ಸಿದ್ಧಪಡಿಸುವ ಹೊಣೆ, ಅವರ ಊಟ ಉಣಿಸಿನ ಜವಾಬ್ದಾರಿಯೊಡನೆ ಆರಂಭವಾಗುತ್ತದೆ. ಬಿಡುವಿಲ್ಲದ ಮುಂಜಾನೆಯ ಕ್ಷಣ ಕ್ಷಣಗಳನ್ನು ಬಳಸಿ, ಬಳಲಿಕೆಯಿಂದ ಹೊರ ಬರುವಷ್ಟರಲ್ಲಿ ಭಾರತದ ಮಧ್ಯಮ ವರ್ಗದ ನಾರಿ ಬರೀ ನಾರಾಗಿರುತ್ತಾಳೆ. ಗ್ರಾಮಾಂತರದಲ್ಲೂ ಸರಿ ಸುಮಾರು ಇದೇ ಮುಂಜಾನೆಯ ದೈನಂದಿನ ಚಿತ್ರ ಕಾಣಸಿಗುತ್ತದೆ. ಮೇಲ್ಮಧ್ಯಮ ವರ್ಗ ಮತ್ತು ಶ್ರೀಮಂತರು, ಕಾಲೇಜು ವಿದ್ಯಾರ್ಥಿ/ ವಿದ್ಯಾರ್ಥಿನಿಯರು, ಕಛೇರಿ/ ಕಾರ್ಖಾನೆಯ ಕೆಲಸಗಳಿಗೆ ಹಾಜರಾಗುವ ಪುರುಷ/ ಸ್ತ್ರೀಯರ ಸಮಸ್ಯೆಗಳೇ ಬೇರೆ. ಪ್ರಪಂಚದಾದ್ಯಂತ ಇವರೆಲ್ಲ ಸರಿ ಸುಮಾರು ಒಂದೇ ಮುಂಜಾನೆಯ/ ಸಂಜೆಯ ಸಮಸ್ಯೆಯಲ್ಲಿ ತಾವಾಗಿಯೇ ನುಸುಳುತ್ತಾರೆ, ಸಿಕ್ಕಿ ಹಾಕಿಕೊಳ್ಳುತ್ತಾರೆ. ಹಲವಾರು ವೈಯಕ್ತಿಕ ಮತ್ತು ಕೌಟುಂಬಿಕ ಸಮಸ್ಯೆಗಳಿಗೆ ಗ್ರಾಸವಾಗುತ್ತಾರೆ.

ಕೋಟ್ಯಾಂತರ ಮಹಿಳೆಯರ ಮುಂಜಾನೆಯ ಪ್ರಮುಖ ಸಮಸ್ಯೆ ಎಂದರೆ ಆ ದಿನಕ್ಕಾಗಿ ತಮ್ಮನ್ನು ಅಲಂಕರಿಸಿಕೊಳ್ಳುವ ಪಿಡುಗಿನ ದಾಳಿಯ ಒತ್ತಡಕ್ಕೆ ಇವರು ತುತ್ತಾಗುತ್ತಾರೆ.

### ೧. ಕೇಶ ಶೃಂಗಾರ



ಕೇಶ ಶೃಂಗಾರಕ್ಕೆ ಬಹು ಪಾಲು ಸಮಯ ವ್ಯಯವಾಗುತ್ತದೆ. ತಮ್ಮ ಕೂದಲನ್ನು ಹೀಗೆ ಬಣ್ಣ ಬದಲಾವಣೆಗೆ ಒಡ್ಡಿ, ಬ್ಲೀಚಿಂಗ್ (ಡೈಯಿಂಗ್) ಮಾಡುವುದರಿಂದ ಕೂದಲು ಆರ್ದ್ರತೆಯನ್ನು ಕಳೆದುಕೊಳ್ಳುತ್ತವೆ. ಅವರ ಕೂದಲುಗಳನ್ನು ಗಡುಸಾಗಿಸಿ ತುಂಡಾಗಿಸುತ್ತದೆ. ಜಲಾಂಶ ಕಳೆದುಕೊಂಡ ಕೂದಲು ತನ್ನ ಸತ್ವವನ್ನು ಕಳೆದುಕೊಳ್ಳುತ್ತದೆ. ನಿಧಾನವಾಗಿ ಪದೇ ಪದೇ ಈ ದಾಳಿಯಿಂದ ಕೂದಲು ಉದರಲಾರಂಭಿಸುತ್ತವೆ.

### ೨. ಹಿಮ್ಮಡಿಯನ್ನು ಎತ್ತರಿಸುವ ಪಾದರಕ್ಷೆಗಳು



ಹಿಮ್ಮಡಿಯನ್ನು ಎತ್ತರಿಸುವ, ಪಾದರಕ್ಷೆಗಳ ಬಳಕೆ ಅವರ ನಿಲುವನ್ನು ಅಂದವಾಗಿಸುತ್ತದೆ.

**ಕೋಟ್ಯಾಂತರ ಮಹಿಳೆಯರ ಪ್ರತಿ ಮುಂಜಾನೆಯ ಬಹು ಪ್ರಿಯವಾದ ಹವ್ಯಾಸವೆಂದರೆ ತಮ್ಮನ್ನು ಅಲಂಕರಿಸಿಕೊಳ್ಳುವುದು. ಈ ಅಲಂಕಾರದ ಹಿಂದಿನ ಪ್ರಮುಖ ಸಮಸ್ಯೆಗಳೇನು? ಇತ್ಯಾದಿ ಕುರಿತಂತೆ ಒಂದು ಸಂಕ್ಷಿಪ್ತ ಅಧ್ಯಯನ.**

ಇದು ಪಾಶ್ಚಾತ್ಯರ ನಂಬಿಕೆ. ಇದು ಪ್ರಾಯವನ್ನು ಕಿರಿದಾಗಿಸುವುದೆಂದು ಅವರ ಅನಿಸಿಕೆ. ತಮ್ಮ ಬಾಹುಗಳ ಅವಲಂಬನೆ ಅವಶ್ಯಕತೆಯನ್ನು ಪುರುಷರು ಕೋರುತ್ತಾರೆನ್ನುವ ಬಯಕೆ. ತಮ್ಮ ದೇಹದ ಸಮತೋಲನವನ್ನು ಕಾಯ್ದುಕೊಂಡು ನಡೆಯಲು ಅವರಿಗೆ ಸರ್ಕಸ್ಸಿನ ಸಾಹಸಕ್ಕಿಳಿಯ ಬೇಕಾಗುತ್ತದೆ. ಅವರ ನಡೆ ಅಸಹಜವೆನಿಸುತ್ತದೆ. ಅವರ ಪಾದ, ನೀಳ್ಗಾಲುಗಳು ಕ್ರಮೇಣ, ಅಂದ ಕಳೆದುಕೊಳ್ಳುತ್ತವೆ. ಧಡೂತಿ ಹೆಂಗಸರೇನಾದರೂ ಈ ಸಾಹಸಕ್ಕಿಳಿಸಿದರೆ ಅವರಿಗುಂಟಾಗುವ ಮಾನಸಿಕ ಹಿಂಸೆ ಅವರಿಂದಲೇ ನೀವು ಅರಿಯ ಬೇಕಷ್ಟೆ.

**೩. ಕಾಂಟ್ಯಾಕ್ಟ್ ಲೆನ್ಸ್**



ಸುಲೋಚನ ಧರಿಸದ ಸುಲೋಚನೆ ಪುರುಷರ ಅವಕೃಪೆಗೆ ಒಳಗಾಗುತ್ತಾಳೆ. ಅವಳ ಪ್ರಾಯದ ಅಳತೆ ಮೀರಿದಂತಿರುತ್ತದೆ ಎನ್ನುವ ಭ್ರಮೆಯಿಂದ, ತನಗೆ ಸಮ್ಮಾನ ನೀಡುವ ಕನ್ನಡಕವನ್ನು ಬಿಟ್ಟು ತನ್ನ ವಯಸ್ಸನ್ನು ಮರೆ ಮಾಚಲು ಯುವ ಪೀಳಿಗೆ ಸಿದ್ಧವಾಗುತ್ತಿದೆ. ಕಣ್ಣಿನೊಳಗಿನ ಕನ್ನಡಕ (Contect Lens) ಈಗ ಅವರಿಗೆ ತಮ್ಮ ಐಬನ್ನು ಮರೆ ಮಾಚುವ ಸಮ್ಮೋಹಿನಿ ಎನಿಸಿದೆ. ಇವುಗಳನ್ನು ಧರಿಸಿದವರು ಈ ಕಣ್ಣಿನಯವ ಗಳತ್ತ ಸದಾ ಜಾಗರೂಕರಿರಬೇಕು. ದಿನನಿತ್ಯ ಶುದ್ಧಿ ಗೊಳಿಸಬೇಕು. ಮರೆತರೆ, ಕಣ್ಣಿನಲ್ಲಿ ಹುಣ್ಣು ಖಚಿತ. ಇದು ಇವರಿಗೆ ದುಸ್ವಪ್ನಕಾರಿ. ಊಟದ ಮನೆಯಲ್ಲಿ ಉದುರಿ ಬಿದ್ದ ಈ ಗಾಜಿನ ಯವ ಗಳನ್ನು ಹುಡುಕುವ ಅವಮಾನದ ಗೊಂದಲಕ್ಕೆ ಸಿಕ್ಕಿ ಆ ಸಂದರ್ಭದಿಂದ ಪಾರಾಗುವುದೇ ಭೀಕರ ಸಮಸ್ಯೆ ಎನಿಸುತ್ತಿದೆ.

**೪. ಮುಖಾಲಂಕಾರ**

ಇನ್ನಷು ಅಂದವಾಗಿ ಚೈತನ್ಯ ಚಿಲುಮೆಯಂತೆ ಆಕರ್ಷಕವಾಗಿ ಕಾಣಲು ಮುಖಾಲಂಕಾರಕ್ಕಾಗಿ ಮಾರುಕಟ್ಟೆಯಲ್ಲಿ ಹಲವಾರು ಲೇಪನ (ಕ್ರೀಂ)



ಗಳಿವೆ. ಇವುಗಳನ್ನು ಬಳಸಲಾರಂಭಿಸಿದರೆ, ನಿಮ್ಮ ಹೊರ ಚರ್ಮದ ಪೂರೆ ನಾಶ ಖಂಡಿತ. ಇದಕ್ಕಾಗಿ ಶಸ್ತ್ರ ಚಿಕಿತ್ಸೆ ಮಾಡಿಸಿಕೊಂಡರೂ ನಿಮ್ಮ ಮುಖ, ಕಮಲದ ಚರ್ಮದಲ್ಲಿನ ವರ್ಣದ್ರವ್ಯಗಳು ಒಂದೇ ಸಮನಾಗಿ ಹರಡದೆ ಅಲ್ಲಲ್ಲಿ ಪಟ್ಟಿಗಳನ್ನು ಮೂಡಿಸುತ್ತವೆ. ಕಲೆಗಳು ಆಳವಾಗಿ ಕಾಣತೊಡಗುತ್ತವೆ.

**೫. ಸೂರ್ಯ ಸ್ನಾನ**

ಸೂರ್ಯ ಸ್ನಾನ ಮಾಡುವ ಪಾಶ್ಚಾತ್ಯರಿಗಂತೂ ಈ ಸ್ನಾನ ಪ್ರತಿಕೂಲಪರಿಸ್ಥಿತಿಯನ್ನುಂಟು ಮಾಡುತ್ತದೆ. ಆರೋಗ್ಯ ಪುಷ್ಟಿ ಚರ್ಮದ ಬದಲು ಬಣ್ಣಕಳೆದು ಕಳೆಗುಂದಿದ ಚರ್ಮಾವತರಣ ದೇಹ ವನ್ನು ತುಂಬುತ್ತದೆ, ಕೇಶ ಸೌಂದರ್ಯ ಕುಂದುತ್ತದೆ. ಕಣ್ಣು ಮತ್ತು ತುಟಿಗಳು ಅಂದಗೆಡುತ್ತವೆ. ಸೂರ್ಯ ಸ್ನಾನ ಚರ್ಮದ ಕ್ಯಾನ್ಸರಿನ ಎಚ್ಚರಿಕೆಯ ಗಂಟೆಯನ್ನು ಮೊಳಗಿಸುತ್ತದೆ. ಜೀವಂತ ಚರ್ಮ ಹೆಣದ ಕಳೆಯನ್ನು ಬೀರುತ್ತದೆ. ಸೂರ್ಯನ ಅತಿ ನೇರಳೆ ಕಿರಣಗಳೂ ಕ್ಯಾನ್ಸರನ್ನುಂಟು ಮಾಡುತ್ತವೆ.

**೬. ಸುಗಂಧ ದ್ರವ್ಯಗಳು**

ಇತರೆ ಪ್ರಾಣಿಗಳಂತೆ ಮಾನವ ಕೂಡ ಇಷ್ಟ ವಾದ ಗಂಧಗಳಿಂದ ಆಕರ್ಷಿತನಾಗುತ್ತಾನೆ. ಸುಗಂಧ ದ್ರವ್ಯಗಳು ಆದಿಯಿಂದಲೂ ಕಾಮೋತ್ತೇಜಕವೆನಿಸಿವೆ. ಈ ಬಹುಪಾಲು ಸುಗಂಧ ಗಳನ್ನು ಪ್ರಾಣಿಗಳ ಗ್ರಂಥಿಗಳಿಂದ ತಯಾರಿಸಲಾಗುತ್ತದೆ (ಕಸ್ತೂರಿ ಮೃಗ ಇತ್ಯಾದಿ). ಕೆಲವರಲ್ಲಿ ಸೂರ್ಯನ ಬೆಳಕಿನೊಡನೆ ಪ್ರತಿ ಕ್ರಿಯಿಸಿ ಕೆಲವು ಈ ಸುಗಂಧಗಳು ಅಲರ್ಜಿಯನ್ನುಂಟು ಮಾಡುತ್ತವೆ. ಸೂಕ್ಷ್ಮ ದೇಹಿಗಳಲ್ಲಿ ಇವು ಕೆಲ ಬಗೆಯ ವರ್ಣ ದ್ರವ್ಯದ ದಟ್ಟಗಳನ್ನು ಮೂಡಿಸಿ ಕುತ್ತಿಗೆ, ಮುಖವನ್ನು ವಿರೂಪಗೊಳಿಸುತ್ತವೆ.

**೭. ಬಿಗಿಉಡುಪುಗಳು**



ಯುವ ಪೀಳಿಗೆಯ ಆದರ್ಶ ಉಡುಗೆ ಟೈಟ್ ಪ್ಯಾಂಟ್‌ಗಳು ಕಟ್ಟು ಮಸ್ತಾದ ಯೌವನವನ್ನು ಪ್ರದರ್ಶಿಸುವ ಹಂಬಲ. ಇದರ ಪರಿಣಾಮ ವೃಷಣಗಳು ಒತ್ತಲ್ಪಡುತ್ತವೆ. ದೇಹದಲ್ಲಿ ಅತ್ಯಂತ ತಂಪಾಗಿರಬೇಕಾದ ಪ್ರದೇಶ ಬಿಸಿಯಾಗುತ್ತದೆ. ಇದರಿಂದ ಟೆಸ್ಟಿಸ್ಟೆರೋನ್‌ನ ಮಟ್ಟವನ್ನು ಕಡಿಮೆ ಮಾಡುತ್ತವೆ. ವೀರ್ಯದಲ್ಲಿನ ರಜೋ ಕಣಗಳ ಸಂಖ್ಯೆಯನ್ನು ಕಡಿತಗೊಳಿಸುತ್ತದೆ. ವೃಷಣ ಕ್ಯಾನ್ಸರಿಗೆ ಕಾರಣವಾಗುತ್ತವೆ. ಸುದೀರ್ಘ ಕಾಲ ಕುಳಿತು ಕಾರ್ಯ ನಡೆಸುವ ವಾಹನ ಚಾಲಕರಿಗೆ ಇದೊಂದು ಶವದ ಉಡುಗೆಯೇ ಸರಿ.

**೮. ಕಣ್ಣಿನ ಸೌಂದರ್ಯವರ್ಧಕಗಳು**

ಎಚ್ಚರಿಕೆಯಿಂದ ತಿದ್ದಿಕೊಂಡರೆ ಕಣ್ಣಿನ ಅಲಂಕಾರ ಸಾಮಗ್ರಿಗಳು ಕಣ್ಣಿನ ಸೌಂದರ್ಯ ವನ್ನು ವರ್ಧಿಸುತ್ತವೆ ನಿಜ. ಮಕ್ಕಳ ಕಣ್ಣಿನಂತೆ ಕಾಂತಿಯುಕ್ತವಾಗಿ ತೋರುತ್ತವೆ. ಪ್ರಾಣಿ ವರ್ತನ ಶಾಸ್ತ್ರಜ್ಞರ ಪ್ರಕಾರ ತುಟಿಯ ರಂಗು ಭಗೋಷ್ಠದ ನಕಲಿನಂತಿರುವುದರಿಂದ ಕಾಮ ಉತ್ತೇಜಕವೆನಿಸುತ್ತವೆ. ಇದು ಮಾನವ ಪ್ರಾಣಿಗಳಿಗೆ ಸೂಕ್ತವಲ್ಲ. ಇವು ಸಾಮಾನ್ಯವಾಗಿ ಒಗ್ಗದೆ (ಅಲರ್ಜಿ) ಬಕ್ಕೆಗಳು, ಕೆರೆತಗಳನ್ನುಂಟುಮಾಡುತ್ತವೆ.

**೯. ಹೆಣ್ಣಿನ ಮೈ ಮೇಲಿನ ರೋಮಗಳು**

ಪಾಶ್ಚಾತ್ಯರಲ್ಲಿನ ಪ್ರಮುಖ ಸಮಸ್ಯೆಯೆಂದರೆ ಹೆಣ್ಣಿನ ಮೇಲಿನ ರೋಮಗಳನ್ನು ಸಹಿಸದಿರುವಂತಹ ಮನೋಭಾವ. ಇದಕ್ಕಾಗಿ



ಅವರು ಪಡುವ ಪಾಡು ಕನಿಕರ ಹುಟ್ಟಿಸುವಂತ ಹದು (ಭಾರತೀಯ ಹೆಣ್ಣು ಮಕ್ಕಳೂ ಈ ಗೀಳಿಗೆ ಬೀಳುತ್ತಿದ್ದಾರೆ) ರೋಮ ಗ್ರಂಥಿಗಳಲ್ಲಿನ ರಾಸಾಯನ, ಚರ್ಮದ ರಕ್ಷಣೆಯಲ್ಲಿ ಪಾಲುಗಾರ. ಚರ್ಮ ರೋಮಗಳನ್ನು ಹೊರತೆಗೆಯುವುದರ ಪರಿಣಾಮ ತೀವ್ರ ರೀತಿಯದಾಗಿರುತ್ತದೆ. ಯಾವುದೇ ರೀತಿಯಲ್ಲಿ ರೋಮ ನಿವಾರಣೆಗೆ ಪ್ರಯತ್ನಿಸಿದರೂ ಉಳಿದ ಕೂದಲಿನ ಗಾತ್ರ ಹೆಚ್ಚುತ್ತದೆ.

### ೧೦.ಚರ್ಮದ ಮೇಲ್ಲಿನ ನೆರಿಗೆಗಳು

ಚರ್ಮದ ನೆರಿಗೆಗಳನ್ನು ತೊಡೆಯಲು ಲೇಪನಗಳ ಬಳಕೆ ಮಾಡುತ್ತಾರೆ. ದೇಹ ಒಂದು ಯಂತ್ರವಲ್ಲ. ಇದರಲ್ಲಿ ನೀವು ಗಳಿಸಿದ್ದು, ಉಳಿಸಿದ್ದು ಹಾಗೂ ಬಳಸಿಕೊಳ್ಳುವುದರ ಸಮತೋಲನದ ಲೆಕ್ಕಚಾರ ಮಾತ್ರ ಸಾಧ್ಯ. ಬ್ಯಾಂಕಿನಲ್ಲಿ ಉಳಿಸಿದ ಖಾತೆಯಿಂದ ಹಣ ತೆಗೆಯುವ ಪ್ರಯತ್ನ ನಿಮ್ಮದಾಗುತ್ತದೆ. ವಿಟಮನ್ 'ಎ' ಯನ್ನು ಬಳಸಿ ಕೆಲವರು ಪ್ರಯತ್ನಿಸಿ ದರೂ ಇದು ಯಶ ಕಾಣದ ಪ್ರಯತ್ನವಷ್ಟೇ. ಹಲವಾರು ಉತ್ಪನ್ನಗಳು ತಾವು ಜಾಹಿರಾತುಗಳ ಮೂಲಕ ಸೆಳೆದರೂ, ಈ ಪ್ರಯತ್ನದಿಂದ ದೂರವಿರುವುದೇ ಉತ್ತಮ.

### ೧೧. ಸ್ತ್ರೀಯರ ಒಳ ಉಡುಪುಗಳು



ಸ್ತ್ರೀಯರ ಒಳ ಉಡುಪು, ಮೊಲೆಕಟ್ಟುಗಳು ಅಂದ ಹೆಚ್ಚಿಸಿಕೊಳ್ಳಲು ಎಲ್ಲರೂ ಬಳಸುತ್ತಿದ್ದಾರೆ. ಸಾಮಾನ್ಯವಾಗಿ ಇವು ಅಪಾಯಕಾರಿಗಳಲ್ಲ. ಆದರೆ ಹೊಂದಿಕೆಯಾಗದ ಅಳತೆಯ ಬ್ರಾಗಳನ್ನು ಧರಿಸಿದರೆ, ಅದು ಚರ್ಮದ ಮೇಲೆ ಪಟ್ಟಿಯ ಗುರುತನ್ನು ಬಿಡುತ್ತದೆ. ಏರಿಕಟ್ಟುವುದರಿಂದ ಕುತ್ತಿಗೆ ನೋವು ಮತ್ತು ಭುಜಗಳ ನೋವನ್ನುಂಟು ಮಾಡುತ್ತದೆ.

### ೧೨.ಹಚ್ಚೆ ಹಾಕಿಸುವುದು (Tatsous)

ಹಚ್ಚೆ ಹಾಕಿಸುವುದು ದೇಹಾಲಂಕರಣದ ಪುರಾತನ ಕಲೆ. ಇದು ರತಿ ವರ್ಚಸ್ಸನ್ನು ಹೆಚ್ಚಿಸುವುದೆಂಬ ನಂಬಿಕೆ ಎಲ್ಲ ಜನಾಂಗದಲ್ಲಿದೆ. ಒಬ್ಬ



ಪತಿಯನ್ನು, ಪತ್ನಿಯನ್ನು ಹೊಂದಿರುವ ನಿಮಗೇಕೆ ಈ ಗೊಡವೆ. ಪಾಶ್ಚಾತ್ಯರಿಗೂ ಅಷ್ಟೇ, ಈ ಪ್ರಿಯೇ / ಪ್ರಿಯಕರ ಇಚ್ಚಿಸುವುದು ಮುಂದಿನ ಪ್ರಿಯೆ/ಪ್ರಿಯಕರನ ಮನದಿಚ್ಛೆಯಾಗಲಾರದು. ಹಚ್ಚೆ ಹಾಕುವವನ ಸೂಜಿಯಿಂದ ಏಯ್ಡ್ಸ್ ರೋಗದ ಶಂಕೆ ಇರುತ್ತದೆ. ಆದ್ದರಿಂದ ಈ ಹಚ್ಚೆ ನಿಮಗೆ ಮೃತ್ಯುದರ್ಶನ ಮಾಡಿಸುವುದು ಬೇಡ. ●

## ಬಿಸಿಬಿಸಿ ಸುದ್ದಿ

### ಇನ್ನು ಕಾಮಾಲೆಯ ಭಯವಿಲ್ಲ

ಅಂದು ಭಾನುವಾರ. ಹೆಂಡತಿ ಮಕ್ಕಳೊಡನೆ ಸಂಜೆ ಅಡ್ಡಾಡಲು ಕಬ್ಬನ್ ಪಾರ್ಕಿಗೆ ಹೋದ ರಾಜಣ್ಣ. ಅಲ್ಲಿ ಪಾನಿಪುರಿ ಮಾರುತ್ತಿದ್ದರು. ಹೆಂಡತಿಯ ಆ(ಜ್ಞೆ)ಸೆಗೆ ಇಲ್ಲವೆನ್ನಲಾಗದ ಎಲ್ಲರಿಗೂ ಪಾನಿಪುರಿಯನ್ನು ಎರಡೆರಡು ಪ್ಲೇಟು ಕೊಡಿಸಿದ!

ಎರಡು ವಾರವಾಯಿತು.

ಇದ್ದಕ್ಕಿಂದ್ದಂತೆಯೇ ಮನೆಮಂದಿಗೆಲ್ಲ ಚಳಿ, ಜ್ವರ, ತಲೆನೋವು ಆರಂಭವಾಯಿತು. ಮೈ ಕೈ ನೋವು. ವಿಪರೀತ ಸುಸ್ತು, ಹಸಿವಿಲ್ಲ. ಎಲ್ಲರಿಗೂ ವಾಕರಿಕೆ. ಚಿಕ್ಕ ಹುಡುಗನಂತು ವಾಂತಿ ಮಾಡಿ ಕೊಳ್ಳಲಾರಂಭಿಸಿದ. ನೋಡ ನೋಡುತ್ತಿರು ವಂತೆಯೇ ಇಡೀ ಜಗತ್ತು ಅವರಿಗೆ ಹಳದಿಯಾಗಿ ಕಾಣಲಾರಂಭಿಸಿತು. ಕಾಮಾಲೆಯ ಕಬಂಧ ಬಾಹುವಿನಲ್ಲಿ ಅವನ ಇಡೀ ಕುಟುಂಬ ಸಿಕ್ಕಿತ್ತು.

ಈ ಕಾಮಾಲೆಗೆ ಕಾರಣ ಅವರ ಯಕೃತ್ತು ಉರಿಯೂತಕ್ಕೆ ಒಳಗಾಗಿತ್ತು. ಇದನ್ನು ಹೆಪಟೈಟಿಸ್ ಎನ್ನುತ್ತಾರೆ. ಇದಕ್ಕೆ ಕಾರಣ ಹೆಪಟೈಟಿಸ್ - ಎ ವೈರಸ್! (HAV)

ಹೆಚ್ಎವಿ ಭಾರತಾದ್ಯಂತ ವಿಸ್ತೃತವಾಗಿ ಹರಡಿದೆ. ಇದೊಂದು ಜಲಜನಿಕ ರೋಗ. ಹೆಚ್ಎವಿ ಹೊಂದಿರುವ ವ್ಯಕ್ತಿ ಈ ವೈರಸ್‌ಗಳನ್ನು ತನ್ನ ಮಲದಲ್ಲಿ ವಿಸರ್ಜಿಸುತ್ತಾನೆ. ಆ ಮಲವು ಅನ್ನಾಹಾರ ಪಾನೀಯಗಳೊಡನೆ ಬೆರೆತು ಇತರರ ಹೊಟ್ಟೆ ಸೇರಿದಾಗ, ವೈರಸ್ಸೂ ಸಹ ಅವರ ದೇಹವನ್ನು ಪ್ರವೇಶಿಸಿ ಯಕೃತ್ ಉರಿಯೂತವನ್ನು ಉಂಟು ಮಾಡುತ್ತದೆ. ಹೆಚ್ಎವಿನಿಂದ ಗಂಭೀರ ದುಷ್ಪರಿಣಾಮಗಳು ಸಂಭವಿಸುವುದಿಲ್ಲವಾದರೂ, ಹಲವು ವಾರಗಳವರೆಗೆ ನಮ್ಮನ್ನು ಅಸ್ವಸ್ಥತೆಗೆ ಈಡು ಮಾಡುತ್ತದೆ. ಇದನ್ನು ತಡೆಗಟ್ಟಲು ಒಂದು ಲಸಿಕೆ ನಿರ್ಮಿಸುವ ನಮ್ಮ ಪ್ರಯತ್ನ ಇದುವರೆಗೂ ವಿಫಲವಾಗಿತ್ತು! ಆದರೆ ಇದೀಗ ಹೆಚ್ಎ ವಿ ಲಸಿಕೆಯ ಯಶಸ್ವೀ ಸೃಜನೆಯ ಬಿಸಿ ಬಿಸಿ ಸುದ್ದಿ ಬಂದಿದೆ.

ಹೆಚ್ಎ ವಿ ಲಸಿಕೆಯನ್ನು ಒಮ್ಮೆ ತೆಗೆದುಕೊಂಡ ನಂತರ ಮತ್ತೊಂದು ಬಲವರ್ಧಕ ಲಸಿಕೆಯನ್ನು ೬-೧೦ ತಿಂಗಳಲ್ಲಿ ತೆಗೆದುಕೊಂಡರೆ ಸಾಕು. ೧೦-೨೫ ವರ್ಷಗಳವರೆಗೆ ರಕ್ಷಣೆ ದೊರೆಯುತ್ತದೆ. ಆಗ ರಾಜಣ್ಣನಂತಹವರು ಮನಬಂದಂತೆ ಪಾನಿ ಪುರಿಗಳನ್ನು ತಿನ್ನಬಹುದು!

# ಹದ್ದು ಮೀರುತ್ತಿರುವ ಕೊಲೆಗಾರ !

**ಜಾಗತಿಕ ಆರೋಗ್ಯ ಸಂಸ್ಥೆಯ ಮೊತ್ತ ಮೊದಲ ವೈರಿ ಯಾವುದು?**

**ಏಡ್ಸ್ ರೋಗವೇ ?**

**ಎಬೋಲಾ ರೋಗವೇ ?**

**ಅಥವಾ ಕಾನ್ಸರ್ ಕಾಯಿಲೆಯೇ?**

ಅಲ್ಲ, ಅಲ್ಲ, ಜಾಗತಿಕ ಆರೋಗ್ಯ ಸಂಸ್ಥೆಯ ಪ್ರಕಾರ ನಂಬರ್ ಒನ್ ವೈರಿ ಸೊಳ್ಳೆಗಳ ಕೊಡುಗೆಯಾದ ಮಲೇರಿಯಾ. ಹೆಣ್ಣು ಅನಾಫಿಲೀಸ್ ಸೊಳ್ಳೆಯಿಂದ ಹರಡುವ ಈ ಮಲೇರಿಯಾದಿಂದಾಗಿ ೧೯೯೬ರಲ್ಲಿ ೯೦ ದೇಶಗಳಲ್ಲಿ ೩೦ ಲಕ್ಷ ಜನರು ಸಾವನ್ನಪ್ಪಿದ್ದಾರೆ. ಅಂದರೆ ಪ್ರತಿ ೧೫ ನಿಮಿಷಕ್ಕೊಂದು ಸಾವು. ಜಗತ್ತಿನ ಎಲ್ಲ ಆಸ್ಪತ್ರೆಗಳಿಗೆ ಸೇರುವ ರೋಗಿಗಳಲ್ಲಿ ಶೇಕಡಾ ೧೦ ರಿಂದ ೩೦ ಜನರು ಮಲೇರಿಯಾ ಪೀಡಿತರು. ಐದು ವಯಸ್ಸಿನೊಳಗಿನವರಲ್ಲಿ ೧/೪ ಭಾಗ ದಷ್ಟು ಮಕ್ಕಳು ಮೃತ್ಯುವಿಗೀಡಾಗಿದ್ದು, ಈ ಮಲೇರಿಯಾದಿಂದ.

ಈ ಲೆಕ್ಕಾಚಾರ ತಲೆತಿನ್ನುವುದು ಬರೇ ಸಾವುಗಳಿಂದಲ್ಲ. ಏಡ್ಸ್ ,ಎಬೋಲಾಗಳಂತಲ್ಲದೆ, ನಿಶ್ಚಿತವಾಗಿ ಗುಣಪಡಿಸಬಲ್ಲ ವ್ಯಾಧಿ ಮಲೇರಿಯಾದಿಂದೇಕೆ ಇಷ್ಟೊಂದು ಸಾವುಗಳು ?

ಕಳೆದೆರಡು ವರ್ಷಗಳಿಂದ ಜಾ.ಆ.ಸಂ. ಯು ಏಡ್ಸ್ ಇತ್ಯಾದಿಗಳತ್ತಲೇ ತನ್ನ ನಿಧಿಯನ್ನು ಹರಿಸಿದ್ದು ಮಲೇರಿಯಾ ವಿಷಯದಲ್ಲಿ ಮುಗ್ಗರಿಸಲು ಮುಖ್ಯ ಕಾರಣ. ೧೯೯೪-೯೫ರಲ್ಲಿ ಜಾ.ಆ. ಸಂ.ಯು ಮಲೇರಿಯಾ ನಿವಾರಣೆಗಾಗಿ ಬರೇ ೨೦ ಮಿಲಿಯ ಡಾಲರ್ ತೆಗೆದಿಟ್ಟಿತ್ತು.

ಜಗತ್ತಿನ ಶೇಕಡಾ ೯೦ ದೇಶಗಳು ಅತಿ ಮಲೇರಿಯಾ ಬಾಧಿತವಾಗಿದ್ದು; ಈ ಹಣ ಆನೆಯ ಹೊಟ್ಟೆಗೆ ಮುಷ್ಟಿ ಹಿಟ್ಟಿಟ್ಟಂತಾಯಿತು.

ಬಹುಪಾಲು ಮಲೇರಿಯಾ ಪೀಡಿತರು ಆಫ್ರಿಕಾದ ಉಷ್ಣವಲಯದವರಾದರೂ, ಏಷ್ಯಾದಲ್ಲೂ ಇದರ ರುದ್ರತಾಂಡವ ಸಾಕಷ್ಟಿದೆ. ಅದರಲ್ಲೂ ಮುಖ್ಯವಾಗಿ ಭಾರತ, ಥೈಲ್ಯಾಂಡ್, ಇಂಡೋನೇಶಿಯಾ, ವಿಯೆಟ್ನಾಂ, ಕಾಂಬೋಡಿಯಾ, ಚೀನಾ, ಶ್ರೀಲಂಕಾ, ಆಫ್ಘಾನಿಸ್ತಾನಗಳು ಮಲೇರಿಯಾದ ಮುಖ್ಯ ನೆಲೆಗಳು.

ಅನೇಕ ಮಲೇರಿಯಾ ನಿರ್ಮೂಲನಾ ಕಾರ್ಯಾಚರಣೆಗಳ ನಡುವೆಯೂ ಮಲೇರಿಯಾ ಮತ್ತೆ ಮತ್ತೆ ಯಾಕೆ ಮರುಕಳಿಸುತ್ತಿದೆ ?

೧೯೫೦ರ ಸುತ್ತಿನಲ್ಲಿ ವ್ಯಾಪಕವಾಗಿ ಡಿ.ಡಿ.ಟಿ.



ಸಿಂಪಡಿಸುವ ಕಾರ್ಯಕ್ರಮ ಕೈಕೊಂಡಾಗ, ಸೊಳ್ಳೆಗಳ ಹಾವಳಿ ಮತ್ತು ಮಲೇರಿಯಾ ಕಡಿಮೆಯಾಗಿತ್ತು. ಆದರೆ ಪರಿಸರ ಮತ್ತು ಜೀವಿ ಆರೋಗ್ಯದ ಮೇಲೆ ಅದು ಮಾಡುವ ಹಾನಿಕರ ಪರಿಣಾಮವನ್ನು ಕಂಡು ಅಂಥ ರಾಸಾಯನಿಕಗಳನ್ನು ಹಲವಾರು ದೇಶಗಳಲ್ಲಿ ನಿಷೇಧಿಸಲಾಯಿತು.

## ಹೊಂದಿಕೊಂಡ ಸೊಳ್ಳೆಗಳು

ಇನ್ನೂ ಮುಖ್ಯ ಸಂಗತಿಯೆಂದರೆ ಡಿ.ಡಿ.ಟಿ. ಯನ್ನು ಇನ್ನೂ ಬಳಸುವ ಭಾರತದಂಥ ನಾಡಿನಲ್ಲಿ ಸೊಳ್ಳೆಗಳು ಡಿ.ಡಿ.ಟಿ.ಯಂಥವುಗಳ ವಿರುದ್ಧ ಪ್ರತಿರೋಧ ಶಕ್ತಿಯನ್ನು ಪಡೆದುಕೊಂಡಿವೆ.

ಕಾರ್ಮಿಕರು ಸರಿಯಾದ ಸ್ಯಾನಿಟರಿ ವ್ಯವಸ್ಥೆಯಿಲ್ಲದ ಸೊಳ್ಳೆ ನೆಲೆಗಳಿಗೆ ವಸತಿ ಹೋಗುವುದರಿಂದಲೂ ಈ ರೋಗ ಉಲ್ಬಣಗೊಳ್ಳುತ್ತಿದೆ. ಭಾರೀ ಹತೋಟಿ ಬಯಸುವ ಪ್ರದೇಶದಲ್ಲಿ ಕಾಟಾಚಾರದ ಹತೋಟಿಗೆ ಇಳಿದಿರುವುದೂ ಸಮಸ್ಯೆ ಬಗೆ ಹರಿಯದಿರಲು ಮುಖ್ಯ ಕಾರಣ. ಇಲ್ಲಿ ಆರ್ಥಿಕ ಮತ್ತು ರಾಜಕೀಯ ಒತ್ತಡದ ವಿಫಲತೆಗಳೂ ಇವೆ.

ಪೇಲವ ಅಭಿವೃದ್ಧಿ ಮತ್ತು ಆರೋಗ್ಯ ಕಾರ್ಯಕ್ರಮಗಳು ಇನ್ನೊಂದು ಕಾರಣವಾಗಿವೆ. ಕಳೆದ ವರ್ಷ ರಾಜಸ್ತಾನದಲ್ಲಿ ಎರಡು ಅಣೆಕಟ್ಟುಗಳು ಒಡೆದು ೪,೯೦೦ ಹೆಕ್ಟೇರ್ ಕೃಷಿ ಭೂಮಿಯನ್ನು ನೀರು ಆವರಿಸಿ, ಅವನ್ನು ಸೊಳ್ಳೆ ಸಂತತಿ ಬೆಳೆಯುವ ಕೇಂದ್ರವನ್ನಾಗಿಸಿದವು.

ಲ್ಯಾಟಿನ್ ಅಮೆರಿಕದಲ್ಲಿ ವ್ಯಾಪಕವಾಗಿ ಕಾಡು ಕಡಿದು ಜನನೆಲೆ ಮಾಡಿದ್ದರಿಂದ ಮಲೇರಿಯಾ ಗರಿಗಟ್ಟಿಕೊಂಡಿದೆ. ಜೀವ ನಷ್ಟವಷ್ಟೆ ಅಲ್ಲದೇ ಮಲೇರಿಯಾದಿಂದ ಭಾರೀ ಪ್ರಮಾಣದಲ್ಲಿ ಆರ್ಥಿಕ ಹಾನಿಯೂ ಆಗುತ್ತಿದೆ. ಒಂದು ಸಮೀಕ್ಷೆಯಂತೆ ಆಫ್ರಿಕಾದಲ್ಲಿ ಮಲೇರಿಯಾದಿಂದಾಗಿ ಸರಾಸರಿ ಪ್ರತಿಯೊಬ್ಬನ ಹತ್ತು ದುಡಿಯುವ ದಿನಗಳು ನಷ್ಟವಾಗುತ್ತಿವೆ.

೧೯೯೫ರಲ್ಲಿ ಆಫ್ರಿಕಾದಲ್ಲಿ ಮಲೇರಿಯಾ ಚಿಕಿತ್ಸೆ ಮತ್ತು ಮಲೇರಿಯಾ ತೊಡೆವ ಕಾರ್ಯಕ್ರಮಗಳಿಗಾಗಿ ಆದ ವೆಚ್ಚ ಅಂದಾಜು ೧.೮ ಬಿಲಿಯನ್ ಡಾಲರ್‌ಗಳು. ಆದರೆ ನಿಗಾ ವಹಿಸಿದರೆ ಮಲೇರಿಯಾ ರೋಗಿಯನ್ನು ಸುಲಭ ವೆಚ್ಚದಲ್ಲಿ ಗುಣಪಡಿಸುವುದು ಸಾಧ್ಯವಿದೆ.

## ಸೊಳ್ಳೆಸಂತತಿಯ ನಿಯಂತ್ರಣ

ಔಷಧ ಶಾಸ್ತ್ರಜ್ಞರು ಈ ನಿಟ್ಟಿನಲ್ಲಿ ಇನ್ನೂ ಹೆಚ್ಚು ಪರಿಣಾಮಕಾರಿ ಇಂಜೆಕ್ಷನ್‌ಗಾಗಿ ಶೋಧ ನಡೆಸಿದ್ದಾರೆ. ವಿಜ್ಞಾನಿಗಳು ಮಲೇರಿಯಾ ಹರಡುವ ಸೊಳ್ಳೆಗಳ ಜೀನ್ ಸಂಶೋಧನೆ ನಡೆಸುತ್ತಿದ್ದು, ಅದರ ವಂಶವಾಹಿಯನ್ನು ತಡೆಯುವತ್ತ ಹೆಜ್ಜೆಯಿಟ್ಟಿದ್ದಾರೆ.

ಆದರೆ ವಿಶ್ವಸಂಸ್ಥೆಯ ವರದಿಯಂತೆ ಅಂಥ ಹೈಟೆಕ್ ಪರಿಹಾರಗಳು ಪರಿಣಾಮಕಾರಿಯೆನಿಸಿದರೂ, ಅದಕ್ಕೆ ತುಂಬಾ ವೆಚ್ಚಬಾಬತ್ತುಗಳಾಗಲಿವೆ. ಅದಕ್ಕಿಂತ ಆಫ್ರಿಕಾ, ಏಷ್ಯಾದ ಬಡ ಪೀಡಿತರಿಗೆ ವ್ಯಾಕ್ಸೀನ್ ಒದಗಿಸುವಲ್ಲಿ ಆ ಹಣ ಹೂಡಬಹುದು.

ಮಲೇರಿಯಾಕ್ಕೆ ಹಲವಾರು ಪರಿಹಾರಗಳಿವೆ. ಈಗ ವಿಜ್ಞಾನಿಗಳು ಚೀನಾದಲ್ಲಿ ಪರಂಪರೆಯಾಗಿ ೨೦೦೦ ವರ್ಷಗಳಿಂದ ಬಳಸುತ್ತಿರುವ ಕ್ವಿಂಗ್ ಹಾವ್ ಎಂಬ ಮೂಲಿಕೆಯ ಬಗೆಗೆ ಆಸಕ್ತಿ ಹೊಂದಿದ್ದಾರೆ. ಅದೇ ರೀತಿ ಪೆರುವಿನ ಕಹಿ ತೊಗಟೆಯ ಮರ ಸಿಂಕೋನಾ ಸಹ ಅವರ ತೀವ್ರ ಗಮನದಲ್ಲಿದೆ. ಸ್ಥಳೀಯರು ಇದರ ಕಷಾಯವನ್ನು ಪರಿಣಾಮಕಾರಿಯಾಗಿ ಬಳಸುತ್ತಲೇ ಬಂದಿದ್ದಾರೆ.

ಸೊಳ್ಳೆಪರದೆಯೂ ಆರ್ಥಿಕವಾಗಿ ಹೊರೆಯೇ. ಜಾ.ಆ.ಸಂ.ಯು ಅಂದಾಜು ಮಾಡಿದಂತೆ ೭,೦೦೦ ಜನರ ಒಂದು ಸಮೂಹಕ್ಕೆ ೩,೦೦೦ ಸೊಳ್ಳೆಪರದೆಗಳು ಬೇಕು. ಅಂದರೆ ಇದಕ್ಕಾಗಿ ೧೫,೦೦೦ ಡಾಲರ್‌ಗಳ ವೆಚ್ಚ

ಸೊಳ್ಳೆ ಹತೋಟಿಗೆ ನಾನಾ ನವೀನ ಹಾದಿಗಳು ಇಂದು ತೆರೆದಿವೆಯಾದರೂ, ಅಭಿವೃದ್ಧಿಶೀಲ ರಾಷ್ಟ್ರಗಳು ಅದನ್ನು ಬಳಸುವ ಸ್ಥಿತಿಯಲ್ಲಿಲ್ಲ. ಇಡೀ ವಿಶ್ವಕ್ಕೆ ಸಂಬಂಧಿಸಿದಂತೆ ರಾಜಕೀಯ ಹೊಂದಾಣಿಕೆ, ತಿಳಿವಳಿಕೆಯ ನೇರ ಕಾರ್ಯಾಚರಣೆಯೊಂದು ಮಾತ್ರ ಮಲೇರಿಯಾದ ವಿರುದ್ಧ ಗಟ್ಟಿ ಹೋರಾಟವನ್ನು ನೀಡೀತು.

# ೧೯೯೭ ರ ವಂಶವಾಹಿಗಳು

ಪ್ರತಿದಿನ, ಪ್ರತಿ ತಿಂಗಳು, ಪ್ರತಿವರ್ಷ ಹೊಸ ಹೊಸ ಸಂಶೋಧನೆಗಳು ವೈದ್ಯಕೀಯ ಕ್ಷೇತ್ರದಲ್ಲಿ ನಡೆಯುತ್ತಿವೆ, ನಮ್ಮ ಜ್ಞಾನ ಬೆಳೆಯುತ್ತಿದೆ. ಇವುಗಳಲ್ಲಿ ಮುಖ್ಯವಾದದ್ದು ವಂಶವಾಹಿ (ಜೀನ್)ಗಳಿಗೆ ಸಂಬಂಧಪಟ್ಟ ಮಾಹಿತಿ, ಅನೇಕ ರೋಗಗಳಿಗೆ ನಮ್ಮ ವಂಶವಾಹಿಗಳಲ್ಲಿರುವ ದೋಷ ಗಳೇ ಕಾರಣವಾಗಿರಬಹುದು ಅಂತಹ ಹಲವು ವಂಶವಾಹಿಗಳನ್ನು ೧೯೯೭ರಲ್ಲಿ ವಿಜ್ಞಾನಿಗಳು ಕಂಡು ಹಿಡಿದಿದ್ದಾರೆ ಆ ಬಗ್ಗೆ ಒಂದು ಸಂಕ್ಷಿಪ್ತ ಪರಿಚಯ.

### ೧. ಟ್ರೀಚರ್ ಕಾಲಿನ್ಸ್ ಲಕ್ಷಣಾವಳಿ

ಇದೊಂದು ಮುಖದ ವೈಪರೀತ್ಯಗಳಿಗೆ ಸಂಬಂಧಪಟ್ಟ ರೋಗ. ಈ ರೋಗವಿರುವವರ ಕಿವಿಗಳು ವಿರೂಪವಾಗಿರುತ್ತವೆ ಕಿವಿ ಕೇಳುವುದಿಲ್ಲ, ಕಣ್ಣು ಓರೆಯಾಗಿ ಕೆಳಗೆ ಬಾಗಿರುತ್ತವೆ, ಮುಖವು ಕಿರಿದಾಗಿ ಚಪ್ಪಟೆಯಾಗಿರುತ್ತದೆ, ಗದ್ದ ಪುಟ್ಟದಾಗಿರುತ್ತದೆ. ಈ ಲಕ್ಷಣಾವಳಿ ತಲೆದೋರಲು ಕಾರಣ ೫ನೆಯ ಕ್ರೋಮೋಸೋಮಿನಲ್ಲಿ ತಲೆದೋರುವ ಉತ್ಪರಿವರ್ತನೆ (ಮ್ಯುಟೇಶನ್) ಇದು ಟ್ರೀಕಲ್ ಎಂಬ ಪ್ರೋಟೀನ್ ಸಂಕೇತವನ್ನು ಹೊಂದಿರುತ್ತದೆ.




### ೨. ರೆಟಿನೈಟಿಸ್ ಪಿಗ್‌ಮೆಂಟೋಸ

ಇದೊಂದು ಕಣ್ಣಿಗೆ ಸಂಬಂಧಪಟ್ಟ ರೋಗ. ಈ ರೋಗವು ಪ್ರತಿ ೪೦೦೦ ಜನರಲ್ಲಿ ಒಬ್ಬರನ್ನು ಕಾಡುತ್ತದೆ. ಇವರಲ್ಲಿ ಕ್ರಮೇಣ ಕುರುಡುತನ ತಲೆದೋರುತ್ತದೆ. ಈ ರೋಗದಲ್ಲಿ ಎರಡು ರೂಪಗಳಿವೆ. ಅವುಗಳಲ್ಲಿ ಒಂದು ರೂಪಕ್ಕೆ ಕಾರಣವಾದ ವಂಶವಾಹಿಯನ್ನು x ಕ್ರೋಮೋಸೋಮಿನಲ್ಲಿ ಕಂಡುಹಿಡಿದಿದ್ದಾರೆ. ಈ ಕೊರತೆಯಿರುವುದನ್ನು ಪತ್ತೆ ಹಚ್ಚಬಲ್ಲ ಸೂಕ್ತ ತಪಾಸಣೆಯೊಂದನ್ನು ಸಿದ್ಧಪಡಿಸುವುದರಲ್ಲಿ ವಿಜ್ಞಾನಿಗಳು ಮಗ್ನರಾಗಿದ್ದಾರೆ.

### ೩. ಅನ್‌ಹೈಡ್ರೋಟಿಕ್ ಎಕ್ಟೋಡರ್ಮಲ್ ಡಿಸ್‌ಪ್ಲೇಸಿಯ

ಮೂಲತಃ ಇದು ಚರ್ಮಕ್ಕೆ ಸಂಬಂಧಿಸಿದ ರೋಗ. ಈ ರೋಗಕ್ಕೆ ತುತ್ತಾದವರ ಹಲ್ಲುಗಳೆಲ್ಲ ಉದುರಿಹೋಗುತ್ತವೆ, ಬೊಕ್ಕತಲೆಯಾಗುತ್ತದೆ ಹಾಗೂ ಬೆವರುವುದೇ ಇಲ್ಲ! ಇದಕ್ಕೆ ಕಾರಣ x ಕ್ರೋಮೋಸೋಮಿನಲ್ಲಿ ಸಂಭವಿಸುವ ಉತ್ಪರಿವರ್ತನೆ. ಇದರ ಫಲವಾಗಿ ಮಾನವ ಭ್ರೂಣದ ಹೊರಪೊರೆ (ಎಕ್ಟೋಡರ್ಮ್)ಯ ಬೆಳವಣಿಗೆ ಕುಂಠಿತವಾಗುತ್ತದೆ.

### ೪. ಆಸ್ಟ್ರೋಟಾಕ್ಟಿನ್ :

ಇದೊಂದು ಪ್ರೋಟೀನಿನ ಹೆಸರು. ಇದು ಭ್ರೂಣದಲ್ಲಿರುತ್ತದೆ. ಇದು ಭ್ರೂಣದಲ್ಲಿ ಬೆಳೆಯುವ ನರಕೋಶಗಳನ್ನು ಅವುಗಳ ನಿಯೋಜಿತ ಸ್ಥಾನದೆಡೆಗೆ ನಿರ್ದೇಶಿಸುತ್ತದೆ. ಈ ಪ್ರೋಟೀನನ್ನು ಆಮಂತ್ರಿಸುವ ವಂಶವಾಹಿಯು ಒಂದನೆಯ ಕ್ರೋಮೋಸೋಮಿನಲ್ಲಿರುವುದನ್ನು ಪತ್ತೆ ಹಚ್ಚಲಾಗಿದೆ. ಇದರಿಂದ ಅಪಸ್ಮಾರ ಹಾಗೂ ಇಚ್ಛಿತ ವಿಕಲತೆಗಳು ಹೇಗೆ ಸಂಭವಿಸುತ್ತವೆ ? ಎಂದು ತಿಳಿಯಲು ನೆರವಾಗಬಹುದು. ಕೆಲವು ಸಲ ಈ ರೋಗಗಳು ನರಕೋಳಗಳು ಸ್ವಸ್ಥಾನ ಸೇರದಿದ್ದಾಗ ಸಂಭವಿಸಬಹುದು.

### ೫. ವಿಲಿಯಮ್ಸ್ ಲಕ್ಷಣಾವಳಿ

ಇವರಿಗೆ ಉತ್ತಮ ಭಾಷಾ ಸಾಮರ್ಥ್ಯ ಇರುವುದಿಲ್ಲ ಅಲ್ಲದೆ ಕೆಲವು ಕೆಲಸಗಳನ್ನು ಇವರು ಮಾಡಲು ಅಸಮರ್ಥರಾಗುತ್ತಾರೆ. ಉದಾ : ಒಂದು ಚಕ್ರವನ್ನು ನೋಡಿ ಅದರಂತೆ ಮಾದರಿಯನ್ನು ಜೋಡಿಸುವುದು. ಇಂತಹ ವೈಪರೀತ್ಯಕ್ಕೆ ಕಾರಣವಾಗಿರುವ ವಂಶವಾಹಿಯು ೭ನೆಯ ಕ್ರೋಮೋಸೋಮಿನ ಮೇಲಿರುತ್ತದೆ. ಈ ವಂಶವಾಹಿಯ ಅನುಪಸ್ಥಿತಿ ಮಿದುಳಿನ ಬೆಳವಣಿಗೆಗೆ ಅಗತ್ಯವಾದ ಪ್ರೋಟೀನು ಕೊರತೆಯನ್ನುಂಟು ಮಾಡುತ್ತದೆ. ಹಾಗಾಗಿ ವಿಲಿಯಂಸ್ ಲಕ್ಷಣಾವಳಿ ತಲೆದೋರುತ್ತದೆ.



# ಹೊಟ್ಟೆಯಲ್ಲೊಂದು ಹೊಸ ಲಾಡಿ ಹುಳದ ಶೋಧನೆ ?

ಕರುಳು ಹುಳುಗಳು ಯಾರಿಗೆ ಗೊತ್ತಿಲ್ಲ ?.... ದುಂಡು ಹುಳು, ಕೊಕ್ಕೆಹುಳು, ಲಾಡಿಹುಳು, ದಾರದ ಹುಳು, ಕೊಂಡೆ ಹುಳು ಹೀಗೆ ಸಾಕಷ್ಟಿವೆ. ಮನುಷ್ಯನ ಕರುಳನ್ನೇ ಮನೆಯನ್ನಾಗಿ ಮಾಡಿಕೊಂಡು, ಅವನ ಕರುಳಿಗೆ ಅಂಟಿ ರಕ್ತ ಹೀರುತ್ತ ತಮ್ಮ ಜೀವ ಮಾನವ ನ್ನೆಲ್ಲ ಕಳೆಯುವ ಕರುಳು ಹುಳುಗಳು ಪರಿಪೂರ್ಣ ಪರಾವಲಂಬಿಗಳು.

ಮನುಷ್ಯರನ್ನು ಕಾಡುವ ಕರುಳು ಹುಳುಗಳೆಲ್ಲ ನಮಗೆ ತಿಳಿದಿವೆ ಎಂದು ಬೀಗುತ್ತಿದ್ದರು ವೈದ್ಯ ವಿಜ್ಞಾನಿಗಳು ! ಆದರೆ ಕಳೆದ ಜೂನ್‌ನಲ್ಲಿ ಬ್ರಿಟನ್ನಿನ 'ಲ್ಯಾನ್ಸೆಟ್' ಪತ್ರಿಕೆಯು ಪ್ರಕಟಿಸಿದ ಮಾಹಿತಿ ವೈದ್ಯರ 'ಗರ್ವಭಂಗ' ಮಾಡಿದೆ. ಇದುವರೆಗೂ ನಮಗೆ ತಿಳಿಯದ ಅಪರಿಚಿತ ಕರುಳುಹುಳುವಿನ ವಿವರಗಳನ್ನು ಅದು ಪ್ರಕಟಿಸಿದೆ.

ಕ್ಯಾಲಿಫೋರ್ನಿಯದಲ್ಲಿರುವ ಒಬ್ಬ ಏಡ್ಸ್ ರೋಗಿಗೆ ವಿಪರೀತ ಹೊಟ್ಟೆನೋವು, ತೂಕ ಕಳೆದುಕೊಂಡಿದ್ದ. ಆತನನ್ನು ಪರೀಕ್ಷಿಸಿದ ವೈದ್ಯರು ಅವನನ್ನು CT ಸ್ಕ್ಯಾನ್ ಪರೀಕ್ಷೆಗೆ ಒಳಪಡಿಸಿದರು. ಅದರಿಂದ ಅವನ ಉದರದೊಳಗೆ ಒಂದು ದೊಡ್ಡ ಗಡ್ಡೆಯಿರುವುದು ಪತ್ತೆಯಾಯಿತು. ವೈದ್ಯರು ಗಡ್ಡೆಯ ಒಂದು ಚೂರನ್ನು ಕತ್ತರಿಸಿ ಹೊರತೆಗೆದು ಪರೀಕ್ಷಿಸಿದರು. ಅವರಿಗೆ ಆ ಚೂರಿನ ಸ್ವರೂಪವೇ ಅರ್ಥವಾಗಲಿಲ್ಲ. ಅನೇಕ ತಜ್ಞರು ಬಂದು ಪರೀಕ್ಷಿಸಿದರೂ ಆ ಗಡ್ಡೆಯ ಗುಟ್ಟು ಹೊರಬರಲೇ ಇಲ್ಲ! ಇದಾದ ೯ ವಾರಗಳಲ್ಲಿ ಆ ರೋಗಿ ಮರಣ ಹೊಂದಿದ.



ವೈದ್ಯರು ಮರಣೋತ್ತರ ಶವ ಪರೀಕ್ಷೆಯನ್ನು ನಡೆಸಿದರು. ಅವನ ಉದರದ ಬಹುಭಾಗಗಳಲ್ಲಿ ಗಡ್ಡೆಗಳಿದ್ದವು. ಯಕೃತ್ತಿನ ೩/೪ ಭಾಗ ಗಡ್ಡೆಯ ಕಾರಣ ನಾಶವಾಗಿತ್ತು. ಅಲ್ಲದೆ ಉದರ ಸಂಪುಟದಲ್ಲಿ ೮ ಇಂಚಿನ ಉದ್ದದ ಮತ್ತೊಂದು ಗಡ್ಡೆಯಿತ್ತು.

ಈ ಗಡ್ಡೆಯನ್ನು ಮತ್ತೆ ಪರೀಕ್ಷಿಸಿದರು. ಇದರಲ್ಲಿದ್ದ ೧/೧೦ ಭಾಗದ ಜೀವಕೋಶಗಳು ಬಹಳ ವಿಚಿತ್ರವಾಗಿದ್ದವು. ಅವು ಕ್ಯಾನ್ಸರ್ ಕೋಶಗಳಲ್ಲ ಎಂಬುದು ಖಚಿತವಾಗಿತ್ತು. ಸ್ಟಾನ್‌ಫೋರ್ಡಿನ ರೋಗಶಾಸ್ತ್ರಜ್ಞ ಲೂಯಿಸ್ ಫಜಾರ್ಡೊ "ಅವು ಮನುಷ್ಯರ ಜೀವಕೋಶಗಳಾಗಿರಲು ಸಾಧ್ಯವಿಲ್ಲ.. ಅಷ್ಟು ಪುಟ್ಟದಾಗಿವೆ" ಎಂದರು. ಇದಕ್ಕಿಂತಲೂ ಹೆಚ್ಚಿನ ಕುತೂಹಲವನ್ನು ಕೆರಳಿಸಿದ ಅಂಶವೆಂದರೆ, ಜೀವಕೋಶಗಳಲ್ಲಿದ್ದ ಅಪಾರ ಪ್ರಮಾಣದ ಸಿಲಿಕಾನ್, ಸಿಲಿಕಾನ್ ಅಷ್ಟು ಪ್ರಮಾಣದಲ್ಲಿ ಇರಲು ಸಾಧ್ಯವಿಲ್ಲ.

ಗಡ್ಡೆಯನ್ನು ಮತ್ತೆ ವಿಶೇಷ ಪರೀಕ್ಷೆಗಳಿಗೆ ಒಳಪಡಿಸಿದರು. ಆಗ ಅವರಿಗೆ ಚೀಲದಂತಹ ರಚನೆಗಳು ಗೋಚರಿಸಿದವು. ಈ ಚೀಲದೊಳಗೆ ಅನೇಕ ಕೋಶಗಳಿದ್ದವು. ಆದರೆ ಇಂತಹ ರಚನೆಯ ಜೀವಿಯೊಂದು ಇರುವ ಪುರಾವೆ ಹಿಂದೆಂದೂ ದೊರೆತಿರಲಿಲ್ಲ. ಮತ್ತೆ ವಿಜ್ಞಾನಿಗಳು ಗೊಂದಲಕ್ಕೀಡಾದರು.

ಸ್ಟಾನ್‌ಫೋರ್ಡ್ ಮೆಡಿಕಲ್ ಸ್ಕೂಲಿನಲ್ಲಿ ಸೂಕ್ಷ್ಮ ಜೀವಿ ಶಾಸ್ತ್ರಜ್ಞನಾಗಿರುವ 'ಡೇವಿಡ್ ರೆಲ್‌ಮನ್' ಒಂದು ಮಾರ್ಗವನ್ನು ಹುಡುಕಿದರು. ಈ ಹೊಸ ಜೀವಿಯ ವರ್ಣತಂತುಗಳನ್ನು ಹಾಗೂ DNA ಜೋಡಣೆಯನ್ನು ಅಭ್ಯಸಿಸಿದರು. ಇಂತಹ ವಿನ್ಯಾಸ ಹೊಂದಿದ ಯಾವುದೇ ಜೀವಿ ಇರಲಿಲ್ಲ. ಆದರೆ ಈ ಹೊಸ ಜೀವಿಯ DNA ವಿನ್ಯಾಸ ಲಾಡಿ ಹುಳುಗಳ DNA ವಿನ್ಯಾಸವನ್ನು ಬಹುಪಾಲು ಹೋಲುತಿತ್ತು !

ವಿಜ್ಞಾನಿಗಳು ಹೊಸ ಲಾಡಿ ಹುಳುವೊಂದನ್ನು ಪತ್ತೆ ಹಚ್ಚಿದ್ದರು. ಈ ಹೊಸಲಾಡಿಹುಳು ಅಪರೂಪವಾದದ್ದಿರಬೇಕು. ಫ.ಜಾರ್ಡೋ ಹೇಳುತ್ತಾರೆ. "ಬಹುಶಃ ಈ ಲಾಡಿಹುಳು ರಕ್ಷಣಾ ಕೊರತೆಯ ರೋಗಿಗಳನ್ನು ಮಾತ್ರ ಕಾಡುತ್ತಿದ್ದಿರಬೇಕು" ಜೊತೆಗೆ ಮತ್ತೊಂದು ಭೀತಿಯನ್ನೂ ವ್ಯಕ್ತಪಡಿಸುತ್ತಾರೆ. "ಈ ಲಾಡಿ ಹುಳು ಆಕ್ರಮಣಕಾರಿ ಸ್ವಭಾವದ್ದು. ಪರೋಪಜೀವಿ ಇತರರಿಗೂ ವರ್ಗಾವಣೆಯಾಗಿ ಅವರನ್ನು ಕಾಡಬಹುದೇನೋ" ಎಂಬ ಚಿಂತೆಯಾಗುತ್ತಿದೆ ಎನ್ನುತ್ತಾರೆ.

ಈ ಪ್ರಕೃತಿಯಲ್ಲಿ ನಮಗರಿಯದ ಇನ್ನೆಷ್ಟು ಚಿತ್ರವಿಚಿತ್ರ ಜೀವಿಗಳಿವೆಯೋ.....

---

**೬. ಬೇಸಲ್ ಸೆಲ್ ಕಾರ್ಸಿನೋಮ**

ಇದು ಸರ್ವೇಸಾಮಾನ್ಯವಾದ ಚರ್ಮದ ಕ್ಯಾನ್ಸರ್. ೯ನೆಯ ಕ್ರೋಮೋಸೋಮಿನಲ್ಲಿರುವ ವಂಶವಾಹಿಯ ಉತ್ಪರಿವರ್ತನೆಯಿಂದ ಈ ರೋಗ ಸಂಭವಿಸುತ್ತದೆ. ಈ ವಂಶವಾಹಿಯು ಸಹಜ ರೂಪದಲ್ಲಿದ್ದಾಗ, ಅದು ಭ್ರೂಣದ ಬೆಳವಣಿಗೆಯನ್ನು ನಿರ್ದೇಶಿಸುತ್ತದೆ.

**೭. ಫ್ಯಾಂಕೋನಿ ರಕ್ತಕೊರತೆ**

ಇದೊಂದು ಅಪರೂಪದ ರೋಗ. ಇದಕ್ಕೆ ಕಾರಣ ೧೬ನೆಯ ಕ್ರೋಮೋಸೋಮಿನ ಮೇಲಿರುವ ವಂಶವಾಹಿ. ಈ ವಂಶವಾಹಿಯಲ್ಲಿ ಉತ್ಪರಿವರ್ತನೆಯಾದಾಗ, DNAಗಳಿಗೆ ಹಾನಿಯನ್ನುಂಟು ಮಾಡುವ ರಾಸಾಯನಿಕ ವಸ್ತುಗಳ ದುಷ್ಪರಿಣಾಮವನ್ನು ತಡೆಗಟ್ಟುವ ಸಾಮರ್ಥ್ಯವು ಕುಗ್ಗುತ್ತದೆ. ಆಗ ಸಾಕಷ್ಟು ರಕ್ತಕಣಗಳು ಉತ್ಪಾದನೆಯಾಗುವುದಿಲ್ಲ. ಆದ್ದರಿಂದ ರಕ್ತ ಕೊರತೆ (ಅನೀಮಿಯ) ಅಥವಾ ರಕ್ತದ ಕ್ಯಾನ್ಸರ್ (ಲ್ಯೂಕೇಮಿಯ) ತಲೆದೋರಿ ಮಗುವು ೧೬ ವರ್ಷಗಳ ಒಳಗೆ ಸಾಯಬಹುದು.

**★ ಹಿಮೋಕ್ರೊಮೊಟೊಸಿಸ್**

ಯೂರೋಪಿನವರಲ್ಲಿ ಕಂಡು ಬರುವ ಸರ್ವೇಸಾಮಾನ್ಯವಾದ ಅನುವಂಶಿಕ ವೈಪರೀತ್ಯವಿದು. ಇದಕ್ಕೆ ಸಂಬಂಧಪಟ್ಟ ವಂಶವಾಹಿಯು ೬ನೆಯ ಕ್ರೋಮೋಸೋಮಿನ ಮೇಲಿದೆ. ಈ ವಂಶವಾಹಿಯಲ್ಲಿ ಉತ್ಪರಿವರ್ತನೆಯಾದಾಗ, ವ್ಯಕ್ತಿಯ ಕರುಳು ಕಬ್ಬಿಣಾಂಶವನ್ನು ಹೀರುವ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತದೆ. ಆಗ ಕಬ್ಬಿಣಾಂಶವು ದೇಹದ ಇತರ ಭಾಗಗಳಲ್ಲಿ ಸಂಗ್ರಹವಾಗುತ್ತದೆ. ಇದರ ಫಲವಾಗಿ ವ್ಯಕ್ತಿಗೆ ಸಿಹಿಮೂತ್ರ ರೋಗ, ಯಕೃತ್ತಿನ ನಾರುಗಟ್ಟುವಿಕೆ, ಹೃದಯ ರೋಗ ಮುಂತಾದವು ಬರಬಹುದು.

**೮. ಪ್ರೋಗ್ರೆಸಿವ್ ಮಯೋಕ್ಲೋನಸ್ ಎಪಿಲೆಪ್ಸಿ**

ಇದೊಂದು ಅಪರೂಪದ ಅನುವಂಶಿಕ ಅಪಸ್ಮಾರ. ಇಲ್ಲಿ ನರಗಳು ಕ್ರಮವಾಗಿ ನಶಿಸುತ್ತವೆ, ಬುದ್ಧಿಮಾಂದ್ಯತೆ ತಲೆದೋರುತ್ತದೆ. ಇದಕ್ಕೆ ಕಾರಣವಾಗುವ ವಂಶವಾಹಿ ೨೧ನೆಯ ಕ್ರೋಮೋಸೋಮಿನಲ್ಲಿದೆ. ಈ ವಂಶವಾಹಿ ಉತ್ಪರಿವರ್ತನೆಗೆ ಒಳಗಾದಾಗ ಸಿಸ್ಟಾಟಿನ್-B ಎಂಬ ಕಿಣ್ವವು ಉತ್ಪಾದನೆಯಾಗುವುದಿಲ್ಲ. ಆದರೆ ಈ ಕಿಣ್ವದ ಕೊರತೆ ಹೇಗೆ ಅಪಸ್ಮಾರಕ್ಕೆ ಕಾರಣವಾಗಬಹುದು ? ಎಂಬ ವಿವರ ತಿಳಿದುಬಂದಿಲ್ಲ.

# "ಬಾಗಿಲು ತೆಗೆಯೇ ಸೇಸಮ್ಮ"

## ಕೆಂಪು ರಕ್ತಕಣಗಳು ರಕ್ತದೊತ್ತಡವನ್ನು ನಿಯಂತ್ರಿಸುತ್ತವೆಯೇ?




೧. ಶ್ವಾಸಕೋಶದಲ್ಲಿ ಹಿಮೊಗ್ಲೋಬಿನ್ $O_2$ನ್ನು ಬಂಧಿಸುವುದರ ಜೊತೆಗೆ NOನನ್ನೂ ಸಹ ಬಂಧಿಸಿ ಸಾಗಿಸುತ್ತದೆ ($SNO_2$)

೨. SNO ರಕ್ತನಾಳಗಳ ವ್ಯಾಸವನ್ನು ಹಿಗ್ಗಿಸುತ್ತದೆ. ಆಗ ಕೆಂಪು ರಕ್ತಕಣ ಒಳಪ್ರವೇಶಿಸಿ $o_2$ನ್ನು ಬಿಡುಗಡೆ ಮಾಡುತ್ತದೆ.

೩. ಹಿಮೊಗ್ಲೋಬಿನ್ ನಂತರ $Co_2$ನ ಜೊತೆ ಹೊರಬಂದು ಅಲ್ಲಿರುವ NOನನ್ನು ಕರೆದುಕೊಂಡು ಶ್ವಾಸಕೋಶದತ್ತ ಪ್ರಯಾಣ ಮಾಡುತ್ತದೆ.

★ ನಾವು ಬದುಕಲು ಆಮ್ಲಜನಕ ಬೇಕು. ಸಕಾಲದಲ್ಲಿ $Co_2$ನನ್ನು ನಿವಾರಿಸದಿದ್ದರೆ ಸಾವು ಬರುತ್ತದೆ.

★ ಆಮ್ಲಜನಕ $Co_2$ ಮತ್ತು ಇಂಗಾಲದ ಡೈ ಆಕ್ಸೈಡ್ ವಿನಿಮಯವು ಶ್ವಾಸಕೋಶದಲ್ಲಿ ನಡೆಯುತ್ತದೆ.

★ ನಮ್ಮ ದೇಹದಲ್ಲಿ $o_2$ ಮತ್ತು $Co_2$ಗಳನ್ನು ಸಾಗಿಸುವ ವಾಹನವೆಂದರೆ ಹಿಮೊಗ್ಲೋಬಿನ್! ಇದು ಕೆಂಪು ರಕ್ತ ಕಣಗಳಲ್ಲಿ ಇರುತ್ತದೆ.

★ ಆಮ್ಲಜನಕವನ್ನು ಶ್ವಾಸಕೋಶಗಳಲ್ಲಿ ಪಡೆದು ರಕ್ತ ನಾಳದ ಮೂಲಕ ದೇಹದ ಎಲ್ಲ $O_2$ ಜೀವಕೋಶಗಳನ್ನು ತಲುಪುತ್ತವೆ ಹಾಗೂ ಹೊತ್ತು ತಂದ ಹೊರೆಯನ್ನು ಇಳಿಸುತ್ತವೆ. ಹಾಗೂ ಉಪಾಪಚಯದ (ಮೆಟಬಾಲಿಸಂ) ಫಲವಾಗಿ ರೂಪುಗೊಂಡಿರುವ $Co_2$ನ್ನು ಹೊತ್ತು ಶ್ವಾಸಕೋಶಗಳ ಕಡೆಗೆ ಧಾವಿಸುತ್ತವೆ. $Co_2$ ಅಲ್ಲಿ ಬಿಟ್ಟು ಮತ್ತೆ $O_2$ವನ್ನು ಹೊತ್ತು ಜೀವಕೋಶಗಳ ಕಡೆಗೆ ಧಾವಿಸುತ್ತವೆ. ಹೆಚ್ಚು ಕಡಿಮೆ ಕೆಂಪು ರಕ್ತಕಣಗಳ ಒಳಗಿರುವ ಹಿಮೊಗ್ಲೋಬಿನ್ ಸರಕು ಸಾಮಗ್ರಿಗಳನ್ನು ಸಾಗಿಸುವ ಲಾರಿಗಳಂತೆ ಕೆಲಸ ಮಾಡುತ್ತದೆ ಎನ್ನಬಹುದು.

ಇಷ್ಟು ಮಾಹಿತಿ ನಮಗೆಲ್ಲ ತಿಳಿದಿರುವಂತಹದ್ದೆ. ಆದರೆ ಈ ಚಕ್ರದಲ್ಲಿ ಇಷ್ಟೇ ಕೆಲಸ ನಡೆಯುತ್ತಿದೆ ಎಂದು ನಾವು ಇದುವರೆಗೆ ಭಾವಿಸಿದ್ದೆವು. ಇದು ಸರಿಯಲ್ಲ. ಇದಕ್ಕಿಂತಲೂ ಹೆಚ್ಚಿನ ಕಾರ್ಯಗಳು ನಡೆಯುತ್ತಿವೆ ಎಂಬ ಹೊಸ ಮಾಹಿತಿಯನ್ನು ನೀಡಿ ನಮ್ಮನ್ನೆಲ್ಲ ಬೆಚ್ಚಿ ಬೀಳಿಸಿದ್ದಾರೆ ಡ್ಯೂಕ್ ಯೂನಿವರ್ಸಿಟಿ ಮೆಡಿ ಕಲ್ ಸೆಂಟರ್‌ನಲ್ಲಿರುವ ವಿಜ್ಞಾನಿಗಳು.

ಹಿಮೊಗ್ಲೋಬಿನ್ $O_2$ವನ್ನು ಹೊತ್ತೊಯ್ಯುವುದರ ಜೊತೆಗೆ ನೈಟ್ರಿಕ್ ಆಕ್ಸೈಡನ್ನೂ (NO) ಹೊತ್ತೊಯ್ಯುತ್ತದೆಯಂತೆ. ಈ NO, $O_2$ ವಿತರಣೆಯಲ್ಲಿ ನೆರವಾಗುತ್ತದೆಯಂತೆ!

ನೈಟ್ರಿಕ್ ಆಕ್ಸೈಡ್ ಒಂದು ಅನಿಲ. ಇದನ್ನು ರಕ್ತನಾಳಗಳು ಉತ್ಪಾದಿಸುತ್ತವೆ. ರಕ್ತನಾಳಗಳು ವಿಸ್ತಾರವಾಗಬೇಕು ಎಂದು ಬಯಸಿದಾಗ ಅವು NOನ್ನು ಉತ್ಪಾದಿಸುತ್ತವೆ. ಅದರ ಫಲವಾಗಿ ನಾಳದ ವ್ಯಾಸ ಹಿಗ್ಗುತ್ತದೆ.

ಹಿಮೊಗ್ಲೋಬಿನ್‌ನಲ್ಲಿ ಎರಡು ಭಾಗಗಳಿವೆ. ಹಿಮ್ ಮತ್ತು ಗ್ಲೋಬಿನ್. ಹಿಮ್ ಎಂಬುದು ಕಬ್ಬಿಣದ ಅಂಶ. ಗ್ಲೋಬಿನ್ ಎಂಬುದು ಒಂದು ಪ್ರೋಟೀನು. $O_2$ ಹಿಮ್‌ನೊಡನೆ ಸಡಿಲ ಬಂಧನಕ್ಕೊಳಗಾಗಿ ಸಾಗಾಣೆಯಾಗುತ್ತದೆ. ಅದರಂತೆಯೇ NO ಸಹ ಹಿಮ್‌ನೊಡನೆ ಬಂಧನಗೊಳ್ಳುತ್ತದೆ.

ವಿಜ್ಞಾನಿಗಳು ಹಿಮ್‌ನೊಡನೆ NO ಬಂಧನಗೊಳ್ಳುವುದಾದರೆ, ದೇಹದಲ್ಲಿ ಇರುವ ಎಲ್ಲ NO ಹಿಮ್‌ನೊಡನೆ ಕೈ ಕೈ ಬೆರೆಸಿ ಏಕೆ ಸಾಗುವುದಿಲ್ಲ ಎಂದು ತಲೆ ಕೆಡಿಸಿಕೊಳ್ಳಲಾರಂಭಿಸಿದರು. ಹೀಗಾಗಲು ಸಾಧ್ಯವಿಲ್ಲ. ಹೀಗೆ ಆಗುತ್ತಿಲ್ಲ ಹಾಗೂ ಆಗಲೂ ಬಾರದು. ಏಕೆಂದರೆ ದೇಹದಲ್ಲಿ ಇರುವ NO ಎಲ್ಲ ಬಂಧನ ಗೊಂಡುಬಿಟ್ಟರೆ ರಕ್ತನಾಳಗಳಲ್ಲಿ ಸಂಕುಚಿತಗೊಂಡು ಬಿಡುತ್ತವೆ. ರಕ್ತನಾಳಗಳ ವ್ಯಾಸ ಕಡಿಮೆಯಾಗುತ್ತಿರುವಂತೆಯೇ, ರಕ್ತ ಒತ್ತಡ ತಟ್ಟನೆ ಏರಿಬಿಡುತ್ತದೆ. ಆಗ ಯಾವ ಅವಘಡ ಬೇಕಾದರೂ ಸಂಭವಿಸಬಹುದು. ಆದರೆ ಹೀಗೆ ರಕ್ತದ ಒತ್ತಡ ಏರುವುದಿಲ್ಲ. ಅಂದ ಮೇಲೆ ಹಿಮೊಗ್ಲೋಬಿನ್ ಏಕೆ ಸಾಗಿಸುತ್ತದೆ. NOನ್ನು ?

ಇದಕ್ಕೆ ವಿವರಣೆ ನೀಡುತ್ತಾರೆ ಹೃದಯತಜ್ಞ ಜೊನಾಥನ್ ಸ್ಟಾಮ್ಲರ್ ಮತ್ತು ಜೀವರಾಸಾಯನಿಕ ತಜ್ಞ ಜೋಸೆಫ್ ಬೊನಾವೆಂಚುರ. ಹಿಮೊಗ್ಲೋಬಿನ್ NOನ್ನು ದೇಹದ ಇತರ ಭಾಗಗಳಲ್ಲಿ ಬಂಧಿಸಿ ಸಾಗಿಸುವುದಕ್ಕಿಂತ ಹೆಚ್ಚಾಗಿ ಶ್ವಾಸಕೋಶಗಳಲ್ಲಿ ಸಾಗಿಸುತ್ತದೆಯಂತೆ. ಶ್ವಾಸಕೋಶಗಳಲ್ಲಿ ಉತ್ಪಾದನೆಯಾಗುವ NO ವಿಶೇಷವಾದದ್ದು. ಈ ವಿಶೇಷ NO, ಹಿಮೊಗ್ಲೋಬಿನ್‌ನಲ್ಲಿರುವ ಗಂಧಕ ಅಣುವಿಗೆ ಸಡಿಲವಾಗಿ ಅಂಟಿಕೊಳ್ಳುತ್ತದೆ. ಆಗ ರೂಪುಗೊಳ್ಳುವ ರಚನೆಯನ್ನು SNO ಎಂದು ಕರೆಯಬಹುದು.

ಜೀವಕೋಶಗಳಿಗೆ ಆಮ್ಲಜನಕವನ್ನು ಬಿಡುಗಡೆ ಮಾಡಲು ಬಂದ ಹಿಮೊಗ್ಲೋಬಿನ್ ಮೊದಲು SNOನ್ನು ಬಿಡುಗಡೆ ಮಾಡುತ್ತದೆ. ಈ SNO "ಬಾಗಿಲು ತೆಗೆಯೇ ಸೇಸಮ್ಮ"

# ಹೃದಯ ವೈಫಲ್ಯ ರೋಗಿಗಳ ಆಶಾಕಿರಣ | ಹೃತ್ಕುಕ್ಷಿ ಪುನರ್ರಚನೆ

## ಬದಲಿ ಹೃದಯವನ್ನು ಬಯಸುವ ರೋಗಕ್ಕೊಂದು ಬದಲಿ ಚಿಕಿತ್ಸೆ!

ಹೃದಯ ಒಂದು ಪಂಪು. ಆರೋಗ್ಯವಂತನ ಹೃದಯವು ನಿಮಿಷಕ್ಕೆ ಸರಾಸರಿ ೭೨ ಸಲ ರಕ್ತವನ್ನು ಪಂಪ್ ಮಾಡಬೇಕಾಗುತ್ತದೆ. ಈ ಪಂಪಿಗೆ ವಿಶ್ರಾಂತಿ ಎಂಬುದಿಲ್ಲ. ಹಗಲು ರಾತ್ರಿಯೆನ್ನದೆ, ಹುಟ್ಟಿನಿಂದ ಸಾಯುವವರಿಗೆ ನಿರಂತರವಾಗಿ ದುಡಿಯುತ್ತಲೆ ಇರಬೇಕಾಗುತ್ತದೆ ಈ ಹೃದಯ.

ಇಂತಹ ಹೃದಯ ಆಗಾಗ್ಗೆ ಸೋಲುವುದುಂಟು. ಆಗ ಅದು ತನ್ನ ಸಹಜ ಸಾಮರ್ಥ್ಯವನ್ನು ಕಳೆದು ಕೊಳ್ಳುತ್ತದೆ. ದೇಹಕ್ಕೆ ಅಗತ್ಯವಾದ ರಕ್ತವನ್ನು ಪಂಪ್ ಮಾಡಲು ವಿಫಲವಾಗುತ್ತದೆ. ಇದನ್ನು ಹೃದಯ ವೈಫಲ್ಯ ಅಥವಾ ಹಾರ್ಟ್ ಫೇಲ್ಯೂರ್ ಎಂದು ಕರೆಯುತ್ತೇವೆ.

ವಿಫಲವಾಗಿರುವ ಹೃದಯದ ಸ್ನಾಯುಗಳು ದಪ್ಪಗಾಗುತ್ತವೆ. ಹೃದಯದ ಗಾತ್ರ ಹಿಗ್ಗುತ್ತದೆ. ಕೆಲವು ಸಂದರ್ಭಗಳಲ್ಲಿ ಹೃದಯ ತನ್ನ ಸಹಜ ಗಾತ್ರಕ್ಕಿಂತಲೂ ಎರಡು ಪಟ್ಟು ಹಿಗ್ಗಬಹುದು. ಇದಕ್ಕೆ ನಿಖರವಾದ ಕಾರಣ ನಮಗೆ ಗೊತ್ತಿಲ್ಲ. ಆದರೆ ಈ ರೀತಿ ಹಿಗ್ಗದ 'ವಿಶಾಲ ಹೃದಯ'' ದುರ್ಬಲವಾಗುತ್ತದೆ, ನಿತ್ರಾಣ ಗೊಳ್ಳುತ್ತದೆ. ವ್ಯಕ್ತಿಯು ತನ್ನ ದೈನಂದಿನ ಕೆಲಸಗಳನ್ನು ಕ್ರಮವಾಗಿ ನಿಲ್ಲಿಸಲಾರಂಭಿಸುತ್ತಾನೆ. ಕೊನೆಗೆ ಹಾಸಿಗೆ ಹಿಡಿಯುತ್ತಾನೆ. ಅತ್ತಿತ್ತ ಹೊರಳಲೂ ಆಗದಷ್ಟು ಸುಸ್ತಾಗುತ್ತಾನೆ. ವಿಫಲಗೊಂಡ ಹೃದಯ ಸದ್ದಿಲ್ಲದಂತೆ ಸ್ಥಗಿತವಾಗುತ್ತದೆ. ಆಗ ಸಾವು ಸಂಭವಿಸುತ್ತದೆ.

ಈ ರೀತಿ ವಿಫಲಗೊಂಡ ಹೃದಯಕ್ಕೆ ಇದುವರೆಗೂ ಇದ್ದ ಏಕೈಕ ಚಿಕಿತ್ಸೆಯೆಂದರೆ, ಬದಲಿ ಹೃದಯ ಜೋಡಣೆ ! ಆದರೆ ಬೇಡಿಕೆಗೆ ತಕ್ಕ ಪೂರೈಕೆ ಇಲ್ಲ. ಹಾಗಾಗಿ ಬದಲಿ ಹೃದಯ ಹೊಂದಿ ಪುನರ್ಜೀವನ ಆರಂಭಿಸುವ ಅವಕಾಶ ಬಹುಪಾಲು ರೋಗಿಗಳಿಗೆ ಇರುವುದಿಲ್ಲ. ಅವರು ಸದ್ದಿಲ್ಲದಂತೆ ತಮ್ಮ ಹಾಸಿಗೆಯಲ್ಲೇ ಕೊನೆಯುಸಿರನ್ನು ಎಳೆಯಬೇಕಾಗುತ್ತದೆ.

ಇಂಥವರಿಗಾಗಿ ಹೊಸ ಸುದ್ದಿಯೊಂದು



ಇತ್ತೀಚೆಗೆ ಬಂದಿದೆ. ಅದುವೆ ಹೃತ್ಕುಕ್ಷಿ ಪುನರ್ ರಚನೆ ಅಥವಾ ವೆಂಟ್ರಿಕ್ಯುಲರ್ ರೀ ಮಾಡೆಲಿಂಗ್!

ರ‍್ಯಾಂಡಾಸ್ ಬ್ಯಾಟಿಸ್ಟ ಓರ್ವ ಹೃದಯ ಶಸ್ತ್ರಜ್ಞ. ದಕ್ಷಿಣ ಬ್ರೆಜಿಲಿನ ಕ್ಯೂರಿತಾಬ ಬಳಿಯ ಹಳ್ಳಿಯೊಂದರಲ್ಲಿ ಒಂದುಪುಟ್ಟ ಚಿಕಿತ್ಸಾಲಯವನ್ನು ನಡೆಸುತ್ತಿದ್ದಾನೆ. ಈತ ರೂಪಿಸಿದ್ದಾನೆ ಈ ಹೊಸ ಶಸ್ತ್ರಚಿಕಿತ್ಸೆ ಹೃತ್ಕುಕ್ಷಿ ಪುನಾರ್‌ರಚನೆ.

ಹೃದಯದಲ್ಲಿ ನಾಲ್ಕು ಭಾಗಗಳಿವೆ. ಎಡ ಹೃತ್ಕರ್ಣ ಮತ್ತು ಎಡ ಹೃತ್ಕುಕ್ಷಿ ಹಾಗೂ ಬಲ ಹೃತ್ಕರ್ಣ ಮತ್ತು ಬಲಹೃತ್ಕುಕ್ಷಿ. ಇವುಗಳಲ್ಲಿ ಎಡ ಹೃತ್ಕುಕ್ಷಿಯು ಪ್ರಧಾನವಾದದ್ದು. ಶ್ವಾಸಕೋಶಗಳಿಂದ ಆಮ್ಲಜನಕವನ್ನು ಹೊತ್ತ ರಕ್ತವು ಎಡಹೃತ್ಕುಕ್ಷಿಯನ್ನು ಸೇರುತ್ತದೆ. ಎಡ ಹೃತ್ಕುಕ್ಷಿಯು ಸಂಕುಚಿಸಿದಾಗ, ರಕ್ತವು ಮಹಾಧಮನಿಯ

(ಮುಂದಿನ ಪುಟ ನೋಟ)

---

ಎನ್ನುತ್ತದೆ. ಆಗ ಜೀವಕೋಶಗಳಿಗೆ ಸಂಪರ್ಕ ಒದಗಿಸುವ ರಕ್ತನಾಳಗಳ ದ್ವಾರ ತೆರೆದುಕೊಳ್ಳುತ್ತದೆ. ವಿಸ್ತಾರವಾಗುತ್ತದೆ. ಆಗ ಅದನ್ನು ಪ್ರವೇಶಿಸುತ್ತದೆ. $O_2$ ಹೊತ್ತ ಕೆಂಪು ರಕ್ತಕಣ. ಅಲ್ಲಿ $O_2$ ಬಿಟ್ಟು $SNO_2$ನ್ನು ಹೊತ್ತು ಹಿಂದಕ್ಕೆ ಮರಳುತ್ತದೆ ಕೆಂಪು ರಕ್ತಕಣ.

ಕೆಂಪು ರಕ್ತಕಣ ಹೊರಬರುತ್ತಿರುವಂತೆ ''ಸೇಸಮ್ಮ ಬಾಗಿಲನ್ನು ಮುಚ್ಚುತ್ತದೆ'' ಅಲ್ಲಿರುವ NOನ ಕೈ ಹಿಡಿದು ಶ್ವಾಸಕೋಶದತ್ತ ಸಾಗುತ್ತದೆ ಕೆಂಪು ರಕ್ತಕಣ.

ನಮ್ಮ ದೇಹದಲ್ಲಿ NO ಚಕ್ರ ನಡೆಯುತ್ತಿರುವ ಮಾಹಿತಿ ಇದುವರೆಗೂ ನಮಗೆ ತಿಳಿದಿರಲಿಲ್ಲ. ಈಗಷ್ಟೇ ತಿಳಿದುಬರುತ್ತಿದೆ. ಅಂದರೆ ಕೆಂಪುರಕ್ತಕಣ ಕೇವಲ ಅನಿಲ ಸಾಗಾಣಿಕೆಗಳಲ್ಲಿ ಮಾತ್ರವಲ್ಲ, ರಕ್ತದೊತ್ತಡವನ್ನೂ ನಿಯಂತ್ರಿಸುವಲ್ಲಿ ಪಾತ್ರವಹಿಸುತ್ತಿದೆ ಎಂಬ ಅಂಶ ನಮಗೆ ತಿಳಿದುಬಂದಂತಾಯಿತು. ಎನ್ನುತ್ತಾರೆ ಜೋಸೆಫ್ ಬೋನಾವೆಂಚುರ.

# ವೈದ್ಯ- ಸುದ್ಧಿ

ನಾವು ನೀವು ಕಂಡ ಹೈಟೆಕ್ ಯುದ್ಧ ಎಂದರೆ ಕೊಲ್ಲಿಯ ಯುದ್ಧ. ಈ ಯುದ್ಧ ಮುಗಿದು ಇಂದಿಗೆ ಆರು ವರ್ಷಗಳೇ ಸಂದಿವೆ.

ಅಂದಿನ ಯುದ್ಧ ಪರಿಣಾಮವಾಗಿ ಇಂದು ತಲೆದೋರಿರುವ ಹೊಸ ರೋಗ ಕೊಲ್ಲಿ ಯುದ್ಧ ಲಕ್ಷಣಾವಳಿ ಅಥವಾ ಗಲ್ಫ್ ವಾರ್ ಸಿಂಡ್ರೋಮ್!

ಅಂದಿನ ಯುದ್ಧದಲ್ಲಿ ಭಾಗವಹಿಸಿದ ಯೋಧರು ಕೆಲವು ವಿಚಿತ್ರ ರೋಗಲಕ್ಷಣಗಳಿಂದ ಇಂದು ನರಳುತ್ತಿದ್ದಾರೆ. ತಲೆನೋವು, ಸುಸ್ತು, ಸ್ನಾಯು ಹಾಗೂ ಕೀಲುಗಳಲ್ಲಿ ನೋವು, ನೆನಪಿನ ಶಕ್ತಿಯ ಕುಂದುವಿಕೆ, ಖಿನ್ನತೆ ಇತ್ಯಾದಿ ತೊಂದರೆಗಳು ಕಂಡುಬರುತ್ತಿವೆ. ಇವೆಲ್ಲ 'ಕೊಲ್ಲಿ ಯುದ್ಧ ಲಕ್ಷಣಾವಳಿ'ಯ ಫಲ ಎಂದು ಕೆಲವರು ವಾದಿಸಿದರೆ, ಉಳಿದವರು ಹಾಗೆನ್ನಲು ಇನ್ನೂ ಸಾಕಷ್ಟು ಪುರಾವೆ ಸಿಕ್ಕಿಲ್ಲ ಎನ್ನುತ್ತಿದ್ದಾರೆ. ಕಳೆದ ೫ ವರ್ಷಗಳಿಂದ ನಡೆಯುತ್ತಿರುವ ಈ ಚರ್ಚೆಗೆ ೧೯೯೬ರಲ್ಲಿ ಒಂದು ನಿರ್ದಿಷ್ಟ ರೂಪ ಬಂದಿದೆ. ಕೆಲವು ಅಧ್ಯಯನಗಳ ಪ್ರಕಾರ, ಕೊಲ್ಲಿ ಯುದ್ಧದಲ್ಲಿ ಬಳಸಿದ ''ನರಾನಿಲ' (ನರ್ವ್ ಗ್ಯಾಸ್) ಈ ಲಕ್ಷಣಗಳಿಗೆ ಕಾರಣವಾಗಿವೆ, ಈ ತೊಂದರೆ ರಾಸಾಯನಿಕ ಪ್ರಚೋದಿತವಾದದ್ದು ಎಂಬ ಅಂಶಕ್ಕೆ ಹೆಚ್ಚು ಪುಷ್ಟಿ ದೊರೆಯುತ್ತಿದೆ.

## ಹೊಸ ರೋಗ "ಕೊಲ್ಲಿಯುದ್ಧ ಲಕ್ಷಣಾವಳಿ"

ಮಾರ್ಚ್ ೧೯೯೧ರಲ್ಲಿ ಅಮೆರಿಕ ಸೇನೆಯ ೩೭ನೆಯ ಇಂಜನಿಯರಿಂಗ್ ಬೆಟಾಲಿಯನ್, ದಕ್ಷಿಣ ಇರಾಕ್‌ನಲ್ಲಿದ್ದ ಯುದ್ಧ ಸಾಮಾಗ್ರಿಯ ಕೋಠಿಯ ಮೇಲೆ ಧಾಳಿ ನಡೆಸಿತು. ಈ ಕೋಠಿಯಲ್ಲಿ ಭಯಾನಕ ''ಸಾಸಿವೆ ಅನಿಲ'' (ಮಸ್ಟರ್ಡ್ ಗ್ಯಾಸ್)ದ ದಾಸ್ತಾನಿತ್ತು. ಧಾಳಿಯಲ್ಲಿ ಇವೆಲ್ಲ ಸ್ಫೋಟಿಸಿ, ವಿಷಾನಿಲಗಳು ಎಲ್ಲೆಡೆ ಹರಡಿದವು. ಈ ಆಕ್ರಮಣದಲ್ಲಿ ಕೇವಲ ೧೫೦ ಅಮೆರಿಕನ್ ಯೋಧರು ಭಾಗವಹಿಸಿದ್ದರು. ಆದರೆ ಅನಿಲವು ಸುತ್ತ ಮುತ್ತಲ ಪ್ರದೇಶದಲ್ಲಿ ಬೀಡುಬಿಟ್ಟಿದ್ದ ಸುಮಾರು ೫,೦೦೦ ಅಮೆರಿಕನ್ ಸೈನಿಕರಿಗೆ ಹರಡಿತು. ಆ ಸೈನಿಕರು ಅನಿಲದ ಅಲ್ಪಮಟ್ಟದ ಪ್ರಮಾಣಕ್ಕೆ ಗುರಿಯಾದುದರಿಂದ, ಅವರಲ್ಲಿ ದುಷ್ಪರಿಣಾಮಗಳು ತಕ್ಷಣ ಗೋಚರವಾಗಲಿಲ್ಲ. ಸಾಕಷ್ಟು ಅವಧಿಯ ನಂತರ ನಿಧಾನವಾಗಿ ರೋಗಲಕ್ಷಣಗಳು ಕಾಣುತ್ತಿವೆ.

ಕೊಲ್ಲಿ ಯುದ್ಧದಲ್ಲಿ ಭಾಗವಹಿಸಿದ್ದ ಯೋಧರು, ವಿವಿಧ ರೀತಿಯ ರಾಸಾಯನಿಕ ವಸ್ತುಗಳಿಗೆ ಗುರಿಯಾಗಿದ್ದರು. ಉದಾ: ಕೀಟನಾಶಕಗಳು, ಕೀಟರೋಧಕ ವಸ್ತುಗಳು, ಅಲ್ಲದೆ ಇರಾಕಿನವರು ನರಾನಿಲ ಅಸ್ತ್ರ ಪ್ರಯೋಗಿಸಬಹುದೆಂಬ ಸುಳಿವು ದೊರೆತದ್ದರಿಂದ, ಅದನ್ನು ನಿರ್ವೀರ್ಯಗೊಳಿಸಲು ಅಗತ್ಯವಾದ ಪ್ರತಿ ರಾಸಾಯನಿಕವನ್ನು ತಮ್ಮ ಮೈಗೆಲ್ಲಾ ಬಳಿದುಕೊಳ್ಳುತ್ತಿದ್ದರು. ಈ ರಾಸಾಯನಿಕ ವಸ್ತುಗಳನ್ನು ಪ್ರತ್ಯೇಕವಾಗಿ ಬಳಸಿದಾಗ ಸುರಕ್ಷಿತವೇ ಆಗಿರಬಹುದು. ಆದರೆ, ಎಲ್ಲವನ್ನು ಒಟ್ಟಿಗೆ ಬಳಸಿದಾಗ ವಿಷಕರವಾಗಬಹುದು ಎನ್ನುತ್ತಾರೆ ಡ್ಯೂಕ್ ವಿಶ್ವವಿದ್ಯಾನಿಲಯದ ಔಷಧ ಶಾಸ್ತ್ರಜ್ಞ ಮೊಹಮದ್ ಅಬಾ ಡೋನಿಯ. ಈ ಅನಿಲಗಳ ಜೊತೆಗೆ ಅಲ್ಪಪ್ರಮಾಣದ ಮಸ್ಟರ್ಡ್ ಅನಿಲ ಬೆರೆತು ಈ ಕೊಲ್ಲಿಯುದ್ಧದ ಲಕ್ಷಣಾವಳಿಯನ್ನು ಉಂಟು ಮಾಡಿರಬಹುದೆ ? ಇಂದು ಪ್ರಯೋಗಾಲಯದಲ್ಲಿ ವಿವಿಧ ನರಾನಿಲಗಳ ಬೀರುವ ದುಷ್ಪರಿಣಾಮಗಳ ಕುರಿತು ಅಧ್ಯಯನ ನಡೆಯುತ್ತಿದೆ. ಹಾಗೆಯೇ ಇತರರೂ ಸಹ ವಿವಿಧ ವ್ಯಾಕ್ಸೀನುಗಳು, ಬಣ್ಣಗಳು, ಕ್ಷೀಣಿಸಿದ ಯುರೇನಿಯಂ ಹಾಗೂ ಹೊಗೆಗಳು ಕೊಲ್ಲಿಯುದ್ಧ ಲಕ್ಷಣಾವಳಿಗೆ ಕಾರಣವಾಗಿರಬಹುದೆ? ಎಂದು ಸಂಶೋಧನೆ ನಡೆಸುತ್ತಿದ್ದಾರೆ. ಇಷ್ಟರಲ್ಲಿ ಪುರಾವೆ ಸಹಿತ ಸತ್ಯ ಹೊರಬೀಳಬಹುದು ಎಂಬ ನಿರೀಕ್ಷೆಯಿದೆ. ●

(ಹಿಂದಿನ ಪುಟದಿಂದ)

## ಹೃದಯ ವೈಫಲ್ಯ ರೋಗಿಗಳ ಆಶಾಕಿರಣ

(ಅಯೋರ್ಟಾ) ಮೂಲಕ ದೇಹದ ಎಲ್ಲ ಭಾಗಗಳಿಗೆ ಸರಬರಾಜಾಗುತ್ತದೆ.

ಹೃದಯ ವೈಫಲ್ಯದಿಂದ ನರಳುವ ರೋಗಿಗಳಲ್ಲಿ ಈ ಎಡ ಹೃತ್ಕುಕ್ಷಿ ಹಿಗ್ಗಿ ದುರ್ಬಲವಾಗಿರುತ್ತದೆ. ಬ್ಯಾಟಿಸ್ಟ ಹಿಗ್ಗಿರುವ ಎಡ ಹೃತ್ಕುಕ್ಷಿಯ ಸ್ನಾಯುವನ್ನು ಸೂಕ್ತ ರೀತಿಯಲ್ಲಿ ಕತ್ತರಿಸಿ, ಹೃತ್ಕುಕ್ಷಿಯೊಳಗಿರುವ ಪೊಳ್ಳಿನ ಗಾತ್ರವನ್ನು ಕಡಿಮೆ ಮಾಡಿ ಹೊಲಿದಾಗ ಹೃದಯದ ಪಂಪಿನ ಸಾಮರ್ಥ್ಯ ಗಣನೀಯವಾಗಿ ಹಿಗ್ಗಿತು!

ಬ್ಯಾಟಿಸ್ಟ ಹೇಳುತ್ತಾರೆ ''ಹೃದಯ ವೈಫಲ್ಯ ರೋಗಿಗಳನ್ನು ಕೊಲ್ಲುತ್ತಿರುವುದು ದುರ್ಬಲಗೊಂಡ ಹೃದಯ ಸ್ನಾಯುವಲ್ಲ. ಅಳತೆ ಮೀರಿ ಹಿಗ್ಗರುವ ಹೃದಯ! ಹಾಗಾಗಿ ಹೃದಯದ ಮೊದಲಿನ ಗಾತ್ರವನ್ನು ಪುನರ್ ರಚಿಸಿದರೆ, ದುರ್ಬಲಗೊಂಡ ಹೃದಯ ಸ್ನಾಯುವೇ ಹೆಚ್ಚು ದಕ್ಷತೆಯಿಂದ ರಕ್ತವನ್ನು ಪಂಪ್ ಮಾಡಬಲ್ಲುದು'' ಎನ್ನುತ್ತಾರೆ.

ಡ್ಯಾಂಟಾಸ್ ಬ್ಯಾಟಿಸ್ಟ್ ೧೯೯೪ರಿಂದ ಇದುವರೆಗೂ ಇಂತಹ ಸುಮಾರು ೪೦೦ ಶಸ್ತ್ರ ಚಿಕಿತ್ಸೆಗಳನ್ನು ನಡೆಸಿದ್ದಾರೆ. ಸಾಮಾನ್ಯವಾಗಿ ಬ್ಯಾಟಿಸ್ಟನ ಬಳಿ ಬರುವ ರೋಗಿಗಳು ಬಡವರು, ಅನೇಕರ ಬಳಿ ಫೋನ್ ಸಹ ಇರುವುದಿಲ್ಲ. ಹಾಗಾಗಿ ಶಸ್ತ್ರಚಿಕಿತ್ಸೆಯ ಪರಿಣಾಮವನ್ನು ಅನೇಕ ಸಂದರ್ಭಗಳಲ್ಲಿ ತಿಳಿಯಲು ಸಾಧ್ಯ ವಾಗುತ್ತಿಲ್ಲ ಎಂದು ವಿಷಾದಿಸುತ್ತಾನೆ. ಆದರೂ ಸಹ ಈ ಶಸ್ತ್ರ ಚಿಕಿತ್ಸೆಯ ಎರಡು ವರ್ಷಗಳ ನಂತರ ಸುಮಾರು ಶೇಕಡಾ ೪೦ರಷ್ಟು ರೋಗಿಗಳು ಮಾತ್ರ ಸಾಯಬಹುದು ಎನ್ನುತ್ತಾನೆ ಬ್ಯಾಟಿಸ್ಟ್.

ಬ್ಯಾಟಿಸ್ಟನ ಈ ನೂತನ ಶಸ್ತ್ರಚಿಕಿತ್ಸೆಯನ್ನು ಆತನ ಸಹೋದ್ಯೋಗಿಗಳು ಒಪ್ಪಲಿಲ್ಲ. ಟೀಕೆ ಮಾಡಲಾರಂಭಿಸಿದರು. ಆದರೆ ಬ್ಯಾಟಿಸ್ಟ್ ಎದೆಗುಂದಿಲ್ಲ. ತನ್ನ ನೂತನ ಶಸ್ತ್ರಚಿಕಿತ್ಸಾ ವಿಧಾನದಿಂದ ಚಿಕಿತ್ಸೆಯೇ ಇಲ್ಲದ ರೋಗಿಗಳಿಗೆ ಕನಿಷ್ಠ ಎರಡು ವರ್ಷಗಳ ಜೀವದಾನವನ್ನಾದರೂ ನೀಡುತ್ತಿದ್ದಾನೆ.

ಬ್ಯಾಟಿಸ್ಟನ ನೂತನ ಶಸ್ತ್ರಚಿಕಿತ್ಸಾ ವಿಧಾನವನ್ನು ಕಣ್ಣಾರೆ ನೋಡಲು ಅಮೆರಿಕದ ಮೂವರು ಹೃದಯ ಶಸ್ತ್ರಜ್ಞರು ಬ್ರೆಜಿಲ್‌ಗೆ ಹೋದರು. ಬ್ಯಾಟಿಸ್ಟ ಕೆಲಸ ಮಾಡುವುದನ್ನು ನೋಡಿ ಪ್ರಭಾವಿತರಾದರು. ಅವರಲ್ಲಿ ಕ್ಲೀವ್‌ಲ್ಯಾಂಡ್ ಕ್ಲಿನಿಕ್‌ನ ಪ್ಯಾಟ್ರಿಕ್ ಮ್ಯಾಕ್ ಕಾರ್ಥಿ ತನ್ನ ಊರಿಗೆ ಬಂದು, ೨೪ ರೋಗಿಗಳ ಮೇಲೆ ಈ ನೂತನ ಶಸ್ತ್ರಚಿಕಿತ್ಸೆಯನ್ನು ನಡೆಸಿದರು. ಅವರಲ್ಲಿ ೨೩ ಜನರು ೨ ವರ್ಷಗಳಿಗಿಂತಲೂ ಅಧಿಕ ಕಾಲ ಬದುಕಿದರು. ಒಬ್ಬ ಮಾತ್ರ ಮರಣ ಹೊಂದಿದ.

ಮ್ಯಾಕ್‌ಕಾರ್ಥಿಯವರು ''ಈ ಶಸ್ತ್ರ ಚಿಕಿತ್ಸೆಯನ್ನು ನಡೆಸಬೇಕಾದರೆ ಸೂಕ್ತ ರೋಗಿಯನ್ನು ಆಯ್ಕೆ ಮಾಡಿ ಕೊಳ್ಳಬೇಕು. ರೋಗಿಯ ಹೃದಯ ದುರ್ಬಲ ಗೊಂಡು ಹಿಗ್ಗಿದ್ದರೂ ಆರೋಗ್ಯವಾಗಿ ರಬೇಕು. ನಾರು ಗಟ್ಟಿರಬಾರದು. ಆಗ ಶಸ್ತ್ರಚಿಕಿತ್ಸೆ ಯಶಸ್ವಿಯಾಗುತ್ತದೆ. ಎಂದು ಹೇಳುತ್ತಾರೆ.

ಬ್ಯಾಟಿಸ್ಟರ ನೂತನ ಶಸ್ತ್ರಚಿಕಿತ್ಸಾ ವಿಧಾನವು ನಿಜಕ್ಕೂ ಯಶಸ್ವಿಯಾದಲ್ಲಿ, ಅದು ಸಾವಿರಾರು ಜನರ ಪ್ರಾಣವನ್ನು ಉಳಿಸಬಲ್ಲದು. ಅಮೆರಿಕದಲ್ಲಿ ಬದಲಿ ಹೃದಯಕ್ಕಾಗಿ ಕಾಯುವ ೧೦ ಜನ ರೋಗಿಗಳಲ್ಲಿ ಒಬ್ಬರಿಗೆ ಮಾತ್ರ ಬದಲಿ ಹೃದಯ ದೊರೆಯುತ್ತದೆ. ಉಳಿದ ೯ ಜನರ ಪ್ರಾಣವನ್ನು ಉಳಿಸಬಲ್ಲದು ಈ ನೂತನ ವಿಧಾನ. ಆದರೆ ಟೆಕ್ಸಾಸ್ ಹಾರ್ಟ್ ಇನ್‌ಸ್ಟಿಟ್ಯೂಟ್‌ನ ಓ. ಹೆಚ್ ಫ್ರೇಜರ್ ''ಈ ನೂತನ ವಿಧಾನ ನಿಜಕ್ಕೂ ಭರವಸೆಯನ್ನು ನೀಡಿದೆ. ಅಲ್ಪ ಕಾಲಾವಧಿಯವರೆಗೆ ರೋಗಿ ಉತ್ತಮ ಜೀವನ ನಡೆಸಬಲ್ಲ. ಆದರೆ ದೀರ್ಘಾವಧಿಯವರೆಗೆ ಅದೇ ಫಲಿತಾಂಶವನ್ನು ನೀಡಬಲ್ಲದೆ?'' ಎಂಬ ಅಂಶವನ್ನು ಕಾಲ ಮತ್ತು ಅನುಭವ ಮಾತ್ರ ತಿಳಿಸಬಲ್ಲವು ಎನ್ನುತ್ತಾರೆ. ●

# ಸತ್ಯ ಘಟನೆಯ ಸುತ್ತ ಮುತ್ತ

**ಇದು ನಡೆದ ಸಂಗತಿ. ಆದರೆ ನಂಬಲು ಸಾಧ್ಯವಿರದಂಥ ಘಟನೆ.**

ಕುಮಾರಿ ಸರಳಾ ಪಿ.ಯು.ಸಿ. ವಿದ್ಯಾರ್ಥಿನಿ. ಸಹಪಾಠಿಗಳೊಡನೆ ಓದು ಹಾಗೂ ಆಟಗಳನ್ನು ಸಾಗಿಸಿಕೊಂಡು ಹೋಗುತ್ತಿದ್ದಳು. ಆಕೆಯ ಆರೋಗ್ಯವೂ ಚೆನ್ನಾಗಿತ್ತು. ತಂದೆ-ತಾಯಿಗಳಿಗೆ ಮುದ್ದಿನ ಮಗಳಾಗಿ ಬೆಳೆಯುತ್ತಿದ್ದಳು. ಕುಟುಂಬದಲ್ಲಿ ಸಂತೋಷ ತುಂಬಿ ತುಳುಕುತ್ತಿತ್ತು. ಸರಳಾನ ತಂದೆ ಮಾಧ್ಯಮಿಕ ಶಾಲೆಯಲ್ಲಿ ಶಿಕ್ಷಕರು. ಅವರ ಕೈಯಲ್ಲಿ ಕಲಿತ ಅನೇಕ ವಿದ್ಯಾರ್ಥಿಗಳು ದೊಡ್ಡ ದೊಡ್ಡ ಹುದ್ದೆಗಳನ್ನು ಅಲಂಕರಿಸಿದ್ದರು. ತಮ್ಮ ನೆಚ್ಚಿನ ಗುರುಗಳು ಏನು ಹೇಳಿದರೂ ಅದನ್ನು ಪೂರೈಸುತ್ತಿದ್ದರು. ಗುರುಗಳ ಸುಖ ದುಃಖಗಳಲ್ಲಿ ಅವರ ಜೊತೆಯಾಗಿ ನಿಲ್ಲುತ್ತಿದ್ದರು.

ಒಂದು ದಿನ ಸರಳಾ ಕಕ್ಕಸಕ್ಕೆ ಕುಳಿತಾಗ ಚಿಟ್ಟನೆ ಚೀರಿದಳು. ಮನೆ ಮಂದಿಯೆಲ್ಲ ಗಾಬರಿಯಿಂದ ಓಡಿ ಕಕ್ಕಸದ ಮುಂದೆ ಬಂದರು. ಬಾಗಿಲು ತೆಗೆದವಳೇ ಅಳಹತ್ತಿದಳು. ಮೈಯೆಲ್ಲ ನಡುಗುತ್ತಿತ್ತು, ಹೆದರಿ ಬೆವರಿದ್ದಳು. ತಾಯಿ-ತಂದೆ ಮಗಳಿಗೆ ಧೈರ್ಯ ಹೇಳುತ್ತ ಏನು ? ಏನಾಯಿತು ? ಎಂದು ಕೇಳ ತೊಡಗಿದರು. ಅಳುವುದನ್ನು ನಿಲ್ಲಿಸಲೇ ಇಲ್ಲ. ಅರ್ಧ ತಾಸಿನ ಮೇಲೆ ಅಳುವಿನ ತೀವ್ರತೆ ಕಡಿಮೆಯಾಯಿತು. ಅಲ್ಪಸ್ವಲ್ಪ ಮಾತಾಡತೊಡಗಿದಳು. ಏನಾಯಿತು? ಯಾಕೆ ಚೀರಿದೆ? ಎಂದು ಕೇಳಿದ ಪ್ರಶ್ನೆಗೆ ಕಕ್ಕಸದ ಜಂತು ಎಂದಳು. ತಂದೆ ಕಕ್ಕಸದ ಕಡೆಗೆ ನಡೆದರು. ಕಕ್ಕಸದ ಬಾಗಿಲನ್ನು ತೆಗೆದು ನೋಡಿದರೆ, ಅಲ್ಲಿ ಏನೂ ಇದ್ದಂತೆ ಕಾಣಲಿಲ್ಲ. ದೀಪ ಹಚ್ಚಿದರು, ಬ್ಯಾಟರಿ ಹಚ್ಚಿ ನೋಡಿದರು. ಏನೂ ಇಲ್ಲ ಎಂದರು. ಸರಳಾ ತಾನೇ ಬಂದು ಕಕ್ಕಸದ ಪಾತ್ರೆಯ ಕಡೆಗೆ ತೋರಿಸಿ ಮತ್ತೆ ಅಳಹತ್ತಿದಳು. ತಂದೆ ಅಲ್ಲಿ ಬ್ಯಾಟರಿ ಹಾಕಿ ನೋಡಿದರು. ಅವರಿಗೂ ದಿಗಿಲಾಯಿತು. ಪೂರ್ಣ ಬಿಳಿಯ ಬಣ್ಣದ ಬೆರಳಿನಂತಹ ಆಕೃತಿಯೊಂದು ಸುರುಳಿಯಾಗಿ ಬಿದ್ದಿತ್ತು. ಅದರ ಎರಡೂ ತುದಿಗಳು ಮೊಂಡಾಗಿದ್ದವು, ಲಕ್ಷಕೊಟ್ಟು ನೋಡುತ್ತಿರುವಾಗ ಅದು ಮೆಲ್ಲಗೆ ಮಿಸುಕಾಡ ಹತ್ತಿತು. ಅದರ ಹೊರಮೈ ನೇಯ್ದ ಬಟ್ಟೆಯಂತಿದ್ದು, ಮಿಂಚುತ್ತಿರಲಿಲ್ಲ. ಅದನ್ನು ನೋಡಿ ಮನೆಯವರೆಲ್ಲ ಗಲಿಬಿಲಿಗೊಂಡರು. ಹಾವು ನೋಡಿದವರಂತೆ ಗರಬಡಿದು ನಿಂತರು.

ಸರಳಾ ಹೇಳಿದಳು, ''ನಾನು ಕಕ್ಕಸಕ್ಕೆ ಕುಳಿತಾಗ ಮೊದಲು ಸ್ವಲ್ಪ ಮಲ ವಿಸರ್ಜನೆ ಆಯಿತು. ಆಮೇಲೆ ಈ ಹುಳವು ತನ್ನಿಂದ ತಾನೆ ಮೆಲ್ಲಗೆ ಗುದದಿಂದ ಹೊರಗೆ ಬರಹತ್ತಿತು. ನಾನು ಏನು ಬರಹತ್ತಿದೆ ಎಂದು ಬಗ್ಗಿ ನೋಡಿದೆ, ಬಿಳಿಯ ಹಾವಿನಂತೆ ಜೋತಾಡುತ್ತಿತ್ತು. ಇದೇನೆಂದು ?



# ಕಕ್ಕಸದಲ್ಲಿ ಹಾವು

●ಸ.ಜ.ನಾ

ಗಾಬರಿಯಾಗಿ ಚೀರಿದೆ. ಒಂದೆರಡು ಕ್ಷಣಗಳಲ್ಲಿ ಪೂರ್ಣ ಹುಳವು ಹೊರಬಿದ್ದಿತು. ನಾನು ಭಯ ದಿಂದ ಬಾಗಿಲು ತೆಗೆದು ಹೊರಗೆ ಓಡಿಬಂದೆ''.

ಮನೆಯವರೆಲ್ಲ ನೋಡಿದರು ''ವಿಚಿತ್ರ ಹುಳ ನೋಡಿದರೆ ಭಯ ಮೂಡುತ್ತಿದೆ'' ಎಂದು ತೀರ್ಮಾನಿಸಿ, ಕಕ್ಕಸಕ್ಕೆ ೨ ಬಕೆಟ್ಟು ನೀರು ಸುರುವಿದರು. ಹುಳು ನೀರಿನೊಡನೆ ಹರಿದು ಹೋಯಿತು. ಅದರೊಡನೆ ಎಲ್ಲರ ಭಯವೂ ಕಡಿಮೆಯಾಯಿತು. ಸರಳಾಗೆ ಎಲ್ಲರೂ ಧೈರ್ಯ ಹೇಳಿದರು. ಊಟ ಮಾಡಿಸಿ ಮಲಗಿಸಿದರು. ಗಾಬರಿಯಾದ ಸರಳಾ ಹೊದ್ದುಕೊಂಡು ಮಲಗಿಬಿಟ್ಟಳು.

ಎಲ್ಲರೂ ಆ ಹುಳದ ಬಗ್ಗೆ ಚರ್ಚಿಸ ತೊಡಗಿದರು. ತಾವು ಅಂಥ ಹುಳವನ್ನೇ ನೋಡಿಲ್ಲ. ಅಷ್ಟು ದಪ್ಪವಾದ ಹುಳು ಹೊಟ್ಟೆ ಯಲ್ಲಿದ್ದಾಗ ಹುಡುಗಿ ಎಷ್ಟು ನೋವು ಪಟ್ಟಿರ ಬೇಕು? ಎಂಬುದು ಚರ್ಚೆಯ ವಿಷಯ. ಆಕೆ ಬಲು ಗಟ್ಟಿ, ಎಲ್ಲ ನೋವನ್ನು ನುಂಗಿಕೊಂಡೇ ಇದ್ದಳು. ದೇವರು ದೊಡ್ಡವನು, ಅಂಥ ಹುಳವು ಹೊರಬಿದ್ದಿತು, ಆಕೆ ಗುಣವಾದಳು ಎಂದು ನಿಟ್ಟುಸಿರು ಬಿಟ್ಟರು. ಎಲ್ಲರೂ ಮಲಗಿದರು.

ಮರುದಿನ ಸರಳಾ ಎಲ್ಲರಂತೆ ಎದ್ದಳು. ತನ್ನ ನಿತ್ಯ ಕಾರ್ಯಕ್ರಮದಲ್ಲಿ ತೊಡಗಿದಳು. ಶಾಲೆಗೆ ಹೋದಳು. ಆಟವಾಡಿದಳು. ಮತ್ತೆ ಊಟಮಾಡಿ ಮಲಗಿದಳು. ಮನೆಯವರಿಗೆಲ್ಲ ವಿಶೇಷವಾಗಿ ತಂದೆ - ತಾಯಂದಿರಿಗೆ ದೊಡ್ಡ ಕುತ್ತು ತೊಲಗಿ ದಂತಾಯಿತು. ಸರಳಾ ಕಕ್ಕಸಕ್ಕೆ ಹೆದರುತ್ತಲೇ ಹೋಗಿದ್ದಳು. ಆಕೆ ಕಕ್ಕಸದಿಂದ ಹೊರಬರು ವುದನ್ನೇ ಮನೆಯವರು ನೋಡುತ್ತಿದ್ದು ಅವಳು ಹೊರ ಬಂದಾಗ ಎಲ್ಲರೂ ನಿಟ್ಟುಸಿರು ಬಿಟ್ಟರು. ಜೀವನ ಸುಸೂತ್ರವಾಗಿ ಮುಂದುವರೆಯಿತು.

ಹತ್ತು ದಿನಗಳಾಗಿರಬಹುದು. ಮತ್ತೆ ಅಂಥದೇ ಇನ್ನೊಂದು ಹುಳವು ಮಲ ವಿಸರ್ಜಿ ಸುವಾಗ ಬಿದ್ದಿತು. ಈ ಸಲ ಸರಳಾ ಹೆದರಲಿಲ್ಲ. ಹೊರಬಂದು ತಂದೆಯನ್ನು ಕರೆದು ತೋರಿಸಿ ದಳು. ಆಕೆಗಿಂತ ತಂದೆ ಹೆಚ್ಚು ಹೆದರಿದರು. ಬೇಗನೇ ನೀರು ಹಾಕಿ ಹುಳವು ಹರಿದು ಹೋಗುವಂತೆ ಮಾಡಿದರು.

ತಂದೆಯವರು ಚಿಂತೆಯಲ್ಲಿ ಮುಳುಗಿ ಹೋದರು. ಗಡಿಬಿಡಿಯಲ್ಲಿ ಸ್ನಾನ ಮಾಡಿ ಮಗಳನ್ನು ಕರೆದುಕೊಂಡು ವೈದ್ಯರಲ್ಲಿಗೆ ಹೋದರು. ವೈದ್ಯರು ಬಹಳ ಹೆಸರು ಮಾಡಿದ ವರು. ಅವರ ಕೈಗುಣದ ಬಗ್ಗೆ ಎಲ್ಲರಿಗೂ ನಂಬಿಕೆ ಇತ್ತು. ವೈದ್ಯರಿಗೆ ಜರುಗಿದ ಸಂಗತಿಗಳನ್ನೆಲ್ಲ ತಂದೆ ವಿವರಿಸಿದರು. ಸರಳಾ ಅಲ್ಲಲ್ಲಿ ಹೆಚ್ಚಿನ ಮಾಹಿತಿ ಯನ್ನು ಜೋಡಿಸುತ್ತಿದ್ದಳು. ವೈದ್ಯರು ಗಲಿಬಿಲಿ ಗೊಂಡರು. ಅವರು ಹೇಳುವಷ್ಟು ದೊಡ್ಡದಾದ, ದಪ್ಪನೆಯ ಹುಳುವನ್ನು ಅವರು ಅಭ್ಯಸಿಸ ಲಿರಲಿಲ್ಲ. ಸರಳಾಳನ್ನು ಪರೀಕ್ಷಿಸಿದರು. ಯಾವ ತೊಂದರೆ ಕಾಣಲಿಲ್ಲ. ರಕ್ತ ಪರೀಕ್ಷೆ ಮಾಡಲು ಕಳುಹಿಸಿದರು. ಸರಳಾಳ ಮಲ ಪರೀಕ್ಷೆ, ಮೂತ್ರ ಪರೀಕ್ಷೆಗಳೂ ನಡೆದವು. ಎಲ್ಲವೂ ದೋಷ ಮುಕ್ತವಾಗಿದ್ದವು. ವೈದ್ಯರು ಒಂದೆರಡು ಔಷಧಿ ಗಳನ್ನು ಬರೆದು ಕೊಟ್ಟರು.

ಸರಳಾಳ ತಂದೆ ಚಿಂತೆಯಿಂದ ಬಳಲ ಹತ್ತಿದರು. ಒಂದೆರಡು ದಿನಗಳಾದ ಮೇಲೆ ತಾವೇ ವೈದ್ಯರ ಹತ್ತಿರ ಹೋಗಿ ಚರ್ಚಿಸಿದರು. ಅದು ಎಂಥ ಹುಳ? ಮಗುವಿಗೆ ಏನು ಮಾಡಿತು? ವೈದ್ಯರು ಕೇಳಿದರು. ಏನು, ಮತ್ತೆ ಅಂಥ ಹುಳ ಬಿದ್ದಿತೋ?' ಉತ್ತರ- ಇಲ್ಲವೇ ಇಲ್ಲ ಎಂದಿತ್ತು. ವೈದ್ಯರು ಹೇಳಿದರು. ''ಮಾಸ್ತರರೇ, ನಾನು ಅತಿ ಉತ್ತಮವಾದ ಮದ್ದು ಕೊಟ್ಟಿರುವೆನು. ಹೊಟ್ಟೆಯಲ್ಲಿಯ ಎಂಥದೇ ಹುಳವಿರಲಿ ಅದು ಸತ್ತು ಹೊರಬರಲೇ ಬೇಕು. ಯಾವುದಕ್ಕೂ ಗಾಬರಿಯಿಲ್ಲ'' ಎಂದು ಹೇಳಿದರು. ಮಾಸ್ತರರು ಅಷ್ಟಕ್ಕೆ ಬಿಡಲಿಲ್ಲ, ದುಂಬಾಲು ಬಿದ್ದು ಎಕ್ಸ್‌ರೇ ಪರೀಕ್ಷೆ ಮಾಡಲು ಒತ್ತಾಯಿಸಿದರು. ವೈದ್ಯರು ನಗುತ್ತ ಹೇಳಿದರು. ''ಮಾಸ್ತರರೇ, ಏನು ಮಾಡಬೇಕೆಂಬುದು ನನಗೂ ಗೊತ್ತು. ಎಕ್ಸ್‌ರೇ ಪರೀಕ್ಷೆ ಇದಕ್ಕೆ ಬೇಡ'' ಮಾಸ್ತರರು ಬಿಡಬೇಕಲ್ಲ, ಒತ್ತಾಯಿಸಿದರು. ಬೇಸತ್ತ ವೈದ್ಯರು ಎಕ್ಸರೇ ಪರೀಕ್ಷೆಯನ್ನು ಮಾಡಿಸಿದರು. ಅವರು ಹೇಳಿ ದಂತೆ ಅದೂ ಸಹ ಯಾವ ದೋಷವನ್ನೂ ತೋರಿಸಲಿಲ್ಲ. ಮಾಸ್ತರರು ಕೇಳಿದರು ''ಏನು ಹೊಟ್ಟೆಯಲ್ಲಿ ಆ ಹುಳು ಇವೆಯೇ?'' ವೈದ್ಯರು ಇಲ್ಲವೇ ಇಲ್ಲ ಎಂದರು. ಮಾಸ್ತರರು ನಮಸ್ಕಾರ ಹೇಳಿ ಹೋದರು.

ಒಂದು ವಾರದ ಮೇಲೆ ಸರಳೆಯ ಕಕ್ಕಸದಲ್ಲಿ ಅದೇ ಪ್ರಕಾರದ ಹುಳ ಬಿದ್ದಿತು. ಈಗ ವೈದ್ಯರ ಮೇಲಿನ ವಿಶ್ವಾಸ ಕುಂದಿತು. ಬೇರೆ ವೈದ್ಯರಿಗೆ ತೋರಿಸಿದರು. ಅವರೂ ಪರೀಕ್ಷಿಸಿದರು, ಔಷಧ ಕೊಟ್ಟರು. ಆದರೆ ವಾರದಲ್ಲಿ ಒಂದು ಸಲ, ಇಲ್ಲವೆ ಎರಡು ಸಲ ಅಂಥ ಹುಳಗಳು ಬೀಳು ತ್ತಲೇ ನಡೆದವು.

ಸರಲಾಳ ದೈಹಿಕ ಆರೋಗ್ಯ ಸರಿಯಾಗೇ ಇತ್ತು. ಹೊಟ್ಟೆ ಹಸಿಯುತ್ತಿತ್ತು, ಆಡುತ್ತಿದ್ದಳು, ಓದುತ್ತಿದ್ದಳು. ಒಟ್ಟಿನಲ್ಲಿ ಚೆನ್ನಾಗಿದ್ದಳು. ಆದರೆ ಹುಳುಗಳ ಅವತರಿಸುತ್ತಲೇ ಇದ್ದವು.

ಸರಳಾಳ ತಂದೆ ಧೈರ್ಯ ಮಾಡಿ ಒಂದು ದಿನ ಆ ಹುಳುಗಳನ್ನು ಹಿಡಿದು ಒಂದು ಬಾಟಲಿಯಲ್ಲಿ ಹಾಕಿಕೊಂಡು ವೈದ್ಯಲ್ಲಿಗೆ ಹೋಗಿ ತೋರಿಸಿದರು. ವೈದ್ಯರಿಗೂ ಅಚ್ಚರಿ. ಇಂಥ ಹುಳವನ್ನು ಅವರು ಕಂಡಿರಲೇ ಇಲ್ಲ. ಪುಸ್ತಕಗಳನ್ನು ತಿರುವಿ ಹಾಕಿದರು. ಎಲ್ಲಿಯೂ ಅಂಥದರ ಉಲ್ಲೇ ಖವಿಲ್ಲ. ಈಗ ಮತ್ತೊಂದು ದಿನ ಸರಳಾ ಆ ಹುಳವನ್ನು ವಿಸರ್ಜಿಸಿದಾಗ ಅದನ್ನು ಹಿಡಿದು ವಿಶ್ವ ವಿದ್ಯಾಲಯದ ಪ್ರಾಣಿಶಾಸ್ತ್ರ ವಿಭಾಗಕ್ಕೆ ಹೋದರು. ಅಲ್ಲಿ ಅವರ ಶಿಷ್ಯರು ಪ್ರಾಧ್ಯಾಪಕ ರಾಗಿದ್ದರು. ಅವರ ಹತ್ತಿರ ಕಥೆಯನ್ನೆಲ್ಲ ವಿವರಿಸಿ ಬಾಟಲಿ ಕೊಟ್ಟರು. ಪ್ರಾಧ್ಯಾಪಕರು ಅದನ್ನು ನೋಡಿದರು. ಅವರ ಪರೀಕ್ಷೆಯ ಪ್ರಕಾರ ಅದು ಒಂದು ದುಂಡು ಹುಳ ಎಂದು ಹೇಳಿದರು. ಇಂಥದೇ ಎಂದು ಹೇಳಲಾಗಲಿಲ್ಲ. ಹುಳವನ್ನು ಒಂದು ಪೆಟ್ರಿ ಡಿಶ್‌ನಲ್ಲಿ ಹಾಕಿದರು. ಹುಳವು ಮೆಲ್ಲಗೆ ಉರುಳಿತು. ಪ್ರಾಧ್ಯಾಪಕರು ಮಾಸ್ತರರಿಗೆ ಹೇಳಿದರು. ''ಮುಂದಿನ ವಾರ ಬನ್ನಿ ನಾನು ಅಭ್ಯಸಿಸಿ ಹೇಳುವೆ'', ಮಾಸ್ತರರು ಕೃತಜ್ಞತೆಯಿಂದ ಕೈಮುಗಿದು ಮನೆಗೆ ಹೋದರು. ಮನೆಯಲ್ಲಿ ತಮ್ಮ ಶಿಷ್ಯ, ಬಹಳ ಚೂಟಿ ಎಂದೂ ಹಲವಾರು ಸಂಶೋಧನೆ ಮಾಡಿರುವನೆಂದೂ ವಿವರಿಸಿ, ಹುಳದ ಬಗ್ಗೆ ಸಂಪೂರ್ಣ ಮಾಹಿತಿ ಹೇಳುವುದು ಖಂಡಿತವೆಂದೂ, ನಂತರ ಅದಕ್ಕೆ ಉಪಚಾರ ಮಾಡಿಸುವುದೆಂದು ಹೇಳಿದರು. ಈ ಸಂಗತಿ ಯನ್ನು ಮಾಸ್ತರರು ವೈದ್ಯರಿಗೂ ಹೇಳಿಬಂದರು.

ಒಂದು ವಾರ ಕಳೆದ ಮೇಲೆ ಮಾಸ್ತರು ವಿಶ್ವ ವಿದ್ಯಾಲಯಕ್ಕೆ ಹೋದರು. ಪ್ರಾಧ್ಯಾಪಕರನ್ನು ಕಂಡರು. ಪ್ರಾಧ್ಯಾಪಕರು ಹೇಳಿದರು, 'ಮಾಸ್ತರರೇ, ಹುಳವನ್ನು ನಾವು ಫಾರ್ಮಾಲಿನ ದ್ರವದಲ್ಲಿ ಇಡಲಿಲ್ಲ. ಅದಕ್ಕೆ ಹುಳವು ಕೊಳೆತು ಹೋಗಿದೆ. ಅದನ್ನು ಹಿಡಿಯಲು ಹೋದರೆ ಪಿಸುಕಿದಂತೆ ಪುಡಿಪುಡಿ ಆಗುತ್ತದೆ. ಕಾರಣ ಇನ್ನೊಂದು ಹುಳು ಬಿದ್ದಾಗ ತಂದುಕೊಡಬೇಕು''

ಮಾಸ್ತರರಿಗೆ ದಿಗಿಲಾಯಿತು. ಸರಿ ಎಂದು ಹೇಳಿ ಮನೆಗೆ ಮರಳಿದರು. ಸರಳಾಗೆ ಹೇಳಿದರು.

''ಹುಳು ಬಿದ್ದಾಗ ಬಾಟಲಿಯಲ್ಲಿ ಹಾಕಿ ಇಡಬೇಕು ಎಂದರು'' ಸರಳಾ ಒಪ್ಪಿದಳು.

ಒಂದು ದಿನ ಪ್ರಾಧ್ಯಾಪಕರು ವೈದ್ಯಕೀಯ ಕಾಲೇಜಿನಲ್ಲಿದ್ದ ಒಬ್ಬ ಪ್ರಾಧ್ಯಾಪಕರನ್ನು ಸಂಪರ್ಕಿಸಿ ಇದರ ಬಗ್ಗೆ ಚರ್ಚಿಸಿದರು. ಹುಳುವನ್ನು ನೋಡದೇ, ಪರೀಕ್ಷಿಸದೇ ಏನನ್ನೂ ಹೇಳಲಿಕ್ಕಾಗದು ಎಂದು ವೈದ್ಯ ಪ್ರಾಧ್ಯಾಪಕರು ಹೇಳಿದರು. ಸರಿ ಎಂದು ಪ್ರಾಣಿಶಾಸ್ತ್ರ ಪ್ರಾಧ್ಯಾಪಕರು ಮರಳಿದರು. ಮುಂದೆ ಹದಿನೈದು ದಿನಗಳಾದ ಮೇಲೆ ಮಾಸ್ತರರು ಒಂದು ಬಾಟಲಿ ತೆಗೆದುಕೊಂಡು ಪ್ರಾಣಿಶಾಸ್ತ್ರ ವಿಭಾಗಕ್ಕೆ ಬಂದರು. ಪ್ರಾಧ್ಯಾಪಕರು ಅದನ್ನು ನೋಡಿ ತಕ್ಷಣ ವೈದ್ಯ ಪ್ರಾಧ್ಯಾಪಕರಿಗೆ ಫೋನ್ ಮಾಡಿ ಸಂಪರ್ಕಿಸಿ, ಹುಳವನ್ನು ಫಾರ್ಮಾಲಿನ್‌ದಲ್ಲಿ ಹಾಕಿ ತರಬೇಕೋ? ಅಥವಾ ನೇರವಾಗಿ ತರ ಬೇಕೋ? ಎಂದು ಕೇಳಿದರು. ವೈದ್ಯರು ನೇರ ವಾಗಿ ತೆಗೆದುಕೊಂಡು ಬರಲು ತಿಳಿಸಿದರು.

ತಕ್ಷಣ ಪ್ರಾಧ್ಯಾಪಕರು ಹಾಗೂ ಮಾಸ್ತರರು ಆ ಬಾಟಲಿ ಹಿಡಿದುಕೊಂಡು ಬಸ್ಸಿನಲ್ಲಿ ಪ್ರಯಾಣಿಸಿ ವೈದ್ಯಕೀಯ ಕಾಲೇಜಿಗೆ ಹೋದರು. ಬಾಟಲಿಯನ್ನು ವೈದ್ಯ ಪ್ರಾಧ್ಯಾಪಕರ ಕಡೆಗೆ ಕೊಟ್ಟರು. ಅವರು ತಮ್ಮ ಕಾರ್ಯದಿಂದ ಬಿಡುಗಡೆ ಮಾಡಿಕೊಂಡು ಈ ಹೊಸ ಸಂಶೋಧನೆಗೆ ಕೈಹಾಕಿದರು.

ಪೆಟ್ರಿಡಿಶ್ ತೆಗೆದುಕೊಂಡು ಹುಳವನ್ನು ಬಾಟಲಿಯಿಂದ ಅದಕ್ಕೆ ಸ್ಥಳಾಂತರಿಸಿದರು. ಕೈಯಲ್ಲಿ ಒಂದು ಮಸೂರ ಹಿಡಿದು ಅದನ್ನು ಪರೀಕ್ಷಿಸತೊಡಗಿದರು. ಹುಳವು ಮಿಸುಕಾಡುತ್ತಿತ್ತು. ಸಾವಧಾನವಾಗಿ ಹುಳವು ಪೆಟ್ರಿಡಿಶ್‌ದಲ್ಲಿ ಹೊರಳಿ ಬೀಳಲು ಪ್ರಾರಂಭಿಸಿತು. ಇನ್ನೂ ಸೂಕ್ಷ್ಮವಾಗಿ ಪರೀಕ್ಷಿಸಿದರು, ಹುಳವು ಮೆತ್ತಗೆ ಉಬ್ಬುತ್ತಲಿತ್ತು. ಅದನ್ನು ನೋಡುತ್ತ ನಿಂತಿದ್ದ ಮಾಸ್ತರರು 'ನೋಡ್ರಿ, ನೋಡ್ರಿ ಇನ್ನೂ ಜೀವ ಇದೆ. ಇನ್ನೂ ಸತ್ತಿಲ್ಲ'' ಎಂದರು. ವೈದ್ಯರು ಪ್ರತಿಕ್ರಿಯಿಸಲಿಲ್ಲ. ಹುಳವನ್ನು ಹಾಕಿದ ತಟ್ಟೆಯನ್ನು ತೆಗೆದುಕೊಂಡು ತಮ್ಮ ಸೂಕ್ಷ್ಮದರ್ಶಕದ ಕೆಳಗಿಟ್ಟು ಪರೀಕ್ಷಿಸಿದರು. ಏನೋ ಗೊತ್ತಾದವರಂತೆ ಎದ್ದು ಬಂದು ಕುಳಿತರು. ನಡೆದ ಘಟನೆಯ ಬಗ್ಗೆ ವಿವರವಾಗಿ ಹೇಳಲು ವಿನಂತಿಸಿದರು. ಮಾಸ್ತರರು ಮತ್ತೆ ಮೊದಲನೆಯ ದಿನದ ಘಟನೆಯನ್ನು ರಸವತ್ತಾಗಿ ವರ್ಣಿಸಿದರು. ಎಲ್ಲವನ್ನೂ ಕೇಳಿ ಆದ ಮೇಲೆ ವೈದ್ಯರು ಸ್ವಲ್ಪ ತಡೆಯಿರಿ, ಎಂದು ಹೇಳಿ ಮತ್ತೆ ಪರೀಕ್ಷಿಸಿದರು. ಹುಳದ ಮೇಲೆ ಒಂದೆರಡು ಹನಿ ಅಯೋಡಿನದ್ರಾವಣ ಸುರುವಿದರು. ಹುಳವು ತನ್ನ ಬಿಳಿ ಬಣ್ಣವನ್ನು ಬದಲಿಸಿ ಕಂದು ಹಾಗೂ ಕಪ್ಪು ಬಣ್ಣ ತಾಳತೊಡಗಿತು. ತಮ್ಮ ಸ್ಥಾನದಿಂದ ಎದ್ದು ಆಗಂತುಕರ ಕಡೆಗೆ ನೋಡಿ ಮುಗುಳ್ನಗೆ ನಕ್ಕು, ''ಗಾಬರಿಯಿಲ್ಲ'' ಎಂದರು. ಆದರೆ ಆಗಂತುಕರಿಬ್ಬರಿಗೂ ಗೊಂದಲ. ಮಾಸ್ತರರು ವಿನಂತಿಸಿದರು, 'ಸಾಹೇಬ್ರ ಯಾವ ಮದ್ದು ಬೇಕಾದರೂ ಕೊಡಿಸುತ್ತೇನೆ, ಖರ್ಚು ಮಾಡಲೂ ಸಿದ್ಧವಾಗಿರುವೆ. ದಯಮಾಡಿ ನನ್ನ ಮುದ್ದು ಮಗಳ ಕರುಳಿನಲ್ಲಿಯ ಈ ಹುಳಗಳು ಇಲ್ಲವಾಗಬೇಕು''.

ವೈದ್ಯರು ಕೇಳಿದರು, ನೀವು ಮಾಸ್ತರರು ನಿಜ. ಮಾಸ್ತರಿಕೆಯಲ್ಲದೆ ಮತ್ತಾವ ಉದ್ಯೋಗ ಮಾಡುವಿರಿ? ಎಂದರು. ವೈದ್ಯರ ವರ್ತನೆ ಆಗ ಅವರು ನೇರವಾಗಿ ಹೇಳಿಬಿಟ್ಟರು. ''ವೈದ್ಯ ಮಹಾಶಯರೇ, ನೀವು ನಿಮ್ಮ ಫೀ ಬಗ್ಗೆ ಯೋಚಿಸಬೇಡಿರಿ, ನೀವು ಕೇಳಿದಷ್ಟು ನಾವು ಕೊಡುತ್ತೇವೆ''.

ವೈದ್ಯರು ನಕ್ಕು, ಮತ್ತೆ ತಮ್ಮ ಪ್ರಶ್ನೆಯನ್ನು ಕೇಳಿದರು. ಮಾಸ್ತರರು ಹೇಳಿದರು, 'ನನ್ನ ಹೆಂಡತಿ ಟೈಪಿಂಗ್ ಕ್ಲಾಸು ನಡೆಸುತ್ತಿರುವಳು, ನಾನು ಕೇವಲ ಶಿಕ್ಷಕ'.

ವೈದ್ಯರು, ''ನಿಮ್ಮ ಟೈಪಿಂಗ್ ಕೆಲಸಕ್ಕೆ ಯಾವ ಪೇಪರ್ ಉಪಯೋಗಿಸುತ್ತೀರಿ?''

ಮಾಸ್ತರರು, ''ಅದೇ ತೆಳ್ಳನೆಯ ಬಿಳಿ ಪೇಪರ್''

ವೈದ್ಯರು, ''ಹಾಗಾದರೆ ಈಗ ಮನೆಗೆ ಹೋಗಿ ನೀವು ಇಟ್ಟಿದ್ದ ತೆಳ್ಳನೆಯ ಬಿಳಿ ಕಾಗದ ಕಡಿಮೆ ಆಗಿವೆಯೋ ಹೇಗೆ ವಿಚಾರಿಸಿ ನಾಳೆ ಬರ್ರಿ'' ಎಂದು ಹೇಳಿ ತಮ್ಮ ಕಾರ್ಯಕ್ಕೆ ಹೋದರು.

ಪ್ರಾಧ್ಯಾಪಕ ಹಾಗೂ ಮಾಸ್ತರರು ಒಬ್ಬರನ್ನೊಬ್ಬರು ನೋಡುತ್ತ ತಮ್ಮ ಊರದಾರಿ ಹಿಡಿದರು. ಮಾಸ್ತರರು ಮನೆಗೆ ಬಂದು ಟೈಪಿಂಗ್ ರೂಮಿಗೆ ಹೋಗಿ ಅಲ್ಲಿ ತಾವು ಇಟ್ಟಿದ್ದ ಬಿಳಿಯ ಟೈಪಿಂಗ್ ಪೇಪರ್ ನೋಡಿದರು. ವಿಚಿತ್ರ, ವೈದ್ಯರು ಸಂಶಯ ಪಟ್ಟಂತೆ ಬಿಳಿ ಹಾಳೆಗಳು ಅಲ್ಲಿರಲಿಲ್ಲ!

''ನಮ್ಮ ಮನೆಯಲ್ಲಿ ಹಾಳೆ ಕಡಿಮೆಯಾದದ್ದು ಇವರಿಗೆ ಹೇಗೆ ತಿಳಿಯಿತು?'' ಎಂಬ ಹೊಸ ಪ್ರಶ್ನೆ ಎದ್ದಿತು. ಮರುದಿನ ಮತ್ತೆ, ವೈದ್ಯರಲ್ಲಿಗೆ ಹೋಗಿ ನಿಜ ಸಂಗತಿ ತಿಳಿಸಿದರು. ವೈದ್ಯರು ಮತ್ತೆ ಮುಗುಳ್ನಕ್ಕು ಹೇಳಿದರು, ''ಮಾಸ್ತರರೇ,ನಿಮ್ಮ ಮಗಳು, ಒಳ್ಳೆಯ ಹುಡುಗಿ, ಆಕೆಯ ಆರೋಗ್ಯ ಸರಿಯಿದೆ, ಆಕೆಯ ಕರುಳಿನಲ್ಲಿ ಯಾವ ಹುಳುಗಳೂ ಇಲ್ಲ. ಯಾವುದೇ ಮದ್ದು ಬೇಡ'' ಮಾಸ್ತರರಿಗೆ ಇನ್ನೂ ದಿಗಿಲು.

''ಅಂದರೆ ಕಕ್ಕಸದಲ್ಲಿ ಕಾಣುವ ಹುಳವು ಎಂಥದು?''

ವೈದ್ಯರು- 'ಅದು ಹುಳವೇ ಅಲ್ಲ'.

ಮಾಸ್ತರರು ಇನ್ನೂ ಜೋರಾಗಿ 'ನೀವು ಅನ್ನುವುದು ಏನು?' ಎಂದರು.

ವೈದ್ಯರು - 'ಮತ್ತೇನಿಲ್ಲ, ಅದು ಹುಳ ಅಲ್ಲ'

'ಜೀವವಿದ್ದಾಗ ಕಂಡಿದ್ದೇವೆ. ನೀವು ಹುಳ ಅಲ್ಲ ಎಂದರೆ ಏನು?'

ವೈದ್ಯರು- 'ನಿಜ, ಅದು ಹುಳ ಅಲ್ಲ. ಹುಳದಂತೆ ಕಾಣುವ ಟೈಪಿಂಗ್ ಪೇಪರ್ ಮಾತ್ರ.

ಮಾಸ್ತರರು ಮೂಕರಂತೆ ನೋಡಹತ್ತಿದರು. ವೈದ್ಯರು ಮುಂದುವರೆದರು, 'ನೀವು ಗಾಬರಿ ಆಗಿರುವಿರಿ, ನಿಮ್ಮ ಮಗಳಿಗೆ ಮನೋವಿಕಾರವಾಗಿದೆ. ಮನೋರೋಗದ ವೈದ್ಯರಿಗೆ ತೋರಿಸಿರಿ, ಸರಿ ಹೋಗುವುದು'.

ಮಾಸ್ತರರು ಸೋತವರಂತೆ ಮನೆಗೆ ಬಂದರು. ಮನೆಯಲ್ಲಿ ಎಲ್ಲರೂ ಕೇಳುವವರೇ ಹುಳ ಏನಾಯಿತು? ಮಾಸ್ತರರು ಯಾರಿಗೂ ಉತ್ತರಿಸಲಿಲ್ಲ. ಸುಮ್ಮನೇ ಮಲಗಿದರು. ಮರುದಿನ ಸದ್ದುಗದ್ದಲವಿಲ್ಲದೆ ಟೈಪಿಂಗ್‌ನಲ್ಲಿ ಬಳಸಲ್ಪಡುವ ತೆಳ್ಳನೆಯ ಪೇಪರ್ ಕಟ್ಟನ್ನು ಬೇರೆ ಕಡೆಗೆ ಸಾಗಿಸಿ ಕೀಲಿ ಹಾಕಿಟ್ಟರು. ಸರಳಾಳ ಹೊಟ್ಟೆಯಿಂದ ಹುಳಗಳು ಬೀಳುವುದು ನಿಂತೇ ಹೋಯಿತು.

ಮನೋರೋಗದ ವೈದ್ಯರು ಪರೀಕ್ಷಿಸಿ ಸರಳಾಳಿಗೆ ಸೂಕ್ತ ಸಲಹೆ ಹಾಗೂ ಮದ್ದು ಕೊಟ್ಟರು.

ಮಾಸ್ತರರು ವೈದ್ಯರಿಗೆ ಕೈಮುಗಿದು ಕೃತಜ್ಞತೆ ಹೇಳಿ ಹೋದರು. ●

**ಶಸ್ತ್ರಚಿಕಿತ್ಸೆಯೆಂದರೆ ನೋವು ಹಾಗೂ ರಕ್ತಸ್ರಾವ ಅನಿವಾರ್ಯ. ಕಳೆದ ಒಂದು ಶತಮಾನ ದಲ್ಲಿ ಅಭಿವೃದ್ಧಿಗೊಂಡ ಅರಿವಳಿಕೆಯ ಶಾಸ್ತ್ರ ನೋವನ್ನು ನಿವಾರಿಸಿದೆ. ಇತ್ತೀಚೆಗೆ ವಿದೇಶಗಳಲ್ಲಿ ನಡೆಯುತ್ತಿರುವ ಅದ್ವಿತೀಯ ಸಂಶೋಧನೆ ಶಸ್ತ್ರ ವೈದ್ಯರ ಚೂರಿಗೆ ತುಕ್ಕನ್ನು ಹಿಡಿಸಲಿದೆ......ರಕ್ತ ರಹಿತ ಶಸ್ತ್ರ ಚಿಕಿತ್ಸೆ ಇಂದು ನನಸಾಗಿದೆ.**

ಅಮೆರಿಕದ ಸೆನೇಟರ್ ಅರ್ಲನ್ ಸ್ಪೆಕ್ಟರ್. ಎಂಬುವನ ಮಿದುಳಿನೊಳಗೆ ಒಂದು ಗಂತಿ ಬೆಳೆಯುತಿತ್ತು. ಈತ ನೇರವಾಗಿ ಆಸ್ಪತ್ರೆಗೆ ಹೋದನು. ಗಂತಿ ನಿವಾರಣಾ ಚಿಕಿತ್ಸೆಯನ್ನು ಪಡೆ ದನು ಹಾಗೂ ೪೮ ಗಂಟೆಗಳಲ್ಲಿ ಆಸ್ಪತ್ರೆ ಯಿಂದ ಹೊರಬಂದು ತನ್ನ ಹುಟ್ಟೂರಾದ ಫಿಲಿಡೆಲ್ಫಿಯಾಕ್ಕೆ ತೆರಳಿದನು. ಅಲ್ಲಿ ಚುನಾವಣಾ ಪ್ರಚಾರದಲ್ಲಿ ಪಾಲ್ಗೊಳ್ಳಲಾರಂಭಿಸಿದ.

**ಮಿದುಳಲ್ಲಿ ಗಂತಿಯನ್ನು ಹೊಂದಿರುವ ವ್ಯಕ್ತಿ, ಕೇವಲ ೪೮ ಗಂಟೆಗಳಲ್ಲಿ ಚಿಕಿತ್ಸೆಯನ್ನು ಪಡೆದು, ಯಾವುದೇ ರೀತಿಯ ನೋವಿಲ್ಲದೆ, ಯಾವುದೇ ರೀತಿ ಯಾದ ವಿಶ್ರಾಂತಿಯನ್ನೂ ಪಡೆಯದೆ, ಚುನಾವಣಾ ಪ್ರಚಾರದಲ್ಲಿ ಪಾಲುಗೊಳ್ಳಲು ಸಾಧ್ಯವೆ?....**

ಖಂಡಿತ ಸಾಧ್ಯ. ನಂಬಿ. ನಾನು ಸುಳ್ಳು ಹೇಳುತ್ತಿಲ್ಲ. ಕಥೆಯನ್ನು ಕಟ್ಟುತ್ತಿಲ್ಲ. ಇನ್ನೂ ಮುಂದೆ ಓದಿ.

ಫಿಲಿಡೆಲ್ಫಿಯಾದಲ್ಲಿ ಅರ್ಲನ್‌ಸ್ಪೆಕ್ಸರ್ ಛಾಯಾ ಗ್ರಾಹಕರಿಗಾಗಿ ವಿಶೇಷ ಸಂದರ್ಶನ ವೊಂದನ್ನು ಏರ್ಪಡಿಸಿದನು. ಅವನ ಮೊಮ್ಮಕ್ಕಳು ಸ್ಪೆಕ್ಸರ್‌ನ ಮೇಲೆ ಹತ್ತಿ ಕುಣಿಯುತ್ತಿದ್ದರು. ಅವನ ಮುಖದಲ್ಲಿ ನೋವಿನ ಲವಲೇಶ ಚಿಹ್ನೆಯೂ ಇರಲಿಲ್ಲ. ನಗು ನಗುತ್ತಿದ್ದನು. ಮಕ್ಕಳೊಂದಿಗೆ ಮಗುವಾಗಿ ಆಟವಾಡಲಾ ರಂಭಿಸಿ ದನು. ಅವನ ಕಣ್ಣುಗಳು ಮಿನುಗುತ್ತಿದ್ದವು, ಆರೋಗ್ಯ ತುಂಬಿ ತುಳುಕುತ್ತಿತ್ತು. ಎಲ್ಲಕ್ಕಿಂತ ಮಿಗಿ ಲಾಗಿ ಮಿದುಳಿನ ಶಸ್ತ್ರಚಿಕಿತ್ಸೆಗೆ ಒಳಗಾಗಿದ್ದ ಅವನ ತಲೆ ಯಲ್ಲಿ ಕೂದಲೆಲ್ಲ ಹಾಗೇ ಇತ್ತು. ಒಂದೇ ಒಂದು ರೋಮವೂ ಕೊಂಕಿರಲಿಲ್ಲ!.... ಛಾಯಾಗ್ರಾಹ ಕರು ನಿರಂತರವಾಗಿ ಚಿತ್ರಗಳನ್ನು ತೆಗೆಯುತ್ತಲೇ ಹೋದರು.

ಓದುಗರೇ.... ನಿಜಕ್ಕೂ ನಿಮಗೆ ನಂಬಿಕೆ ಬರುತ್ತಿಲ್ಲವೆ? ಹಾಗಾದರೆ ಇದನ್ನು ಓದಿ ನೋಡಿ!

೪೦ ವರ್ಷ ವಯಸ್ಸಿನ ಕೆಲಸಗಾರ. ಕಟ್ಟಡ ಕಟ್ಟು ವುದು ಅವನ ವೃತ್ತಿ. ಅವನ ಮಿದುಳು ಬಳ್ಳಿಯಲ್ಲಿ ಒಂದು ಗಂತಿ ಬೆಳೆಯುತ್ತಿತ್ತು. ವೈದ್ಯರು ಅವನು ಹಾಕಿ ಕೊಂಡಿದ್ದ ಅಂಗಿಯನ್ನೂ ತೆಗೆಯದೇ, ಶಸ್ತ್ರಕ್ರಿಯೆ ನಡೆಸಿದ್ದರು, ಗಂತಿ ಯನ್ನು ನಿವಾರಿಸಿದ್ದರು!

**ನೂತನ :**

ಇದೇನು ಸ್ವಾಮಿ ಆಗಲೆ ಏಪ್ರಿಲ್ ತಿಂಗಳು ಬಂದೆ ಬಿಟ್ಟಿತೇ? ಅಥವಾ ನಾವೆಲ್ಲ ಕಿವಿಯಲ್ಲಿ ಹೂವನ್ನು ಇಟ್ಟುಕೊಂಡಿದ್ದೇವೆಯೇ ಎಂದು ನೀವು ಭಾವಿಸಿದ್ದೀರೇನು? ಇಂತಹವೆಲ್ಲ ಪವಾಡ ದಿಂದ ಮಾತ್ರ ಸಾಧ್ಯ. ವಾಸ್ತವದಲ್ಲಿ ಇಂತಹವೆಲ್ಲ ನಡೆಯೋಲ್ಲ... ಎಂದೆಲ್ಲ ನೀವು ಆಕ್ಷೇಪಣೆ ಯನ್ನು ಎತ್ತಬಹುದು.



**ಹಾಕಿದ ಹಚ್ಚೆಯನ್ನು ''ಅಳಿಸುವುದು'' ಸುಲಭ. ಲೇಸರಿನ ಕಿರಣವನ್ನು ಹಚ್ಚೆಯಲ್ಲಿರುವ ಬಣ್ಣ ಹೀರುತ್ತದೆ. ಛಿದ್ರವಾಗಿಸುತ್ತದೆ. ನಂತರ ಅದನ್ನು ನಿವಾರಿಸುತ್ತದೆ ವಿನಾವಣಾ ವ್ಯೂಹ. ಒಂದೇ ಒಂದು ಸಲ ಲೇಸರ್ ಚಿಕಿತ್ಸೆ ಪಡೆದರೆ ಸಾಕು ಹಚ್ಚೆ ಮಂಗಮಾಯ!**

ಆದರೆ...

ಇವೆಲ್ಲ ಪವಾಡವಲ್ಲ. ಮಾಟ, ಮಾಯ, ಮಂತ್ರ, ಯಕ್ಷಿಣಿ ಯಾವುದೂ ಅಲ್ಲ. ಎಲ್ಲ ವಿಜ್ಞಾನ. ಅಚ್ಚ ವಿಜ್ಞಾನ. ಪರಿಪೂರ್ಣ ವಿಜ್ಞಾನ!

ಸೆನೇಟರ್, ಕಟ್ಟಡ ಕೆಲಸಗಾರ, ಹಾಗೂ ಇವ ರಂತೆ ಅನೇಕರು ಮಿದುಳು ಹಾಗೂ ಮಿದುಳು ಬಳ್ಳಿ ಸಂಬಂಧಿತ ಗಂತಿಗಳನ್ನು ನಿವಾರಿಸಿಕೊಂಡಿ ದ್ದಾರೆ... ಮಾನವ ಇತಿಹಾಸ ಹಿಂದೆಂದೂ ಕಂಡಿರ ದಂತಹ ಅದ್ಭುತ, ನೂತನ ಶಸ್ತ್ರಚಿಕಿತ್ಸಾ ತಂತ್ರಜ್ಞಾನ ವಾದ ರಕ್ತರಹಿತ ಶಸ್ತ್ರಚಿಕಿತ್ಸೆಯಿಂದ!.....

**ಇತಿಹಾಸ**

ರೋಗ ರುಜಿನಗಳು ಮಾನವನಷ್ಟೆ ಪ್ರಾಚೀನ ವಾದಂತಹವು. ಇವುಗಳಿಂದ ಮುಕ್ತಿ ಪಡೆಯಲು ಮಾನವ ಚಿಕಿತ್ಸೆಯನ್ನು ಪಡೆಯುತ್ತಿದ್ದಾನೆ. ಈ ಚಿಕಿತ್ಸಾ ವಿಧಾನಗಳು ಬೆಳೆದು ಬಂದ ದಾರಿಯನ್ನು ಒಮ್ಮೆ ಅವಲೋಕಿಸಿದರೆ, ನಾವು ಬೆಚ್ಚಿ ಬೀಳುತ್ತೇವೆ.

ಆರಂಭದಲ್ಲಿ ಕೊಳೆತ ಕಾಲೊಂದನ್ನು, ನಾರು ಬೇರಿನಿಂದ ವಾಸಿ ಮಾಡಲು ಸಾಧ್ಯವಿಲ್ಲ ಎಂದು ಮನವರಿಕೆಯಾದ ಮೇಲೆ ಆ ಕಾಲನ್ನು, ಮಚ್ಚಿ ನಿಂದ ತುಂಡರಿಸಿ ತೆಗೆಯುತ್ತಿದ್ದರು. ನಾಲ್ಕಾರು ಜನರು ರೋಗಿಯನ್ನು ಬಲವಾಗಿ ಹಿಡಿದು ಕೊಳ್ಳುತ್ತಿದ್ದರು. ''ವೈದ್ಯನು'' ತನ್ನ ಮಚ್ಚಿನಿಂದ ಒಂದೇ ಏಟಿಗೆ ಕಚಕ್!

ಇಂತಹ ಚಿಕಿತ್ಸೆ ಬರ್ಬರವೆನಿಸಿತು, ರೋಗಿಯು ಅಪಾರ ನೋವಿನಿಂದ ನರಳುತ್ತಿ ದ್ದನು. ವೈದ್ಯರು ಇದನ್ನು ನಿವಾರಿಸಲು ಸಾಧ್ಯವೇ? ಎಂದು ಯೋಚಿಸಿದರು. ಶಸ್ತ್ರಚಿಕಿತ್ಸೆಯನ್ನು ಮಾಡುವ ಮೊದಲು ರೋಗಿಗೆ ಚೆನ್ನಾಗಿ ಮದ್ಯಪಾನ ಮಾಡಿಸುತ್ತಿದ್ದರು. ರೋಗಿಯು ಮತ್ತಿನಲ್ಲಿ ಮುಳುಗಿದ್ದಾಗ, ವೈದ್ಯನು ತನ್ನ ಮಚ್ಚನ್ನು ತೆಗೆದುಕೊಂಡು ಕೊಳೆತ ಭಾಗವನ್ನು ಕತ್ತರಿಸುತ್ತಿದ್ದನು.


ಕ್ಷ- ಕಿರಣಗಳಂತೆ, ಶಬ್ದ ತರಂಗಗಳೂ ದೇಹದ ಒಳಗೆ ಪ್ರವೇಶಿಸಬಲ್ಲವು. ತುಂಡರಿಸಿದ ರಕ್ತನಾಳವನ್ನು ಬಂಧಿಸಬಲ್ಲವು. ರಕ್ತಸ್ರಾವವನ್ನು ನಿಲ್ಲಿಸಬಲ್ಲವು.

## ಕ್ಷೌರಿಕ

ಇಂಗ್ಲೆಂಡಿನಲ್ಲಿ ಶಸ್ತ್ರಚಿಕಿತ್ಸೆಯನ್ನು ಕ್ಷೌರಿಕರು ಮಾಡಲಾರಂಭಿಸಿದರು. ''ರೋಗಿಯ ರಕ್ತನಾಳವನ್ನು ಛೇದಿಸಿ, ರಕ್ತವನ್ನು ಹೊರಹರಿಯಬಿಟ್ಟರೆ, ರೋಗವು ಗುಣವಾಗುತ್ತದೆ'' ಎಂಬ ನಂಬಿಕೆ ಅಂದು ಪ್ರಚಲಿತ ದಲ್ಲಿತ್ತು.

ಪ್ರತಿಯೋರ್ವ ಕ್ಷೌರಿಕನು ತನ್ನ ಅಂಗಡಿಯ ಮುಂದೆ ಒಂದು ಕಂಬವನ್ನು ನೆಟ್ಟಿರುತ್ತಿದ್ದನು. ಆ ಕಂಬಕ್ಕೆ ಕೆಂಪು ಬಣ್ಣವನ್ನು ಬಳಿದಿರುತ್ತಿದ್ದನು. ರೋಗಿಯನ್ನು ತಂದು ಈ ಕಂಬಕ್ಕೆ ಕಟ್ಟಿ ಹಾಕುತ್ತಿದ್ದರು. ಆನಂತರ ಸರ್ಜನ್ ಮಿಸ್ಟರ್ ಕ್ಷೌರಿಕನು ರೋಗಿಯ ನರವನ್ನು (ವೇಯಿನ್) ಛೇದಿಸುತ್ತಿದ್ದನು. ರಕ್ತವನ್ನು ಹೊರ ಹರಿಯಲು ಬಿಡುತ್ತಿದ್ದನು....

ಜಿಗಣೆಯ ಹೆಸರನ್ನು ಕೇಳಿದರೆ ನನಗೆ ಹೆದರಿಕೆಯಾಗುತ್ತದೆ. ಮಲೆನಾಡಿನವರಿಗೆ ಅಥವಾ ಮಲೆನಾಡಿ ನಲ್ಲಿ ಸಂಚರಿಸಿದವರಿಗೆ ಗೊತ್ತು ಜಿಗಣೆಗಳೆಂದರೆ ಏನೆಂದು! ಸದ್ದಿಲ್ಲದಂತೆ ನಮ್ಮ ಮೈಗೆ ಅಂಟಿಕೊಳ್ಳುತ್ತವೆ. ರಕ್ತವನ್ನು ಹೀರಲಾರಂಭಿಸುತ್ತವೆ. ಅದರ ಹನ್ನೆರಡು ಜೊತೆ ಹೊಟ್ಟೆಗಳು (ಹೌದು...ಸರಿಯಾಗಿಯೇ ಬರೆದಿದ್ದೇನೆ. ಹನ್ನೆರಡು ಜೊತೆ ಹೊಟ್ಟೆಗಳು!) ರಕ್ತ ದಿಂದ ತುಂಬಿದ ಮೇಲೆ, ಅದು ತಂತಾನೆ ಉದುರಿ ಹೋಗುತ್ತದೆ!....ಮುಂದಿನ೬ತಿಂಗಳ ಕಾಲ ಅದಕ್ಕೆ ಮತ್ತೆ ರಕ್ತಾಹಾರ ದೊರೆಯದಿದ್ದರೂ ಚಿಂತೆಯಿಲ್ಲ.... ಆರಾಮವಾಗಿ ಬದುಕುಳಿಯುತ್ತದೆ. ಇಂತಹ ಜಿಗಣೆಗಳನ್ನು ವೈದ್ಯರು ತಮ್ಮ ಚಿಕಿತ್ಸೆಯಲ್ಲಿ ಬಳಸುತ್ತಿದ್ದರು. ಇವು ''ಕೆಟ್ಟರಕ್ತ'' ವನ್ನು ಹೀರಿ ರೋಗಗಳನ್ನು ಗುಣ ಪಡಿಸುತ್ತಿದ್ದವಂತೆ! ಇಂತಹ ಚಿಕಿತ್ಸೆ ವಿದೇಶಗಳಲ್ಲೂ ಇತ್ತು. ಭಾರತದಲ್ಲೂ ಇತ್ತು.

ಶಸ್ತ್ರ ಚಿಕಿತ್ಸೆ ತನ್ನ ನಿಜವಾದ ಅರ್ಥದಲ್ಲಿ ಆರಂಭ ವಾದದ್ದು, ಸುಮಾರು ೧೦೦ ವರ್ಷಗಳ ಹಿಂದೆ. ಅರಿವಳಿಕೆಯನ್ನು ಕಂಡು ಹಿಡಿದ ದಿನದಿಂದ. ಇಂದು ಅರಿವಳಿಕೆಯ ಶಾಸ್ತ್ರ ಒಂದು ಪ್ರತ್ಯೇಕ ವಿಜ್ಞಾನವಾಗಿ ಬೆಳೆದಿದೆ. ಈ ಶಾಸ್ತ್ರದಲ್ಲಿ ಪರಿಣತಿಯನ್ನು ಪಡೆದ ಸಾವಿರಾರು ವೈದ್ಯರಿದ್ದಾರೆ. ಇಂದು ತೆರೆದ ಹೃದಯ ಶಸ್ತ್ರ ಚಿಕಿತ್ಸೆ, ಬದಲಿ ಮೂತ್ರಪಿಂಡ ಶಸ್ತ್ರಚಿಕಿತ್ಸೆ ಮುಂತಾದ ಗಂಭೀರ ಶಸ್ತ್ರಚಿಕಿತ್ಸೆಗಳನ್ನೆಲ್ಲ ನಾವು ದಿನನಿತ್ಯವೂ ಮಾಡಬಹುದಾಗಿದೆ. ರೋಗಿಗೆ ಯಾವುದೇ ರೀತಿಯ ನೋವಾಗುವುದಿಲ್ಲ. ಆಗದಂತೆ ಪ್ರಜ್ಞೆಯನ್ನು ತಪ್ಪಿಸಿರುತ್ತಾರೆ. ಇದರಿಂದ ವೈದ್ಯರು ನಿರಾತಂಕವಾಗಿ ತಮ್ಮ ಶಸ್ತ್ರ ಚಿಕಿತ್ಸೆಯನ್ನು ಕರಾರುವಾಕ್ಕಾಗಿ ಮಾಡಬಹುದಾಗಿದೆ.

ಇಷ್ಟೆಲ್ಲ ನಿಜವೇ ಆಗಿದ್ದರೂ......

ಇಂದಿನ ಶಸ್ತ್ರಚಿಕಿತ್ಸೆಗಳಲ್ಲಿ ರಕ್ತ ಹರಿಯುತ್ತದೆ. ನೋವೂ ಇರುತ್ತದೆ. ಇಂದಿನ ಶಸ್ತ್ರ ಚಿಕಿತ್ಸೆಗಳಲ್ಲಿರುವ ಅನಾನುಕೂಲತೆಗಳೆಂದರೆ....

★ ಶಸ್ತ್ರಚಿಕಿತ್ಸೆಯ ನಂತರ ರೋಗಿಯು ಕನಿಷ್ಟ ಒಂದು ವಾರವಾದರೂ ಆಸ್ಪತ್ರೆಯಲ್ಲಿರಬೇಕಾಗುತ್ತದೆ. ಕಾಲಕಾಲಕ್ಕೆ ನಿಯಮಿತವಾಗಿ ನೋವು ನಿವಾರಕ ಔಷಧಗಳನ್ನು ಬಳಸಬೇಕಾಗುತ್ತದೆ.

★ ಮನೆಗೆ ಬಂದ ಮೇಲೆ ಸಾಕಷ್ಟು ಕಾಲ ವಿಶ್ರಾಂತಿಯನ್ನು ಪಡೆಯಬೇಕಾಗುತ್ತದೆ. ಕೆಲವು ಸಂದರ್ಭಗಳಲ್ಲಿ ದೈನಂದಿನ ಕೆಲಸಗಳಲ್ಲಿ ಮೊದಲಿನಂತೆ ಪರಿಪೂರ್ಣವಾಗಿ ತೊಡಗಿಕೊಳ್ಳುವುದು ಸಾಧ್ಯವಾಗದೇ ಹೋಗಬಹುದು.

★ ರೋಗಿಯ ದೇಹದ ಮೇಲೆ ಶಸ್ತ್ರಚಿಕಿತ್ಸೆ ನಡೆಸಿದ ಸ್ಥಳದಲ್ಲಿ ಕಲೆಯ ಗುರುತು ಶಾಶ್ವತವಾಗಿ ಉಳಿಯುತ್ತದೆ.

★ ಇಂದಿನ ಸಾಂಪ್ರದಾಯಿಕ ವಿಧಾನದ ಮೂಲಕ ಆಯಕಟ್ಟಿನ ಸ್ಥಳಗಳಲ್ಲಿ ಶಸ್ತ್ರ ಚಿಕಿತ್ಸೆಯನ್ನು ಮಾಡಲು ಸಾಧ್ಯವಿಲ್ಲ. ಉದಾ : ಮಿದುಳಿನ ಒಳಭಾಗಗಳು.

★ ಇಂದಿನ ಶಸ್ತ್ರಚಿಕಿತ್ಸೆಗಳಲ್ಲಿ ರಕ್ತಸ್ರಾವ ಅನಿವಾರ್ಯ. ಇತ್ತೀಚೆಗೆ ರಕ್ತ ನಷ್ಟವನ್ನು ಸಾಕಷ್ಟು ಮಿತಿಗೊಳಿಸಲಾಗಿದೆ.

ಆದರೂ ಅನೇಕ ಸಂದರ್ಭಗಳಲ್ಲಿ ರಕ್ತ ಪೂರಣ (ಬ್ಲಡ್ ಟ್ರಾನ್ಸ್‌ಫ್ಯೂಶನ್) ಅನಿವಾರ್ಯವಾಗಬಹುದು. ಒಂದು ತೆರೆದ ಹೃದಯ ಶಸ್ತ್ರಚಿಕಿತ್ಸೆಯನ್ನು ಮಾಡಬೇಕಾದರೆ, ಕನಿಷ್ಠ ೬ ಬಾಟಲಿ ರಕ್ತವಾದರೂ ಬೇಕೆ ಬೇಕು.

ಈ ಎಲ್ಲ ಅನಾನುಕೂಲತೆಗಳನ್ನು ನಿವಾರಿಸಲೆಂದೇ ಬರುತ್ತಿದೆ ರಕ್ತರಹಿತ ಶಸ್ತ್ರಚಿಕಿತ್ಸೆ!

## ಸೈಬರ್ ಚೂರಿ

ರಕ್ತರಹಿತ ಶಸ್ತ್ರಚಿಕಿತ್ಸೆಯನ್ನು ಮಾಡುವುದರಲ್ಲಿ ಇಂದು ಮುಂಚೂಣಿಯಲ್ಲಿದ್ದಾರೆ ಸ್ಟಾನ್‌ಫೋರ್ಡ್ ಮೆಡಿಕಲ್ ಸೆಂಟರಿನ ವೈದ್ಯ ವಿಜ್ಞಾನಿಗಳು. ಇವರು ವಿಶೇಷವಾಗಿ ಮಿದುಳು ಹಾಗೂ ಮಿದುಳು ಬಳ್ಳಿ ಸಂಬಂಧಿತ ಗಂತಿಗಳನ್ನು ರಕ್ತರಹಿತ ಶಸ್ತ್ರಚಿಕಿತ್ಸೆಯ ಮೂಲಕ ನಿವಾರಿಸುವುದರಲ್ಲಿ ಅದ್ಭುತ ಪರಿಣತಿಯನ್ನು ಗಳಿಸಿದ್ದಾರೆ.

ಮಿದುಳಿನ ಆಯಕಟ್ಟಿನ ಸ್ಥಳದಲ್ಲಿ ಗಂತಿ ಬೆಳೆಯುತ್ತ ಸಾಂಪ್ರದಾಯಿಕ ಶಸ್ತ್ರಚಿಕಿತ್ಸೆಯಲ್ಲಿ ಬಳಸುವ ಚೂರಿಗೆ ನಿಲುಕದೆ, ರೋಗಿಗೆ ಸಾವು ಕಟ್ಟಿಟ್ಟಬುತ್ತಿ ಎಂದು ಎಲ್ಲರೂ ನಂಬಿ ಕೈ ಚೆಲ್ಲಿದಾಗ....ಅವರ ನೆರವಿಗೆ ಬರುತ್ತಿದೆ ಸೈಬರ್ ಚೂರಿ! ರೋಗಿಯ ತಲೆಕೂದಲನ್ನು ಬೋಳಿಸಬೇಕಾಗಿಲ್ಲ, ರೋಗಿಯ ತಲೆಯನ್ನು ಗರಗಸದಿಂದ ಸಿಗಿಯಬೇಕಾಗಿಲ್ಲ. ಹಾಗೆಯೇ ಸೈಬರ್ ಚೂರಿಯಿಂದ ಗಂತಿಯನ್ನು ನಿವಾರಿಸಬಹುದು.

ರಕ್ತರಹಿತ ಶಸ್ತ್ರಚಿಕಿತ್ಸೆ ನಡೆಯುವುದು ಗಣಕ ನಿಯಂತ್ರಿತ ಆಯಾಮ ಜೋಡಣಾ ವಿಕಿರಣ ಶಸ್ತ್ರ ಚಿಕಿತ್ಸಾ ವ್ಯವಸ್ಥೆಯ ಮೂಲಕ! (ಕಂಪ್ಯೂಟರ್ ಮೀಡಿಯೇಟೆಡ್ ಸ್ಟೀರಿಯೋಟಾಕ್ಸಿಸ್ ರೇಡಿಯೋ ಸರ್ಜರಿ ಸಿಸ್ಟಮ್) ಈ ವ್ಯವಸ್ಥೆಗೆ ಜನಪ್ರಿಯ ಹೆಸರೇ ಸೈಬರ್ ಚೂರಿ ಅಥವಾ ಸೈಬರ್ ನೈಫ್! ಇದಕ್ಕೆ X- ಚೂರಿ, ಗ್ಯಾಮಾಚೂರಿ ಎಂಬ ಪರ್ಯಾಯ ಹೆಸರಿವೆ.

ಸೈಬರ್ ಚೂರಿಯೆಂದರೆ ನಿಜಕ್ಕೂ ಅದೊಂದು ಸ್ವಯಂಚಾಲಿತ ಕ್ಷ-ಕಿರಣ ಬಂದೂಕು. (ರೋಬೋಟಿಕ್ ಎಕ್ಸ್-ರೇಗನ್) ಈ ಬಂದೂಕು ನಿಗದಿತ ಪ್ರಮಾಣದಲ್ಲಿ ಕ್ಷ-ಕಿರಣಗಳನ್ನು ಚಿಮ್ಮುತ್ತದೆ. ಮಿದುಳಿನ ಮಧ್ಯದಲ್ಲಿರುವ ಗಂತಿಗೆ ನಿಖರವಾಗಿ ನಿರ್ದೇಶಿಸಿ ''ಕುದುರೆ' ಯನ್ನು ಒತ್ತಿದರೆ ಸಾಕು, ಬಂದೂಕಿನಿಂದ ವಿಕಿರಣ ಚಿಮ್ಮುತ್ತದೆ. ಒಂದು ದಿಕ್ಕಿನಿಂದ ಅಲ್ಲ. ನೂರಾರು ದಿಕ್ಕುಗಳಿಂದ. ಈ ವಿಕಿರಣವು ಗಂತಿಯನ್ನು ಸುಟ್ಟು ನಾಶಮಾಡುತ್ತದೆ. ಆದರೆ ಸುತ್ತಮುತ್ತಲಿರುವ ಮಿದುಳಿನ ಆರೋಗ್ಯಕರ ಭಾಗಗಳಿಗೆ ಯಾವುದೇ ಹಾನಿಯಾಗುವುದಿಲ್ಲ.

### ಸ್ವಯಂಚಾಲಿತ

ಇದರಲ್ಲೇನು ಹೊಸತಿದೆ ? ಎಂದು ನೀವು ಪ್ರಶ್ನಿಸ ಬಹುದು. ವಿಕಿರಣದಿಂದ ಗಂತಿಯನ್ನು ಸುಟ್ಟು ನಾಶ ಪಡಿಸುವ ವಿಧಾನ ಸಾಕಷ್ಟು ಕಾಲದಿಂದಲೂ ಬಳಕೆಯಲ್ಲಿದೆ. ಇಂತಹ ಸೌಲಭ್ಯವು ಭಾರತದ ಅನೇಕ ನಗರಗಳಲ್ಲೂ ದೊರೆಯುತ್ತಿದೆ. ಹಾಗಿರುವಾಗ ಸ್ಟಾನ್ ಫೋರ್ಡ್ ವೈದ್ಯರ ವಿಶೇಷತೆಯೇನು ? ಎಂದು ನೀವು ಪ್ರಶ್ನಿಸಬಹುದು.

ನಿಜ. ಹೊಸತಿದೆ. ಇದುವರೆಗೆ ರೋಗಿಯ ತಲೆಯನ್ನು ಒಂದು ಲೋಹದ ಪಟ್ಟಿಯಲ್ಲಿ ಬಿಗಿಯುತ್ತಿದ್ದರು, ನಂತರ ವಿಕಿರಣವನ್ನು ಹಾಯಿಸುತ್ತಿದ್ದರು. ಆದರೆ ರೋಗಿಯ ಅರಿವಿಗೆ ಬಾರದಂತಹ ಸೂಕ್ಷ್ಮಾತಿ ಸೂಕ್ಷ್ಮ ಚಲನೆಗಳು ಸಂಭವಿಸುತ್ತಿದ್ದವು. ಆಗ ವಿಕಿರಣವು ತನ್ನ ಗುರಿತಪ್ಪಿ ಅತ್ತಿತ್ತ ಸುಡುತ್ತಿತ್ತು. ನಿಖರತೆಯ ಕೊರತೆಯೇ ಈಗ ಬಳಕೆಯಲ್ಲಿರುವ ಚಿಕಿತ್ಸಾ ವಿಧಾನದ ಪ್ರಮುಖ ದೋಷ.

ಸ್ಟಾನ್‌ಫೋರ್ಡಿನವರ ನೂತನ ವ್ಯವಸ್ಥೆಯಲ್ಲಿ ಒಂದು ಸ್ವಯಂ ಚಾಲಿತ ಬಾಹುವಿದೆ (ರೋಬೋಟಿಕ್ ಆರ್ಮ್) ಇದು ವಿಕಿರಣವನ್ನು ಗಂತಿಯ ವ್ಯಾಪ್ತಿಗೆ ಮಾತ್ರ ನಿಖರವಾಗಿ ಸೀಮಿತಗೊಳಿಸುತ್ತದೆ. ರೋಗಿಯು ನಡೆಸಬಹುದಾದ ಸೂಕ್ಷ್ಮಾತಿ ಸೂಕ್ಷ್ಮ ಚಲನೆಗಳಿಗೆ ಸರಿಯಾಗಿ ಹೊಂದಿಕೊಂಡು ಸ್ವಯಂ ತಂತಾನೆ ಚಲಿಸುತ್ತದೆ ಆಗ ಗುರಿ ತಪ್ಪುವುದಿಲ್ಲ!

### ೪೫ ನಿಮಿಷ

ಮೊದಲು ರೋಗಿಯ ಮಿದುಳಿನ ಚಿತ್ರಗಳನ್ನು ತೆಗೆಯುತ್ತಾರೆ. ನಂತರ ಕಂಪ್ಯೂಟರಿನ ನೆರವಿನಿಂದ ರೋಗಿಯ ಮಿದುಳನ್ನು ಮೂರು ಆಯಾಮಗಳಲ್ಲಿ ಪುನರ್ ರಚಿಸುತ್ತಾರೆ. ಆಗ ಗಂತಿಯಿರುವ ಸ್ಥಾನ ಹಾಗೂ ಅದರ ವ್ಯಾಪ್ತಿ ನಿಖರವಾಗಿ ತಿಳಿಯುತ್ತದೆ. ಅದಕ್ಕೆ ಸರಿಯಾಗಿ ಕಿರಣಗಳನ್ನು ಹೊಂದಿಸಿ ಹಾಯಿಸುತ್ತಾರೆ. ಈ ಕಿರಣಗಳು ಮಿದುಳಿನ ಆರೋಗ್ಯಯುತ ನರಕೋಶಗಳಿಗೆ ಹಾನಿಯನ್ನುಂಟು ಮಾಡುವುದಿಲ್ಲ.

ಇಡೀ ರಕ್ತರಹಿತ ಶಸ್ತ್ರಚಿಕಿತ್ಸೆಗೆ ಕೇವಲ ೪೫ ನಿಮಿಷ ಸಾಕು. ಇಂತಹ ಸಂದರ್ಭದಲ್ಲಿ ಅಂದೇ ರೋಗಿಯು ಮನೆಗೆ ಹೋಗಬಹುದು. ಇದೇ ಶಸ್ತ್ರಚಿಕಿತ್ಸೆಯನ್ನು ಸಾಂಪ್ರದಾಯಿಕ ವಿಧಾನದಿಂದ ಮಾಡಲೆತ್ನಿಸಿದರೆ, ಬಹುಪಾಲು ಸಂದರ್ಭಗಳಲ್ಲಿ ವಿವಿಧ ಪ್ರಮಾಣದಲ್ಲಿ ಪಾರ್ಶ್ವವಾಯು (ಪೆರಾಲಿಸಿಸ್) ಹೊಡೆಯಬಹುದು. ಅಂತಹ ಭೀತಿ ರಕ್ತರಹಿತ ಶಸ್ತ್ರಚಿಕಿತ್ಸೆಯಲ್ಲಿ ಇರುವುದಿಲ್ಲ.

### ಅಂಗಗಳು

ರಕ್ತರಹಿತ ಶಸ್ತ್ರಚಿಕಿತ್ಸೆಯನ್ನು ಕೇವಲ ಮಿದುಳಿನ ಮೇಲೆ ಮಾತ್ರ ಮಾಡಲು ಸಾಧ್ಯವೇ? ಇತರ ಅಂಗಗಳಲ್ಲಿ ಬೆಳೆದಿರುವ ಗಂತಿಗಳನ್ನು ನಿವಾರಿಸಲು ಸಾಧ್ಯ ವಿಲ್ಲವೆ ? ಖಂಡಿತ ಸಾಧ್ಯವಿದೆ. ಶುಕ್ಲಗ್ರಂಥಿ, ಮಾಂಸಲಿ, ಶ್ವಾಸಕೋಶ, ಯಕೃತ್ತು ಮುಂತಾದ ಅಂಗ ಗಳಲ್ಲಿರುವ ಮಧ್ಯಮದರ್ಜೆ ಗಾತ್ರದ ಗಂತಿಗಳನ್ನು ಸೈಬರ್ ಚೂರಿಯಿಂದಲೇ ನಿವಾರಿಸಬಹುದು. ಅಂದರೆ...ಮುಂದಿನ ದಿನಗಳಲ್ಲಿ ಸಾಂಪ್ರದಾಯಿಕ ಶಸ್ತ್ರಚಿಕಿತ್ಸೆ ನಿಲ್ಲಲಿದೆಯೇ?.....






ಮೂಳೆ ಕೂಡುವಿಕೆಯನ್ನು ಪ್ರಚೋದಿಸುವ ಎಕ್ಸೋಜೆನ್ ಅಲ್ಟ್ರಾ ಸೌಂಡ್ ಸಾಧನ.

### ಅಯಸ್ಕಾಂತ

ರಕ್ತರಹಿತ ಶಸ್ತ್ರಚಿಕಿತ್ಸೆಯ ಒಂದು ಮುಖವನ್ನು ಇದುವರೆಗೂ ಓದಿದಿರಿ. ಈಗ ಇನ್ನೊಂದು ಮುಖವನ್ನು ವಿವರಿಸುತ್ತೇನೆ. ಅದೆಂದರೆ ಅಯಸ್ಕಾಂತ ತ್ರಿ ಆಯಾಮ ಜೋಡಣಾ ವ್ಯವಸ್ಥೆ (ಮ್ಯಾಗ್ನೆಟಿಕ್ ಸ್ಟೀರಿಯೋಟಾಕ್ಸಿಸ್ ಸಿಸ್ಟಮ್).

ಕೆಲವರಲ್ಲಿ ಗಂತಿಯು ಬಲವಾಗಿ ಬೇರೂರಿರಬಹುದು. ಇಂತಹ ಗತಿಗಳನ್ನು ವಿಕಿರಣದ ನೆರವಿನಿಂದ ಒಂದೇ ಸಲ ನಿವಾರಿಸಲು ಸಾಧ್ಯವಾಗದಿರಬಹುದು, ಇಲ್ಲವೇ ಆ ಗಂತಿಯು ವಿಕಿರಣ ರೋಧತೆ ಹೊಂದಿದ್ದು ರಸಾಯನ ಚಿಕಿತ್ಸೆಗೆ ಮಾತ್ರ ಬಗ್ಗುವಂತಹದ್ದಾಗಿರಬಹುದು. ರಸಾಯನ ಚಿಕಿತ್ಸೆಯ ಔಷಧಗಳು ಅನೇಕ ಪಾರ್ಶ್ವ ಪರಿಣಾಮಗಳನ್ನು ಹೊಂದಿವೆ. ಹಾಗಾಗಿ ಇಂತಹ ಔಷಧಗಳನ್ನು ನೇರವಾಗಿ ಗಂತಿಯೊಳಗೇ ಚುಚ್ಚುವಂತಿದ್ದರೆ...ಇಂತಹ ಉದ್ದೇಶಗಳನ್ನು ಪೂರೈಸಲು ಬರುತ್ತಿದೆ ಈ ಹೊಸ ಅಯಸ್ಕಾಂತ ತ್ರಿ ಆಯಾಮ ಜೋಡಣಾ ವ್ಯವಸ್ಥೆ.

ಈ ರಕ್ತರಹಿತ ಶಸ್ತ್ರಚಿಕಿತ್ಸೆಯನ್ನು ಆರಂಭಿಸುವ ಮೊದಲು ವೈದ್ಯರು ಸಾಕಷ್ಟು ಪೂರ್ವ ಸಿದ್ಧತೆಯನ್ನು ನಡೆಸುತ್ತಾರೆ.

ಮೊದಲು ರೋಗಿಯ ಮಿದುಳಿನ ಚಿತ್ರಗಳನ್ನು MRI (ಮ್ಯಾಗ್ನೆಟಿಕ್ ರೆಸೊನೆನ್ಸ್ ಇಮೇಜಿಂಗ್) ನೆರವಿನಿಂದ ತೆಗೆಯುತ್ತಾರೆ. ನಂತರ ಕಂಪ್ಯೂಟರ್ ನೆರವಿನಿಂದ ಮಿದುಳಿನ ಮೂರು ಆಯಾಮಗಳ ಚಿತ್ರವನ್ನು ರೂಪಿಸುತ್ತಾರೆ. ಅದರಲ್ಲಿ ಗಂತಿಯಿರುವ ಸ್ಥಾನವನ್ನು ಹಾಗೂ ಅದರ ವ್ಯಾಪ್ತಿಯನ್ನು ಕರಾರುವಾಕ್ಕಾಗಿ ಗುರುತಿಸುತ್ತಾರೆ.

ಇದಾದ ನಂತರ, ಗಂತಿಯಿರುವ ಸ್ಥಳವನ್ನು ತಲುಪಲು ಸೂಕ್ತವಾದ ಮಾರ್ಗವನ್ನು ಹುಡುಕುತ್ತಾರೆ. ಈ ಮಾರ್ಗದಲ್ಲಿ ರಕ್ತನಾಳಗಳು ಅಡ್ಡ ಬರಬಾರದು. ಯಾವುದೇ ನರಕೇಂದ್ರಗಳು ಹಾಗೂ ಅಂತಹ ಸುರಕ್ಷಿತವಾದ ಹಾದಿಯನ್ನು ಅನ್ವೇಷಿಸುತ್ತಾರೆ.

### ಪ್ರಾಥಮಿಕ ಸಿದ್ಧತೆಯ ನಂತರ

ವೈದ್ಯರು ರೋಗಿಯ ನೆತ್ತಿಚರ್ಮ ಹಾಗೂ ತಲೆಯೋಡಿನಲ್ಲಿ ಒಂದು ಸಣ್ಣ ಗಾಯ ಮಾಡುತ್ತಾರೆ. ಅದರ ಮೂಲಕ ಒಂದು ಅಯಸ್ಕಾಂತ ಅನ್ವೇಷಕವನ್ನು (ಮ್ಯಾಗ್ನೆಟಿಕ್ ಪ್ರೋಬ್) ತೂರಿಸುತ್ತಾರೆ. ಮಿದುಳಿನ ಹೊರ ಮೈ ಮೇಲೆ ಅದನ್ನು ಸ್ಥಾಪಿಸುತ್ತಾರೆ. ನಂತರ ರೋಗಿಯ ತಲೆಗೆ ಒಂದು ಅಯಸ್ಕಾಂತದ ಶಿರಸ್ತ್ರಾಣವನ್ನು (ಮ್ಯಾಗ್ನೆಟಿಕ್ ಹೆಲ್ಮೆಟ್) ತೊಡಿಸುತ್ತಾರೆ. ಇದರೊಳಗೆ ಅಧಿವಾಹಕತ್ವದ ಅಯಸ್ಕಾಂತಗಳು (ಸೂಪರ್ ಕಂಡಕ್ಟಿಂಗ್ ಮ್ಯಾಗ್ನೆಟ್ಸ್) ಇರುತ್ತವೆ. ಒಂದು ಕಂಪ್ಯೂಟರಿನ ನೆರವಿನಿಂದ ಹೆಲ್ಮೆಟ್ಟಿನ ಅಯಸ್ಕಾಂತವನ್ನು ಹಾಗೂ ಮಿದುಳಿನ ಒಳಗಿರುವ ಅಯಸ್ಕಾಂತ ಅನ್ವೇಷಕವನ್ನು ನಿಯಂತ್ರಿಸಬಹುದು.

ವೈದ್ಯರು ಈ ಎರಡೂ ಅಯಸ್ಕಾಂತಗಳ ನಡುವೆ ಆಕರ್ಷಣೆ ಮತ್ತು ವಿಕರ್ಷಣೆಗಳನ್ನು ಸೃಜಿಸುತ್ತಾರೆ. ಇದರ ಫಲವಾಗಿ, ಅಯಸ್ಕಾಂತ ಅನ್ವೇಷಕವು ಮಿದುಳಿನೊಳಗೆ ಚಲಿಸಲಾರಂಭಿಸುತ್ತದೆ. ಕಂಪ್ಯೂಟರ್ ನೆರವಿನಿಂದ ಪೂರ್ವ ನಿರ್ಧಾರಿತ ಸುರಕ್ಷಿತ ಮಾರ್ಗದ ಮೂಲಕ ಅನ್ವೇಷಕವನ್ನು ಗಂತಿಯಿರುವೆಡೆಗೆ ಸಾಗಿಸುತ್ತಾರೆ. ಒಂದು ಸಲ ಗಂತಿಯನ್ನು ನಿಖರವಾಗಿ ಸ್ಥಾಪಿಸಿದರೆ ಆಯಿತು, ಆನಂತರದ ಚಿಕಿತ್ಸೆ ಸುಲಭವಾಗಿ ನಡೆಯುತ್ತದೆ.

ಚಿಕಿತ್ಸೆಯ ನಂತರ ಅನ್ವೇಷಕವನ್ನೇನು ಮಾಡಬೇಕು? ಎಂಬ ಪ್ರಶ್ನೆ ನಿಮ್ಮ ಮನದಲ್ಲಿ ಸುಳಿಯಬಹುದು.

ಅಯಸ್ಕಾಂತ ಅನ್ವೇಷಕವನ್ನು ಹೊರತೆಗೆಯುವ ಅವಶ್ಯಕತೆಯಿಲ್ಲ. ಅದನ್ನು ಮಿದುಳಿನಲ್ಲಿಯೇ ಬಿಡಬಹುದು. ಚಿಕಿತ್ಸೆಯನ್ನು ಹಲವು ಸಲ ಪುನರಾವರ್ತಿಸಬೇಕಾದ ಸಂದರ್ಭಗಳಲ್ಲಂತೂ ಇದೇ ಅನ್ವೇಷಕವನ್ನು ಮತ್ತೆ ಮತ್ತೆ ಬಳಸಬಹುದು. ಬಳಸಿದ ನಂತರ ಮಿದುಳಿನೊಳಗೆ ಅಪಾಯರಹಿತ ಸ್ಥಾನದಲ್ಲಿ ಅದನ್ನು ಶಾಶ್ವತವಾಗಿ ಇರಿಸಬಹುದು. ಇದರಿಂದ ತೊಂದರೆಯೇನೂ ಇಲ್ಲ.

ಸೈಂಟ್ ಲೂಯಿಸ್ ವಾಶಿಂಗ್‌ಟನ್ ಯೂನಿವರ್ಸಿಟಿ ಸ್ಕೂಲ್ ಆಫ್ ಮೆಡಿಸಿನ್‌ರವರು ಪ್ರಸ್ತುತ ಈ ಪ್ರಯೋಗವನ್ನು ಮಿದುಳು ಪೆಟ್ಟಿಗೆಗಳ ಮೇಲೆ ನಡೆಸುತ್ತಿದ್ದಾರೆ. ಈ ಪೆಟ್ಟಿಗೆಗಳು ಮಿದುಳಿನಂತೆ ಇರುತ್ತವೆ. ಇದರೊಳಗೆ ಮಿದುಳನ್ನು ಹೋಲುವಂತಹ ಗಂಜಿ (ಜೆಲ್) ಯಿರುತ್ತದೆ. ಇದರೊಳಗೆ ಅಯಸ್ಕಾಂತ ಅನ್ವೇಷಕವನ್ನು ಇರಿಸಿ ಕಂಪ್ಯೂಟರ್ ನೆರವಿನಿಂದ ಉದ್ದೇಶಿತ ಸ್ಥಾನವನ್ನು ತಲುಪಬಹುದೇ? ಎಂದು ಪ್ರಯತ್ನಿಸುತ್ತಿದ್ದಾರೆ. ಈ ವರ್ಷದ ಕೊನೆಯಲ್ಲಿ ಈ ತಂತ್ರಜ್ಞಾನದ ನೆರವಿನಿಂದ ರಕ್ತರಹಿತ ಶಸ್ತ್ರಚಿಕಿತ್ಸೆಯನ್ನು ಮನುಷ್ಯರ ಮೇಲೆ ನಡೆಸುವ ಸಾಧ್ಯತೆಯಿದೆ.

### ಮೈಕ್ರೋಸರ್ಜನ್

ಈ ರಕ್ತರಹಿತ ಶಸ್ತ್ರಚಿಕಿತ್ಸಾ ವ್ಯವಸ್ಥೆ ಮುಖ್ಯವಾದ ಎರಡು ಉದ್ದೇಶಗಳನ್ನು ಹೊಂದಿದೆ.

ಮೊದಲನೆಯದು, ಅನ್ವೇಷಕದೊಳಗೆ ವಿಕಿರಣ ವಸ್ತುವನ್ನು ಅಥವಾ ಗಂತಿನಾಶಕ ರಾಸಾಯನಿಕ ವಸ್ತುವನ್ನು ಇಟ್ಟು, ಅದನ್ನು ಗಂತಿಯೊಳಗೆ ಸೇರಿಸುವುದು. ಎರಡನೆಯದು, ಅನ್ವೇಷಕದೊಳಗೆ ಸೂಕ್ಷ್ಮಾತಿಸೂಕ್ಷ್ಮ ಶಸ್ತ್ರ ಚಿಕಿತ್ಸಾ ಸಲಕರಣೆಗಳನ್ನು ಜೋಡಿಸುವುದು. ಕಂಪ್ಯೂಟರ್ ನೆರವಿನಿಂದ ಈ ಶಸ್ತ್ರ ಚಿಕಿತ್ಸಾ ಸಲಕರಣೆಗಳನ್ನು ಬಳಸಿ ಅವಶ್ಯ ಶಸ್ತ್ರಕ್ರಿಯೆಯನ್ನು ನಡೆಸುವುದು.

ಅಮೆರಿಕದ ಏರ್‌ಫೋರ್ಸ್ ಫಿಲಿಪ್ಸ್ ಲ್ಯಾಬೋರೇಟರಿಯವರು ಇಂತಹ ಸೂಕ್ಷ್ಮ ಸಲಕರಣೆಗಳನ್ನು ಸೃಜಿಸಲು ಅಗತ್ಯವಾದ ಮೈಕ್ರೋಟ್ಯೂಬ್ ತಂತ್ರಜ್ಞಾನವನ್ನು ಈಗಾಗಲೆ ಇನ್‌ಕಾರ್ಪೋರೇಶನ್‌ರವರು (ಇ.ಆರ್.ಐ.) ಸೂಕ್ಷ್ಮ ಸಲಕರಣೆಗಳನ್ನು ನಿರ್ಮಿಸುತ್ತಿದ್ದಾರೆ.

ಇದು ಯಶಸ್ವಿಯಾದಾಗ ವೈದ್ಯರ ಸಾಂಪ್ರದಾಯಿಕ ಚೂರಿಗೆ ನಿಲುಕದ ಗಂತಿಗಳನ್ನು ಸ್ವಯಂಚಾಲಿತ ಸೂಕ್ಷ್ಮ ಶಸ್ತ್ರಚಿಕಿತ್ಸಕರ (ರೋಬೋಟ್ ಮೈಕ್ರೋ ಸರ್ಜನ್) ನೆರವಿನಿಂದ ಭೇದಿಸಬಹುದು. ಇನ್ನು ಮುಂದಿನ ೨ ವರ್ಷಗಳಲ್ಲಿ ಈ ತಂತ್ರಜ್ಞಾನದ ಪರಿಪೂರ್ಣತೆಯನ್ನು ಸಾಧಿಸಲಿದ್ದೇವೆ ಎನ್ನುತ್ತಾರೆ. ಇ.ಆರ್.ಐನ ಮೋಹ್‌ಸಿನ್ ಶಾಹಿನ್‌ಪುರ್.

### ಲೇಸರ್ :

ರಕ್ತರಹಿತ ಶಸ್ತ್ರಚಿಕಿತ್ಸೆಯಲ್ಲಿ ಇಂದು ನಾವು ಪ್ರಧಾನವಾಗಿ ಕ್ಷ-ಕಿರಣಗಳನ್ನು ಬಳಸುತ್ತಿದ್ದೇವೆ. ಕ್ಷ-ಕಿರಣಗಳು ಅಧಿಕ ಶಕ್ತಿಯನ್ನು ಹೊಂದಿರುತ್ತವೆ. ಹಾಗೂ ಇದರ ನಾಶಕಸಾಮರ್ಥ್ಯ ಅಧಿಕವಾಗಿರುತ್ತದೆ. ಎಲ್ಲ ಸಂದರ್ಭಗಳಲ್ಲಿ ಇಂತಹ ಕ್ಷ-ಕಿರಣಗಳು ಕೆಲಸಕ್ಕೆ ಬರುವುದಿಲ್ಲ. ಅಲ್ಪ ಶಕ್ತಿಯ ಮಿತ ತೀಕ್ಷ್ಣತೆಯ ಕಿರಣಗಳು ಬೇಕಾಗುತ್ತವೆ. ಅಂತಹ ಸಂದರ್ಭಗಳಲ್ಲಿ ನಮ್ಮ ನೆರವಿಗೆ ಬರುತ್ತಿದೆ ಲೇಸರ್!

ಇದಕ್ಕೆ ಅತ್ಯುತ್ತಮ ಉದಾಹರಣೆ, ಸೈನ್ಯದ ಸೇವೆಗಾಗಿ ಎಂದೇ ಫಿಲಿಪ್ಸ್ ಲ್ಯಾಬೋರೇಟರಿಯವರು ರೂಪಿಸಿರುವ "ಲೇಸರ್ ಸುಡುವ ಸಾಧನ." (ಲೇಸರ್ ಕಾಟರೈಜಿಂಗ್ ಟೂಲ್) ಯುದ್ಧದಲ್ಲಿ ಅನೇಕ ಯೋಧರು ಗಾಯಗೊಳ್ಳುತ್ತಾರೆ. ಆಗ ಅವರು ಎದುರಿಸುವ ಪ್ರಮುಖ ಸಮಸ್ಯೆಯೆಂದರೆ ರಕ್ತಸ್ರಾವ. ಅನೇಕ ಯೋಧರು ಸಕಾಲದಲ್ಲಿ ರಕ್ತಸ್ರಾವವನ್ನು ನಿಲ್ಲಿಸಲಾಗದೆ ಸಾವನ್ನಪ್ಪುತ್ತಾರೆ. ಇಂತಹವರಿಗಾಗಿ ಫಿಲಿಪ್ಸ್ ಲ್ಯಾಬೋರೇಟರಿ ರೂಪಿಸಿದೆ ಈ ಲೇಸರ್ ಸುಡುವ ಸಾಧನವನ್ನು! ರಕ್ತಸ್ರಾವ ನಿಲ್ಲಿಸಲು ರಕ್ತ

ಸ್ರಾವವಾಗುತ್ತಿರುವ ಸ್ಥಾನವನ್ನು ಗುರುತಿಸ ಬೇಕು. ಅದಕ್ಕೆ ಸರಿಯಾಗಿ ಲೇಸರನ್ನು ಹಾಯಿಸಬೇಕು. ಹತ್ತೇ ಹತ್ತು ಸೆಕೆಂಡುಗಳಲ್ಲಿ ರಕ್ತನಾಳ ಮುಚ್ಚಿಕೊಳ್ಳುತ್ತದೆ. ರಕ್ತಸ್ರಾವವು ನಿಲ್ಲುತ್ತದೆ.

ನಾನು, ನೀವು ಬರೆಯುವ ಲೇಖನಿಯಷ್ಟು ಗಾತ್ರವಿರುವ ಸಾಧನ ಈಗ ಜನಸಾಮಾನ್ಯರ ಬಳಕೆಗೂ ಸಿಗಲಿದೆ. ಇನ್ನು ಮುಂದೆ ವಿದೇಶಗಳ ಲ್ಲಿರುವ ಪ್ರಥಮ ಚಿಕಿತ್ಸಕರ ಪೆಟ್ಟಿಗೆಯಲ್ಲಿ ಪ್ರಮುಖ ಸ್ಥಾನವನ್ನು ಪಡೆಯಲಿದೆ ಈ ಲೇಸರ್ ಪೆನ್!

### ಹಚ್ಚೆ

ಯುವ ಪ್ರೇಮಿಯೊಬ್ಬ ಯೌವ್ವನದ ಬಿಸಿ ಯಲ್ಲಿ ತನ್ನ ಮುಂದೋಳಿನ ಮೇಲೆ ಹಚ್ಚೆ ಹಾಕಿಸಿಕೊಂಡ ''ಮಾಲ...ಐ ಲವ್ ಯೂ'' ಎಂದು, ಆದರೆ ಬದುಕಿನ ವಾಸ್ತವತೆಯ ಅರಿ ವಾದ ಮೇಲೆ ಮಾಲಳನ್ನು ಬಿಡ ಬೇಕಾಯಿತು. ಕಮಲಳನ್ನು ಮದುವೆಯಾಗಬೇಕಾಗಿ ಬಂದಿತು. ಆದರೆ ಅವನ ಮುಂದೋಳಿನ ಮೇಲಿದ್ದ ಬರಹ ಅವನನ್ನು ಅಣಕಿಸುತ್ತಲೇ ಇತ್ತು.

ಇಂತಹವರ ನೆರವಿಗಾಗಿ ಬರುತ್ತಿದೆ ರಕ್ತರಹಿತ ಶಸ್ತ್ರ ಚಿಕಿತ್ಸೆ. ವೈದ್ಯರು ಹಚ್ಚೆಗೆ ಸರಿಯಾಗಿ ಲೇಸರ್ ಕಿರಣ ವನ್ನು ಹಾಯಿಸುತ್ತಾರೆ. ಹಚ್ಚೆಯಲ್ಲಿರುವ ಬಣ್ಣವು ಕಿರಣಗಳನ್ನು ಹೀರಿಕೊಳ್ಳುತ್ತದೆ. ಛಿದ್ರ ಛಿದ್ರವಾಗು ತ್ತದೆ. ಈ ಕಣಗಳನ್ನು ನಮ್ಮ ದೇಹದಲ್ಲಿರುವ ವಿನಾವಣಾ ವ್ಯೂಹವು (ಇಮ್ಯೂನ್ ಸಿಸ್ಟಮ್) ಕಬಳಿಸುತ್ತದೆ. ನೋಡ ನೋಡುತ್ತಿರುವಂತೆ ಹಚ್ಚೆ ಮಂಗಮಾಯ ಒಂದು ತೊಟ್ಟು ರಕ್ತವನ್ನು ಹರಿಸದೆ!....

### ದ್ಯುತಿ ಸಂವೇದಕ

ಬಫೆಲೋ ವಿಶ್ವವಿದ್ಯಾಲಯದ ಜೈವಿಕ ವಿಕಿರಣ ವಿಭಾಗದ ಜಯಂತ್ ಬಾವಳೇಕರ್ ಅವರು ನೂತನ ಲೇಸರ್ ಚಿಕಿತ್ಸಾ ವಿಧಾನ ವೊಂದನ್ನು ರೂಪಿಸಿದ್ದಾರೆ. ಇದನ್ನು ಕ್ಯಾನ್ಸರ್ ಗಂತಿ ಚಿಕಿತ್ಸೆಯಲ್ಲಿ ಬಳಸಬಹುದೆಂದು ಹೇಳ ಲಾಗುತ್ತಿದೆ. ಅದರಲ್ಲೂ ಸಾಂಪ್ರದಾಯಿಕ ಚೂರಿಗೆ ನಿಲುಕದ ಗಂತಿಗಳನ್ನು ಈ ವಿಧಾನ ದಿಂದ ಸುಲಭವಾಗಿ ನಿವಾರಿಸಬಹುದಂತೆ. ಇದರ ಹೆಸರು ದ್ಯುತಿಚಾಲಕ ಚಿಕಿತ್ಸೆ (ಫೋಟೋ ಡೈನಮಿಕ್ ಥೆರಪಿ).

ರೋಗಿಯ ರಕ್ತನಾಳದೊಳಗೆ ಒಂದು ವಿಶೇಷ ವಾದ ಬಣ್ಣವನ್ನು ಚುಚ್ಚುತ್ತಾರೆ. ಈ ಬಣ್ಣವು ಕ್ಯಾನ್ಸರ್ ಕೋಶಗಳಲ್ಲಿ ಸಂಗ್ರಹವಾಗು ತ್ತದೆ. ನಂತರ ರಕ್ತಾತೀತ ಕಿರಣಗಳಿಗೆ ಸಮೀಪ ವಾಗಿರುವ ಸ್ಪಂದಿತ ಲೇಸರ್ ಕಿರಣಗಳನ್ನು (ನಿಯರ್ ಇನ್‌ಫ್ರಾರೆಡ್ ಪಲ್ಸಡ್ ಲೇಸರ್) ಗಂತಿಗೆ ಗುರಿಯಿಟ್ಟು ಹಾಯಿಸುತ್ತಾರೆ. ಈ ಲೇಸರ್ ಬಣ್ಣವನ್ನು ಪ್ರಚೋದಿಸುತ್ತದೆ. ಬೆಳಕಿಗೆ ಈ ಬಣ್ಣ ಸಂವೇದಿಸುತ್ತದೆ. ಈ ಸಂವೇದನೆ ಯಿಂದ ಗಂತಿಯ ಕೋಶಗಳಲ್ಲಿರುವ ಆಮ್ಲ ಜನಕವು ಚುರುಕು ಗೊಳ್ಳುತ್ತದೆ (ಆಕ್ಟಿವೇಟೆಡ್) ಚುರುಕುಗೊಂಡ ಆಮ್ಲ ಜನಕವು ಗಂತಿಯನ್ನು ನಾಶಪಡಿಸುತ್ತದೆ.



ಲೇಸರ್ ಮೆಡಿಕಲ್ ಪೆನ್ ಕೇವಲ ೨ ವೋಲ್ಟಿನ ೩ ಬ್ಯಾಟರಿಗಳಿಂದ ಕೆಲಸ ಮಾಡುತ್ತದೆ. ಈ ಪೆನ್ನಿನಿಂದ ಕುಯ್ಯಬಹುದು, ರಕ್ತಸ್ರಾವವನ್ನು ನಿಲ್ಲಿಸ ಲೂಬಹುದು.

ಬಾವಳೇಕರ್ ಅವರು ಈ ರಕ್ತರಹಿತ ಶಸ್ತ್ರ ಚಿಕಿತ್ಸೆಯನ್ನು ಪ್ರಾಣಿಗಳ ಮೇಲೆ ಮಾಡಿ ಯಶಸ್ವಿಯಾಗಿ ದ್ದಾರೆ. ಈ ರಕ್ತ ರಹಿತ ಶಸ್ತ್ರ ಚಿಕಿತ್ಸೆಯ ನಂತರ ಪ್ರಾಣಿಗಳಲ್ಲಿ ಯಾವುದೇ ದುಷ್ಪರಿಣಾಮಗಳು ಕಂಡು ಬಂದಿಲ್ಲವೆನ್ನ ಲಾಗಿದೆ.. ಈ ಪ್ರಯೋಗವನ್ನು ಮನುಷ್ಯರ ಮೇಲೂ ಮಾಡುವ ಕಾಲ ಸನಿಹದಲ್ಲಿಯೇ ಬರಲಿದೆ ಎಂದು ಹೇಳಲಾಗಿದೆ.

### ಸ್ತನಾರ್ಬುದ (ಸ್ತನಕ್ಯಾನ್ಸರ್)

ರಕ್ತರಹಿತ ಶಸ್ತ್ರ ಚಿಕಿತ್ಸೆಯ ತಂತ್ರಜ್ಞಾನವು ಸ್ತನಾರ್ಬುದಗಳನ್ನು ಪತ್ತೆ ಹಚ್ಚುವಲ್ಲಿ ಗಣನೀಯ ವಾಗಿ ಇನ್ನು ಮುಂದಿನ ದಿನಗಳಲ್ಲಿ ನೆರವಾಗಲಿದೆ.

ಸ್ತನದ ಕ್ಯಾನ್ಸರ್ ಒಂದು ಮಾರಕವಾದ ರೋಗ. ದೈಹಿಕವಾಗಿ, ಮಾನಸಿಕವಾಗಿ ಹಾಗೂ ಸಾಮಾಜಿಕವಾಗಿ ಹೆಣ್ಣಿಗೆ ಆಘಾತವನ್ನುಂಟು ಮಾಡುವ ಈ ಕ್ಯಾನ್ಸರಿನ ಹೆಸರನ್ನು ಕೇಳಿದರೆ ಸಾಕು ಹೆಂಗಳೆಯರು ಬೆಚ್ಚಿ ಬೀಳುತ್ತಾರೆ.

ಸ್ತನ ಕ್ಯಾನ್ಸರನ್ನು ಆರಂಭದಲ್ಲಿಯೇ ಪತ್ತೆ ಹಚ್ಚಿದರೆ ಅದರಿಂದ ಬಿಡುಗಡೆ ಹೊಂದುವುದು ಸುಲಭ. ಅದ ಕ್ಕಾಗಿ ಪ್ರತಿಯೋರ್ವ ಸ್ತ್ರೀ, ತಿಂಗಳಿಗೊಮ್ಮೆ ಸ್ವಯಂ ಸ್ತನ ತಪಾಸಣೆಯನ್ನು ನಡೆಸಬೇಕು. ಹೀಗೆ ಪರೀಕ್ಷಿಸುವಾಗ ಯಾವುದಾ ದರೂ ಅನುಮಾನಾಸ್ಪದ ಗಂಟು ಕಂಡು ಬಂದರೆ, ಕೂಡಲೇ ತಜ್ಞ ವೈದ್ಯರನ್ನು ಭೇಟಿಯಾಗಬೇಕು. ಆಗ ವೈದ್ಯರು ಅನುಮಾನಾಸ್ಪದ ಗಂಟು ಕ್ಯಾನ್ಸರ್ ಆಗಿರಬಹುದೇ ? ಎಂಬುದನ್ನು ಪತ್ತೆ ಹಚ್ಚಲು ಯತ್ನಿಸುತ್ತಾರೆ. ವೈದ್ಯರಿಗೆ ಕೆಲವು ಸಲ ಸಂಶಯ ಬರ ಬಹುದು. ಆಗ ಅವರು ಸ್ತನಚಿತ್ರಿಕೆ (ಮ್ಯಾಮೋಗ್ರಫಿ) ಎಂಬ ತಪಾಸಣೆಗೆ ಒಳಪಡಿಸು ತ್ತಾರೆ. ಕೆಲವು ಸಲ ಸ್ತನಚಿತ್ರಿಕೆಯೂ ನಿಖರವಾದ ಮಾಹಿತಿ ಯನ್ನು ನೀಡ ದಿರಬಹುದು. ಆಗ ಅನುಮಾನಾಸ್ಪದ ಗಂಟಿನ ಬಯಾಪ್ಸಿಯನ್ನು ನಡೆಸು ತ್ತಾರೆ. ಅದನ್ನು ಸೂಕ್ಷ್ಮ ದರ್ಶ ಕದ ಅಡಿಯಲ್ಲಿ ಪರೀಕ್ಷಿಸುತ್ತಾರೆ. ಆ ಗಂಟಿನ ನಿಜ ವಾದ ಸ್ವರೂಪ ತಿಳಿಯುತ್ತದೆ.

ಇಂದು ಅಮೇರಿಕದಲ್ಲಿ ಪ್ರತಿವರ್ಷ ಸುಮಾರು ೭೦೦,೦೦೦ ಮಹಿಳೆಯರು ಸ್ತನಾರ್ಬುದ ಬಂದಿರುವುದನ್ನು ಖಚಿತ ಪಡಿಸಿ ಕೊಳ್ಳಲು, ಬಯಾಪ್ಸಿಗೆ ಒಳಗಾಗು ತ್ತಿದ್ದಾರೆ. ಬಯಾಪ್ಸಿ ಯಲ್ಲಿ ಸಂಶಯಿತ ಗಂಟಿನಿಂದ ೨-೪ ಘನ ಇಂಚಿ ನಷ್ಟು ಊತಕವನ್ನು ಹೊರ ತೆಗೆಯುತ್ತಾರೆ. ಈ ರೀತಿ ತೆಗೆದಾಗ ಸ್ತನದ ಒಳಗೂ ಹಾಗೂ ಸ್ತನದ ಹೊರಗೂ ಗಾಯದ ಕಲೆಯು ಹಾಗೆಯೇ ಉಳಿಯುತ್ತದೆ. ಈ ಕಲೆಯು ಮುಂದಿನ ಸ್ತನಚಿತ್ರಿ ಕೆಯ ಅಧ್ಯಯನದಲ್ಲಿ ತೊಡಕನ್ನು ಉಂಟು ಮಾಡ ಬಹುದು.

ಈ ೭೦೦,೦೦೦ ಮಹಿಳೆಯರ ಬಯಾಪ್ಸಿಗಳಲ್ಲಿ ಶೇಕಡಾ ೮೦ಕ್ಕೂ ಹೆಚ್ಚು ಬಯಾಪ್ಸಿಗಳು ಕ್ಯಾನ್ಸರ್ ಇಲ್ಲ ಎಂಬ ಅಂಶವನ್ನು ಖಚಿತಪಡಿಸುತ್ತವೆ.

( ೫೪ನೇ ಪುಟ ನೋಡಿ )

ಮುದಿತನ ಮತ್ತು ಸಾವಿನ ಕೋಟೆಯನ್ನು ಭೇದಿಸಿ, ದೀರ್ಘಾಯುಷಿಗಳಾಗುವುದು, ಸಾಧ್ಯವಾದರೆ ಚಿರಂಜೀವಿಗಳಾಗುವ ದಿಶೆಯಲ್ಲಿ ಆಧುನಿಕ ವಿಜ್ಞಾನ ನಡೆಸಿರುವ ನಿರಂತರ ಲಗ್ಗೆಗಳ ಮಾಹಿತಿಯನ್ನು ನೀಡುವ ಪ್ರಯತ್ನವನ್ನು ನಡೆಸಲಾಗಿದೆ. ಇದೋ ಪ್ರಸ್ತುತ ಲೇಖನದ ಮೊದಲ ಕಂತು.

**ಭಾಗ - ೧**

## ಮೃತ್ಯುಂಜಯನ ಅನ್ವೇಷಣೆಯಲ್ಲಿ......



# ಮುಪ್ಪನ್ನು ಮುಂದೂಡಬಹುದು

ಡಾ । ನಾ. ಸೋಮೇಶ್ವರ

*'ಎಲ್ಲಾ ಹಡೇ ಹೆಂಗಸು ಒಂದು ಕೂಸನ್ನ ಹಡೀತಾರ.... ಆ ಕೂಸಿನ ಸಾವನ್ನ ಹಡೀತಾರ! .. ...ಒಂದು ವೇಳೆ ತಾಯಿ ಕೂಸನ್ನ ಮರತ್ರೂವ.. ..ಸಾವು ಕೂಸನ್ನ ಜೋಪಾನ ಮಾಡುತ್ತ.. ....*

-ಇದು ನಾಟಕವೊಂದರ ಸಾಲು.

ಸಾವು ಒಂದು ಸಾರ್ವಕಾಲಿಕ ಸತ್ಯ. ಆದರೂ ಅದನ್ನು ನಂಬಲು ನಾವು ಸಿದ್ಧರಿಲ್ಲ. ಸಾವೆನ್ನುವುದು ಇಲ್ಲವೇ ಇಲ್ಲವೇನೋ ಎನ್ನುವ ಭ್ರಮೆ ಯಲ್ಲಿ ನಾವಾಡುವ ಆಟಗಳಿಗೆ ಕೊನೆ ಮೊದಲಿಲ್ಲ.

### ಆದರೂ ಸಾವು ಸತ್ಯ

ಮನುಷ್ಯನಿಗೆ ಈ ಸಾವನ್ನು ಗೆಲ್ಲಬೇಕೆನ್ನುವ ಛಲ! ಅದಮ್ಯ ಆಕಾಂಕ್ಷೆ. ಇದಿನ್ನೂ ಸಾಧ್ಯವಾಗಿಲ್ಲ. ಹಾಗೆಂದು ಅವನು ಸುಮ್ಮನೂ ಇಲ್ಲ. ತನ್ನ ಕಲ್ಪನೆಗೆ ರೆಕ್ಕೆ ಹಚ್ಚಿದ, ನಂಬಿಕೆಯ ಬೇರನ್ನು ಆಳವಾಗಿಳಿಸಿದ. ಅಮೃತ ಪಾನದಿಂದ ಅಮರರನ್ನು ಸೃಜಿಸಿದ. ಕಥೆಗಳನ್ನು ಹೊಸೆದು ಆಂಜನೇಯ, ಮಾರ್ಕಂಡೇಯ, ಅಶ್ವತ್ಥಾಮ, ಗರುಡ ಮುಂತಾದವರನ್ನು ಚಿರಂಜೀವಿಗಳನ್ನಾಗಿಸಿದ. ಸತ್ತವರನ್ನು ಬದುಕಿಸುವ ಸಂಜೀವಿನಿ ವಿದ್ಯೆ ಶುಕ್ರಾಚಾರ್ಯರಿಗೆ ತಿಳಿದಿದೆ ಎಂದ. ಯೌವನ ಮುದಿತನಗಳನ್ನು ಅದಲು ಬದಲು ಮಾಡಿಕೊಳ್ಳ ಬಹುದೆಂದು ತನ್ನ ಸುಪ್ತ ಚಿತ್ತದ ಅಂತ್ಯವಿಲ್ಲದ ಹಂಬಲವನ್ನು ಯಯಾತಿ, ಪುರೂರವರ ಮೂಲಕ ಹೊರಗೆಡವಿದ. ಸಾವಿನ ರಹಸ್ಯವನ್ನು ಯಮನಿಂದ ನಚಿಕೇತ ತಿಳಿದುಕೊಂಡನೆಂದು ಸಾರಿದ.

ಪುರಾಣಗಳನ್ನು ಬಿಟ್ಟು ವಾಸ್ತವಕ್ಕೆ ಬರೋಣ. ಆಯುರ್ವೇದ ಇಂದು ವಿಶ್ವಮಾನ್ಯ. ಇದರಲ್ಲಿ ಎಂಟು ಅಂಗಗಳಿವೆ. ಅವುಗಳಲ್ಲಿ ಒಂದು ರಸಾಯನ ತಂತ್ರ. ಇದು ರೋಗಗಳನ್ನು ತಡೆದು, ಸಹಜ ಮುದಿತನವನ್ನು ನಿಧಾನಿಸಿ ಆರೋಗ್ಯವನ್ನು ಹೇಗೆ ಪಡೆಯಬಹುದೆಂದು ತಿಳಿಸುವ ತಂತ್ರ.

### ಜೀವನ ವ್ಯಾಪ್ತಿ

ವಿಜ್ಞಾನ ವಿದ್ಯಾರ್ಥಿಗಳಾದ ನಾವು ವೈಜ್ಞಾನಿಕ ವಾಗಿ ಆಲೋಚಿಸೋಣ. ನಾವು ಇಂದು ಚಿರಂಜೀವಿಗಳಾಗಲು ಸಾಧ್ಯವಿದೆಯೇ ? ಸ್ಪಷ್ಟ ಉತ್ತರ ಇಲ್ಲ ! ಹೋಗಲಿ ವಯಸ್ಸಾಗುವುದನ್ನು (Ageing) ತಡೆಗಟ್ಟಲು/ನಿಧಾನಗೊಳಿಸಲು ಸಾಧ್ಯವಾಗಿದೆಯೇ ? ಉಹೂಂ, ಸಾಧ್ಯವಾಗಿಲ್ಲ. ಆದರೂ ಸಹ ನಮ್ಮ

ಮುತ್ತಾತಂದಿರಿಗಿಂತಲೂ ನಾವು ಹೆಚ್ಚು ಕಾಲ ಬದುಕುತ್ತಿದ್ದೇವೆ ಎಂಬುದು ಸತ್ಯವಲ್ಲವೆ ? ಹೌದು, ಸತ್ಯ. ಹಾಗಿದ್ದಲ್ಲಿ ಅದು ಹೇಗೆ ಸಾಧ್ಯವಾಯಿತು ?

ಈ ಪ್ರಶ್ನೆಗೆ ಉತ್ತರವನ್ನು ಸ್ವಲ್ಪ ವಿವರವಾಗಿ ನೀಡಬೇಕು. (ಹೆಚ್ಚುತ್ತಿರುವ ಜೀವಿತಾವಧಿ - ಗ್ರಾಫ್ - ಚಿತ್ರವನ್ನು ಗಮನಿಸಿ) ಅಧಿಕೃತ ಇತಿಹಾಸದ ಆದಿಯಿಂದ ಇದುವರೆಗಿನ ಮನುಷ್ಯ ಎಷ್ಟು ಕಾಲ ಬದುಕುತ್ತಿದ್ದ ಎಂಬುದನ್ನು ನೋಡಿ. ಅದು ಕ್ರಮವಾಗಿ ಹೆಚ್ಚುತ್ತಲಿದೆ. ಇವನ ಈ ನಿರೀಕ್ಷಿತ ಜೀವನಾವಧಿ (Life expectation) ಹೆಚ್ಚಲು ಕಾರಣ, ಅಕಾಲ ಸಾವನ್ನುಂಟು ಮಾಡುತ್ತಿದ್ದ ಅನೇಕ ರೋಗಗಳನ್ನು ನಿರ್ಮೂಲನೆ/ನಿಗ್ರಹ ಮಾಡಿರುವುದು. ಹಾಗಾಗಿ ನಾವು ನಮ್ಮ ಮುತ್ತಾತಂದಿರಿಗಿಂತಲೂ ಹೆಚ್ಚು ಬದುಕುತ್ತಿದ್ದೇವೆ. ಆದರೆ ಮನುಷ್ಯ ಜೀವನದ ವ್ಯಾಪ್ತಿ (Life span) ಯಲ್ಲಿ ಅಂತಹ ಬದಲಾವಣೆ ಗಳಾಗಿಲ್ಲ.

ಆಧುನಿಕ ವೈದ್ಯವಿಜ್ಞಾನ ನಮಗೊಂದು ವರವಾಗಿದೆ. ಹಿಂದೆ ಪ್ರಸವದಲ್ಲಿ ತಾಯಿ ಮತ್ತು ಮಗು ನಂಜಿನಿಂದ ಸಾಯುವುದು ಸಾಮಾನ್ಯವಾಗಿತ್ತು. ಇಂದು ಅದು ಅಪರೂಪ. ಸಿಡುಬು (Small pox) ಎನ್ನುವ ಮಹಾಮಾರಿಯನ್ನು ಭೂಮಿಯಿಂದ ಗಡಿಪಾರು ಮಾಡಿದ್ದೇವೆ. ಗಂಟಲುಮಾರಿ, ನಾಯಿಕೆಮ್ಮು, ಧನುರ್ವಾಯು, ಕ್ಷಯ, ಪೋಲಿಯೋ, ಗದ್ದಕಟ್ಟುಗಳೆಂಬ ಷಣ್ಮಾರಿಗಳ ಮೇಲೆ ಮಹಾ ಸಮರವನ್ನು ಆರಂಭಿಸಿದ್ದೇವೆ. ಒಮ್ಮೆಲೇ ಸಾವಿರಾರು ಜನರನ್ನು ನುಂಗುತ್ತಿದ್ದ ಪ್ಲೇಗ್‌ನಂತಹ ಭೀಕರ ಕಾಯಿಲೆಗಳನ್ನು ನಿಗ್ರಹಿಸಿದ್ದೇವೆ ಹಾಗಾಗಿ ಅಭಿವೃದ್ಧಿ ಹೊಂದಿದ, ಹೊಂದುತ್ತಿರುವ ರಾಷ್ಟ್ರಗಳಲ್ಲಿ ಸಾಯುವವರ ಸಂಖ್ಯೆ ಕಡಿಮೆಯಾಗಿದೆ. ಆದರೆ ಮನುಷ್ಯ ಎನ್ನುವ ಪ್ರಾಣಿಗೆ ಪ್ರಕೃತಿ ನೀಡಿರುವ ಅವಧಿಯನ್ನು ಹೆಚ್ಚಿಸುವಂತಹ ಮಾರ್ಗಗಳನ್ನು ಹುಡುಕುವಲ್ಲಿ ಇದುವರೆಗೂ ಅವನಿಗೆ ಅಂತಹ ಯಶಸ್ಸೇನೂ ದೊರೆತಿಲ್ಲ.

## ಜರಾ ವಿಜ್ಞಾನ

ವಯಸ್ಸಾಗುವುದಕ್ಕೆ ಸಂಬಂಧಪಟ್ಟ ಅಧ್ಯಯನವನ್ನು ನಡೆಸುವ ಶಾಸ್ತ್ರಕ್ಕೆ ಜರಾವಿಜ್ಞಾನ (Gerontology) ಎಂದು ಹೆಸರು. ವಯಸ್ಸಾಗುವುದಕ್ಕೆ ಕಾರಣಗಳನ್ನು ವಿವರಿಸುವ ಸಿದ್ಧಾಂತಗಳು ಅನೇಕ ಇವೆ.

ಅಂತಹ ಸಿದ್ಧಾಂತಗಳಲ್ಲಿ ಇದೊಂದು, ಯಾವುದೇ ಜೀವಿಯಾಗಲಿ ಪ್ರಜನನ ಶಕ್ತಿ ಬಲಿಯುವವರೆಗೆ (sexual maturity) ಬೆಳೆಯುತ್ತವೆ. ಪೂರ್ಣ ಬಲಿತನಂತರ ಬೆಳವಣಿಗೆ ನಿಂತು ಮುದಿತನಕ್ಕೆ ಕಾರಣವಾಗುವ ಕ್ರಿಯೆಗಳು ಆರಂಭವಾಗುತ್ತವೆ. ಇವು ತಮ್ಮ ಗರಿಷ್ಠ ಮಿತಿಯನ್ನು ಮುಟ್ಟಿದಾಗ ಸಾವು ಬರುತ್ತದೆ.

ಈ ವಾದವನ್ನು ಕೆಲವು ಜರಾವಿಜ್ಞಾನಿಗಳು ಅಲ್ಲಗಳೆದಿರುವುದು ಬೇರೆಯ ವಿಷಯ. ಗಾಂಪರ್ಟ್ಸ್



ಸತ್ತವರನ್ನು ಬದುಕಿಸುವ ಸಂಜೀವಿನಿ ವಿದ್ಯೆ ತಿಳಿದನೆನ್ನಲಾದ ಶುಕ್ರಾಚಾರ್ಯರ ವಿದ್ಯೆ ಎಲ್ಲಿ ಹೂತು ಹೋಯಿತು?

ಎನ್ನುವ ಬ್ರಿಟಿಷ್ ವಿಜ್ಞಾನಿ ಮೊದಲಬಾರಿಗೆ ೧೮೨೫ರಲ್ಲಿ ಮನುಷ್ಯನ ಬದುಕಿಗೆ ಸಂಬಂಧ ಪಟ್ಟಂತೆ ಅನೇಕ ಅಧ್ಯಯನಗಳನ್ನು ನಡೆಸಿದ. ಮನುಷ್ಯ ೩೦ ವರ್ಷಗಳನ್ನು ಮುಟ್ಟಿದ ಮೇಲೆ, ಅವನ ಸಾವಿನ ಸಾಧ್ಯತೆ ಪ್ರತಿವರ್ಷ ೭ ಪಟ್ಟು ಹೆಚ್ಚುತ್ತಾ ಹೋಗುತ್ತದೆ. ಕೆಲವು ಅಪವಾದಗಳನ್ನು ಬಿಟ್ಟು ಎಲ್ಲ ಜೈವಿಕ ಕ್ರಿಯೆಗಳು ವರ್ಷದಿಂದ ವರ್ಷಕ್ಕೆ ಮಂದವಾಗುತ್ತಾ ನಡೆಯುತ್ತವೆ. ಸ್ಟ್ರೇಹ್‌ಲರ್ ಮತ್ತು ಮಿಲ್ಡ್‌ವಾನ್ (೧೯೬೦) ಎನ್ನುವವರು, ಈ ಕ್ರಿಯೆ ಪ್ರತಿವರ್ಷ ೦.೮-೦.೯% ರಷ್ಟು ಕಡಿಮೆಯಾಗುತ್ತದೆ ಎಂಬುದನ್ನು ತೋರಿಸಿದರು.

ಇಂದು ಮಾನವನು ಸೋಂಕು ರೋಗಗಳನ್ನು ಮೆಟ್ಟಿರುವುದು ನಿಜವಾದರೂ ಮತ್ತೊಂದು ಕಡೆ ಹೃದಯ ಮತ್ತು ರಕ್ತನಾಳದ ರೋಗಗಳು ಹೆಚ್ಚುತ್ತಲಿವೆ. ಅರ್ಬುದವು ಅಷ್ಟಪಾದಿಯಂತೆ ಹರಡುತ್ತಿದೆ. AIDSನಂತಹ ನೂತನ ಮಾರಿಯ ಆಗಮನವಾಗಿದೆ.

ಈಗ ಸ್ವಲ್ಪ ಹಾರಗುದರಿಯ ಬೆನ್ನನ್ನೇರಿ ಹಾರೋಣ. ಹೃದಯ ಮತ್ತು ರಕ್ತನಾಳಗಳ ರೋಗಗಳನ್ನು ಸಂಪೂರ್ಣ ಗೆದ್ದೆವೆಂದಿಟ್ಟುಕೊಳ್ಳೋಣ. ಆಗ ಹುಟ್ಟುವ ಪ್ರತಿಯೊಂದು ಮಗುವಿಗೂ ಎಷ್ಟು ಆಯಸ್ಸು ಸೇರ್ಪಡೆಯಾಗಬಹುದು ? ಸುಮಾರು ೧೨ ವರ್ಷವೆಂದು ವಿಜ್ಞಾನಿಗಳ ಲೆಕ್ಕಾಚಾರ (ಕೊನೆ ಪುಟದಲ್ಲಿನ ಬಾಕ್ಸ್ ನೋಡಿ). ಮನುಷ್ಯರಿಗೆ ಬರುವ ಎಲ್ಲ ರೋಗಗಳನ್ನೂ ಮತ್ತು ಅಪಘಾತಗಳನ್ನು ಸಂಪೂರ್ಣವಾಗಿ ತಡೆಗಟ್ಟಿದ್ದೆವೆಂದು ಭಾವಿಸೋಣ. ಆಗ ಮನುಷ್ಯನ ನಿರೀಕ್ಷಿತ ಜೀವನಾವಧಿ ಮತ್ತು ಜೀವನ ವ್ಯಾಪ್ತಿಯ ಮೇಲೆ ಯಾವ ಪರಿಣಾಮವಾಗಬಹುದು ? ನೂರು ವರ್ಷಗಳಷ್ಟು ಬದುಕಬಹುದು. ರೋಗ ಮತ್ತು ಅಪಘಾತಗಳಿಂದ ಮುಕ್ತನಾದ ಮನುಷ್ಯ ನಿಶ್ಚಿಂತೆಯಿಂದ ಬಾಳಬಹುದು. ಎಲ್ಲಿಯವರೆಗೆ ? ತನ್ನ ನೂರನೆಯ ಹುಟ್ಟುಹಬ್ಬದವರೆಗೆ ಮಾತ್ರ. ನಂತರ ವಾರ್ಧಕ್ಯದ ಸಹಜಕ್ರಿಯೆಗಳು ತಲೆದೋರಿ ''ಕೂಸಿನೊಡನೆ ಬಂದು ಕೂಸನ್ನು ನೂರರವರೆಗೆ ಜೋಪಾನವಾಗಿರಿಸಿದ್ದ ಸಾವು ಅಷ್ಟೇ ಜೋಪಾನವಾಗಿ ಕರೆದೊಯ್ಯುತ್ತದೆ''.

## ಗಡಿಯಾರ

ಹಾರಗುದರಿಯ ಬೆನ್ನಿನಿಂದಿಳಿದು ವಾಸ್ತವಕ್ಕೆ ಬರೋಣ. ರೋಗ ನಿಯಂತ್ರಣದ ಮೂಲಕ ವಯಸ್ಸಾಗುವುದನ್ನು ನಿಧಾನಗೊಳಿಸಿ ಮನುಷ್ಯನ ಜೀವ ವ್ಯಾಪ್ತಿಯನ್ನು ಹಿಗ್ಗಿಸಲು ಸಾಧ್ಯವಿಲ್ಲ ಎಂದು ಜರಾವಿಜ್ಞಾನಿಗಳು ಮನಗಂಡು ಇತರ ಮಾರ್ಗಗಳ ಅನ್ವೇಷಣೆಗಿಳಿದರು. ವೃದ್ಧಾಪ್ಯವನ್ನು ಪ್ರಚೋದಿಸುವ ಶಕ್ತಿಗಳನ್ನು ಮಂದಗೊಳಿಸುವ ಹೊಸದಾರಿ ಅವರಿಗೆ ಮೊದಲು ಕಂಡಿತು.

ಪ್ರತಿಯೊಂದು ಜೀವಿಯಲ್ಲೂ ಒಂದು ಗಡಿಯಾರವಿದೆ. ಈ ಗಡಿಯಾರ ನಡೆಯುವ ಅವಧಿ ಪೂರ್ವನಿಶ್ಚಿತ. ಹುಟ್ಟಿನೊಡನೆ ಆರಂಭವಾಗುವ ಇದರ ಟಿಕ್ ಟಿಕ್ ಶಬ್ದ ಸಾವಿನೊಡನೆ ಸ್ತಬ್ಧವಾಗು



ರಾಮಾಯಣದಲ್ಲಿ ರಾಮನ ಸಹೋದರ ಲಕ್ಷ್ಮಣನನ್ನು ಬದುಕಿಸಲು ಸಂಜೀವಿನಿ ಬೆಟ್ಟವನ್ನೇ ಹೊತ್ತು ತರುತ್ತಿರುವನೆನ್ನಲಾದ ಆಂಜನೇಯ. ಈಗೆಲ್ಲಿದೆ ಆ ಬೆಟ್ಟ?





ಯಮಪಾಶದಿಂದ ಭಕ್ತ ಮಾರ್ಕಂಡೇಯನನ್ನು ಬದುಕಿಸಿದ ಆ ಪರಶಿವನ ಶಕ್ತಿಯಗುಟ್ಟೇನು?

ತ್ತದೆ. ಈ ಗಡಿಯಾರವನ್ನು ಅಕಾಲದಲ್ಲಿ ನಿಲ್ಲಿಸಲು ಬರುವ ರೋಗಗಳನ್ನು ಮತ್ತು ಅಪಘಾತಗಳನ್ನು ನಿವಾರಿಸುವುದರಲ್ಲಿ ಮಾತ್ರ ನಾವು ಮಗ್ನರಾಗಿದ್ದೇವೆ. ಗಡಿಯಾರದ ವೇಗವನ್ನು ನಿಧಾನಗೊಳಿಸಲು ಸಾಧ್ಯವಿದೆಯೇ ಎಂದು ನಾವು ಆಲೋಚಿಸುತ್ತಿಲ್ಲ. ಈ ಗಡಿಯಾರವನ್ನು ನಡೆಸುವ ಶಕ್ತಿಯನ್ನು ಅರ್ಥ ಮಾಡಿಕೊಂಡು, ಅದನ್ನು ನಿಧಾನಗೊಳಿಸುವ ಅಥವಾ ಸಾಧ್ಯವಾದರೆ ಮುಳ್ಳನ್ನು ಹಿಂದಕ್ಕೆ ತಿರುಗಿಸುವ ವಿಧಾನವನ್ನು ಕಂಡು ಹಿಡಿಯುವವರೆಗೆ ನಾವು ಕನಸು ಮಾತ್ರ ಕಾಣಬಹುದು. ಕೇವಲ ನೂರು ವರ್ಷ ಬದುಕಬಹುದಾದ ಕನಸನ್ನು ಮಾತ್ರ ನಾವೆಲ್ಲರೂ ಕಾಣಬಹುದು.

### ಜೀವಕೋಶ

ಲೇಖನದ ಆರಂಭದಲ್ಲಿ ಮಂಡಿಸಿದ ಸಿದ್ಧಾಂತವನ್ನು ನೆನಪಿಸಿಕೊಳ್ಳಿ, ಪ್ರತಿಯೊಂದು ಪ್ರಾಣಿ ಒಂದು ನಿರ್ದಿಷ್ಟ ಹಂತದವರೆಗೆ ಬೆಳೆಯುತ್ತದೆ. ನಂತರ ಬೆಳವಣಿಗೆ ನಿಂತು ಮುದಿತನ ಆರಂಭವಾಗುತ್ತದೆ. ಈ ಸತ್ಯವನ್ನು ಅನುಭವದಿಂದ ನಾವು ಮನಗಂಡಿದ್ದೇವೆ.

ನಮ್ಮ ದೇಹ ಕೋಟ್ಯಾಂತರ ಜೀವಕೋಶಗಳಿಂದ ರೂಪುಗೊಂಡಿದೆ. ಈ ಜೀವ ಕೋಶಗಳ ಸಾವು ಪೂರ್ವ ನಿಶ್ಚಿತವೆ? ಇದೆಂತಹ ಪ್ರಶ್ನೆ? ಒಂದು ಜೀವಿ ವಯಸ್ಸಾಗುತ್ತಿರುವಂತೆ ಆದರಲ್ಲಿರುವ ಜೀವ ಕೋಶಗಳಿಗೂ ವಯಸ್ಸಾಗುತ್ತಿರಬೇಕಲ್ಲವೆ ? ಆಗಲೇಬೇಕೆಂದೇನಿಲ್ಲ. ಏಕೆಂದರೆ ಜೀವಿಯ ಎಲ್ಲ ಅಂಗಗಳಲ್ಲಿ, ಅಂಗಾಂಶ ಗಳಲ್ಲಿ, ಜೀವ ಕೋಶಗಳಲ್ಲಿ ವಯಸ್ಸಾಗುವಿಕೆ ಒಂದೇ ಮಟ್ಟದಲ್ಲಿ ನಡೆಯುವುದಿಲ್ಲ ಎಂಬುದು ಪ್ರಯೋಗ ಗಳಿಂದ ಖಚಿತವಾಗಿದೆ. ಅಂದರೆ ವಯಸ್ಸಾಗುವಿಕೆ ಕೆಲವು ಜೀವಕೋಶಗಳಲ್ಲಿ ವೇಗವಾಗಿ ನಡೆಯುತ್ತದೆ ಎಂದಾಯಿತು. ಇವುಗಳಲ್ಲಿ ಅಧ್ಯಯನ ಮಾಡಿ ವಯಸ್ಸಾಗುವಿಕೆಯ ರಹಸ್ಯವನ್ನು ತಿಳಿದು, ಅದನ್ನು ಮಂದಗೊಳಿಸಲು ಸಾಧ್ಯವೆ ?

### ಎರಡು ವಿಧ

ನಮ್ಮ ದೇಹದ ಜೀವಕೋಶಗಳನ್ನು ಎರಡು ವಿಧವಾಗಿ ವಿಂಗಡಿಸಬಹುದು. (೧) ದೇಹರಚನೆಗೆ, ಜೈವಿಕ ಕ್ರಿಯಗಳಿಗೆ ಆಧಾರವಾಗಿರುವ ದೈಹಿಕ ಜೀವಕೋಶಗಳು (Somatic cells) ಹಾಗೂ (೨) ವಂಶವನ್ನು ಮುಂದುವರೆಸಲು ಬೇಕಾಗುವ ಪ್ರಜನನ ಜೀವಕೋಶಗಳು- ಅಂದರೆ ಅಂಡಾಣು (Ovum) ಮತ್ತು ವೀರ್ಯಾಣು (Sperm)

ದೈಹಿಕ ಜೀವಕೋಶಗಳ ಆಯಸ್ಸು ಪೂರ್ವ ನಿರ್ಧಾರಿತ. ಇವುಗಳಲ್ಲಿ ವಯಸ್ಸಾಗುವಿಕೆ ಒಮ್ಮುಖವಾಗಿ ನಡೆಯುವ ಕಾರ್ಯ. ಇದರ ಕಾರ್ಯ ವೈಖರಿಯಿಂದ ಜೀವಿಯ ವಯಸ್ಸಾಗುವಿಕೆಯನ್ನು ತಿಳಿಯಬಹುದು. ಹೀಗೆಂದು ಒಂದು ಸಿದ್ಧಾಂತ. ಇದನ್ನು ಪರೀಕ್ಷಿಸಲು ವಿಜ್ಞಾನಿಗಳು ಎರಡು ಪ್ರಯೋಗಗಳನ್ನು ರೂಪಿಸಿದರು.

ಮೊದಲನೆಯ ಪ್ರಯೋಗದಲ್ಲಿ ಕಶೇರುಕ ಜೀವ ಕೋಶಗಳನ್ನು (Vertebrate cells) ಪ್ರಯೋಗ



ಹಣೆಬರಹವೆನ್ನುವುದರಲ್ಲಿ ಸಾವಿನ ನಿಖರ ದಿನ ನಿಜವಾಗಿಯೂ ಬರೆದಿರುತ್ತದೆಯೇ?

ಶಾಲೆಯಲ್ಲಿ ಕೃತಕವಾಗಿ ಕೃಷಿಗೊಳಿಸಿ (Cell c
ture) ಬೆಳೆಸುವುದು. ಎರಡನೆಯದು ಜೀವಕೋ
ಗಳಿಗೆ ಒಂದು ಗುರುತು ಹಚ್ಚಿ ಪ್ರಯೋಗ ಪಶು
ದೇಹದಲ್ಲಿ ಕಸಿಗೊಳಿಸಿ ಅದರ ಬೆಳವಣಿಗೆಯ
ಅಭ್ಯಸಿಸುವುದು. ಗುರುತು ಹಚ್ಚಿರುವುದರಿ
ಜೀವಿಯ ದೇಹದ ಕೋಶಗಳಲ್ಲಿ ಬೆರೆತಿದ್ದರೂ ನವ
ಸ್ಪಷ್ಟವಾಗಿ ಕಾಣುತ್ತದೆ.

ಈಗ ಜರಾವಿಜ್ಞಾನದ ಎರಡು ಮುಖ್ಯ ಪ್ರ
ಗಳನ್ನು ಗಮನಿಸೋಣ. ಕಶೇರುಕ ಜೀವಕೋ
ಗಳನ್ನು ಮಾದರೀ ವಾತವರಣದಲ್ಲಿ ಬೆಳೆಸಿದರೆ ಅ
ಮುದಿತನ ಮತ್ತು ಸಾವಿನಿಂದ ತಪ್ಪಿಸಿಕೊಳ್ಳಬಲ್ಲವೆ
ಈ ಜೀವಕೋಶವಿದ್ದ ಮೂಲ ಜೀವಿಗೆ ಅನ್ವಂ
ವಾಗುವ ನಿಯಮಗಳಿಗೆ ಅತೀತವಾಗಿ ಚಿರಂಜೀ
ಯಾಗುವುದೆ? ಈ ಸವಾಲಿಗೆ ಉತ್ತರವೊ ಎಂಬಂತೆ
ಒಂದು ಪ್ರಯೋಗವು ಈ ಶತಮಾನದ ಆದಿಯ
ಅಲೆಕ್ಸಿ ಕ್ಯಾರಲ್ ಎನ್ನುವವರಿಂದ ನಡೆಯಿತು. ಇವ
ಕೋಳಿಮರಿಯ ಹೃದಯದಿಂದ ಬೇರ್ಪಡಿಸಿದ್ದ ತಂ
ಕಣಗಳನ್ನು (Fibroblast) ಪ್ರಯೋಗಾಲ
ದಲ್ಲಿಕೃಷಿಗೊಳಪಡಿಸಿ ಬೆಳೆಸಿದರು. ಇವು ಸತತವಾ
೩೪ ವರ್ಷಗಳವರೆಗೆ ವರ್ಧಿಸುತ್ತಾ ನಡೆದವು. ಕೊನೆ
ಬೇಸತ್ತು ಪ್ರಯೋವನ್ನೇ ನಿಲ್ಲಿಸಿದರು. (ಇಬೆಲಿಂ
೧೯೧೩ ಮತ್ತು ಪಾರ್ಕರ್ ೧೯೩೮). ಈ ಪ್ರಯೋಗ
ಜರಾವಿಜ್ಞಾನಿಗಳಿಗೆ ಬಹುಮುಖ್ಯವೆನಿಸಿತು. ಪ್ರಯೋ
ಗದ ಫಲಿತಾಂಶಗಳನ್ನು ಹೀಗೆ ಕ್ರೋಢೀಕರಿಸಿದರು.

★ ದೇಹದಿಂದ ಬೇರ್ಪಡಿಸಿದ ಜೀವಕೋ
ಗಳು, ದೇಹದ ಹೊರಗೆ ಮಾದರೀ ವಾತಾವರಣದ
ಬೆಳೆಯುತ್ತವೆ ; ವರ್ಧಿಸುತ್ತವೆ, ಸಹಜ ಕ್ರಿಯೆಗಳನ
ನಡೆಸುತ್ತವೆ.

★ ದೇಹದಲ್ಲಿದ್ದಿದ್ದರೆ ಅವುಗಳ ಆಯುಸ್ಸು ಎಷ
ಇದ್ದಿರಲು ಸಾಧ್ಯವಿತ್ತೋ ಅದಕ್ಕಿಂತಲೂ ಹೆಚ್ಚು ಕಾ
ಬದುಕುತ್ತವೆ.

★ ಕೋಳಿಮರಿಯ ವಯಸ್ಸಾಗುವಿಕೆ, ಮುದಿತ
ಮತ್ತುಸಾವಿನಲ್ಲಿ ತಂತುಕಣದ ಪಾತ್ರವಿಲ್ಲ.

★ ವಯಸ್ಸಾಗುವ ಕ್ರಿಯೆ ಜೀವಕೋಶಕ್ಕಿಂ
ಉನ್ನತ ಸ್ತರದಲ್ಲಿ ನಡೆಯುತ್ತಿರಬಹುದು.

ಅಲೆಕ್ಸಿ ಕ್ಯಾರಲ್‌ರ ಸೂತ್ರದನುಗುಣವಾಗಿ ವಿ
ದಾದ್ಯಂತ ಪ್ರಯೋಗಗಳು ನಡೆದವು. ಪ್ರಯೋ
ಗಳಲ್ಲಿ ಮನುಷ್ಯನ ಮತ್ತು ವಿವಿಧ ಪ್ರಾಣಿಗಳ ವಿವಿ
ಜೀವ ಕೋಶಗಳು ಬಳಸಲ್ಪಟ್ಟವು. ಇವುಗಳಲ್ಲಿ ಎರಡ
ಪ್ರಯೋಗ ಸರಣಿಯನ್ನು ಇಲ್ಲಿ ಹೆಸರಿಸಬಹುದು
Hela ಸರಣಿ (೧೯೫೨-ಮಾನವ ಗರ್ಭಕೋ
ಕಂಠದ ಅರ್ಬುದ ಕೋಶಗಳು) ಮತ್ತು L ಸರ
(೧೯೪೩-ಇಲಿಯ ಮೀಸಂ ಕೈಮ್ ಕೋಶಗಳು)
ಇವು ಇಂದಿಗೂ ವಿಶ್ವದ ಹಲವು ಪ್ರಯೋಗ
ಲಯಗಳಲ್ಲಿ ಬೆಳೆಯುತ್ತಾ ಇವೆ.

### ಮುಖ್ಯ ಪ್ರಶ್ನೆ

ನಂತರದ ದಿನಗಳಲ್ಲಿ ಒಂದು ಪ್ರಶ್ನೆ ಎದ್ದಿತು. ಕೃ

ಯಲ್ಲಿ ವರ್ಧಿಸುತ್ತಿರುವ ಚಿರಂಜೀವಿ ಜೀವ ಕೋಶಗಳು ಸಹಜ ಲಕ್ಷಣಗಳನ್ನು ಒಳಗೊಂಡಿರುತ್ತವೆಯೆ? ಅಥವಾ ವಿಕೃತ ಲಕ್ಷಣಗಳನ್ನು ಹೊಂದಿ ರುತ್ತವೆಯೆ?

ವಿಸ್ತೃತ ಅಧ್ಯಯನಗಳು ನಡೆದವು. ಸರಣಿಯ ಜೀವಕೋಶಗಳಂತೂ ಕ್ಯಾನ್ಸರ್ ಕೋಶಗಳು. ಉಳಿದವನ್ನು ಪರೀಕ್ಷಿಸಿದಾಗ ಅವುಗಳ ವರ್ಣತಂತು ಸಂಯೋಜನೆಯಲ್ಲಿ ವ್ಯತ್ಯಾಸಗಳಿದ್ದವು. ಕೆಲವಂತೂ ಮಾತೃಕೋಶಕ್ಕೆ ಯಾವುದೇ ರೀತಿಯಿಂದ ಸಂಬಂಧ ಪಡದಂತಹ ಚಟುವಟಿಕೆ ನಡೆಸುತ್ತಿದ್ದವು. ಹಾಗಿದ್ದ ಮೇಲೆ ಇವೆಂತಹ ಚಿರಂಜೀವಿ ಕೋಶಗಳು ? ವಿಭಜನೆಗೊಳ್ಳುವ ಒಂದೇ ಒಂದು ಲಕ್ಷಣ ಚಿರಂಜೀವನದ ತಿರುಳಾಗಬಾರದಲ್ಲ ! ಕೆಲವರಂತೂ ಜೀವ ಕೋಶ ಕೃಷಿತಂತ್ರಜ್ಞಾನವನ್ನು, ಅವುಗಳಲ್ಲಿ ಬೆಳೆಸಿದ ಕೋಶಗಳನ್ನು ಸಹಜ ಕೋಶಗಳೊಂದಿಗೆ ಹೋಲಿಸುವ ಉಚಿತತೆಯನ್ನು ಪ್ರಶ್ನಿಸಲಾರಂಭಿಸಿದರು.

### ಹಣೆಬರಹ

ಮೇಲ್ಕಂಡ ದೋಷಗಳನ್ನೆಲ್ಲ ನಿವಾರಿಸುವಂತಹ ತಂತ್ರಜ್ಞಾನವನ್ನು ೧೯೬೧ರಲ್ಲಿ ಪಾಲ್ ಮೂರ್‌ಹೆಡ್ ಮತ್ತು ಲಿಯೋನಾಡ್ ಹೇಫ್ಲಿಕ್ ರೂಪಿಸಿ ಮನುಷ್ಯನ ತಂತುಕಣಗಳ ಕೃಷಿಯನ್ನು ಆರಂಭಿಸಿದರು. ಪ್ರಯೋಗದ ಕೊನೆಯವರೆಗೂ ಅವು ತಂತು ಕಣಗಳಾಗಿಯೇ ಇರುವುದನ್ನು ಖಚಿತಪಡಿಸಿಕೊಂಡರು. ಇವರ ಪ್ರಯೋಗದಲ್ಲಿ ತಂತುಕಣಗಳು ೫೦ ತಲೆಮಾರಿನ ನಂತರ ಪೂರ್ಣ ಸತ್ತವು. ತಂತು ಕಣಗಳ ಸಾವಿನ ಪ್ರಯೋಗಾಲಯದಲ್ಲಿನ ಯಾವುದೇ ದೋಷಗಳೂ ಕಾರಣವಾಗಿರಲಿಲ್ಲ. ಅಂದರೆ ತಂತು ಕಣಗಳ ಹಣೆಬರಹದಲ್ಲಿ ಸಾವು ಬರೆದಿದೆ ಎಂದಾಯಿತು. ಈ ಫಲಿತಾಂಶವನ್ನು ವಿಶ್ವದ ಇತರ ಪ್ರಯೋಗಾಲಯಗಳಲ್ಲಿ ದೃಢೀಕರಿಸಲಾಗಿದೆ.

ಅಲೆಕ್ಸಿ ಕ್ಯಾರೆಲ್‌ರ ಪ್ರಯೋಗವನ್ನು ಮತ್ತೆ ವಿಶ್ಲೇಷಿಸೋಣ. ೩೪ ವರ್ಷಗಳವರೆಗೆ ಕೋಶಗಳ ವರ್ಧನೆ ನಡೆದಿದ್ದು, ಕೊನೆಗೆ ಬೇಸರ ಬಂದು ಬೇಕೆಂದೇ ನಿಲ್ಲಿಸಲಾಯಿತು. ಇವು ಸಹಜ ಕೋಶಗಳೇ ಆಗಿರಬೇಕು. ಏಕೆಂದರೆ ಕೋಳಿಮರಿಯ ತಂತು ಕಣಗಳು ಕೃಷಿಯಲ್ಲಿ ವಿಕೃತಗೊಂಡ ದಾಖಲೆಗಳಿಲ್ಲ. ಈ ಪ್ರಯೋಗವನ್ನು ಆಧುನಿಕ ಉಪಕರಣಗಳ ನೆರವಿನಿಂದ ಮತ್ತೆ ಮಾಡಿದಾಗ, ವಿಭಜನೆ ಒಂದು ವರ್ಷದವರೆಗೆ ಮಾತ್ರ ನಡೆಯಿತು. ಹಾಗಿದ್ದ ಮೇಲೆ ಕ್ಯಾರೆಲ್‌ರವರ ಪ್ರಯೋಗದಲ್ಲೇ ದೋಷ ಇದ್ದಿರಬಹುದೇ ? ಲಿಯೋನಾರ್ಡ್ ಹೇಫ್ಲಿಕ್ (೧೯೭೦-೭೨) ಮತ್ತು ಎಟ್‌ಕೋವ್‌ಸ್ಕಿ (೧೯೮೦) ಕ್ಯಾರಲ್‌ರೊಡನೆ ಕೆಲಸ ಮಾಡುತ್ತಿದ್ದ ಓರ್ವ ತಂತ್ರಜ್ಞನೊಡನೆ ಸಂಪರ್ಕ ಬೆಳೆಸಿ ಪ್ರಶ್ನಿಸಿದಾಗ, ನಿಜವಾಗಿಯೂ ದೋಷ, ಅಂದು ಲಭ್ಯವಿದ್ದ ತಂತ್ರಜ್ಞಾನದಲ್ಲಿದ್ದುದು ಪತ್ತೆಯಾಯಿತು.

### ಋಜುವಾತು

ಕೃಷಿಯಲ್ಲಿ ಬಳಸಿದ ಮಾನವ ಜೀವಕೋಶಗಳನ್ನು ಭ್ರೂಣಗಳಿಂದ ಪಡೆಯಲಾಗಿತ್ತು. ಇವು ಸುಮಾರು ೫೦ ತಲೆಮಾರುಗಳವರೆಗೆ ವಿಭಜನೆಗೊಂಡವು. ಭ್ರೂಣಮೂಲದ ಬದಲು, ವಿವಿಧ ವಯಸ್ಸಿನ ಮನುಷ್ಯರ ದೇಹದಿಂದ ಜೀವಕೋಶಗಳನ್ನು ಕೃಷಿಗೊಳಪಡಿಸಿದರೆ ? ಅಂತಹ ಪ್ರಯೋಗವನ್ನು ೧೯೬೫ರಲ್ಲಿ ಹೇಫ್ಲಿಕ್ ನಡೆಸಿದ್ದರು. ಎಂಟು ಜನ



ಹಿಂದಿನಿಂದ ಇಂದಿನವರೆಗೆ ಮಾನವನ ಆಯುಷ್ಯದ ಜೀವಿತಾವಧಿಯನ್ನು ಹೆಚ್ಚಿಸುತ್ತಾ ಬಂದ ಯಮಪಾಶವನ್ನು ಇನ್ನೆಷ್ಟು ಮುಂದೆ ಜಗ್ಗುತ್ತಾನೋ ಈ ಮಾನವ ?




ಹೆಚ್ಚುತ್ತಿರುವ ಮಾನವನ ಆಯುಷ್ಯದ ಜೀವಿತಾವಧಿ

ಪ್ರೌಢ ವ್ಯಕ್ತಿಗಳ ತಂತುಕಣಗಳನ್ನು ಕೃಷಿಗೊಳಪಡಿಸಿ ಅವು ೧೪೨೯ ತಲೆಮಾರುಗಳವರೆಗೆ ಮಾತ್ರ ಬೆಳೆಯುವುದನ್ನು ತೋರಿಸಿದರು ( ಭ್ರೂಣ ಕೋಶಗಳು ೩೫-೬೩ ತಲೆಮಾರುಗಳ ಬೆಳೆದವು). ಅಂದರೆ ಕೋಶದ ವಯಸ್ಸು ಹೆಚ್ಚಾದಂತೆಲ್ಲ ಸಾವು ಸಮೀಪಿಸುತ್ತದೆ. ಎಂಬುದಕ್ಕೆ ಋಜುವಾತು ದೊರೆತಂತಾಯಿತು.

ಇದಕ್ಕೆ ಪೂರಕವಾಗಿ ಮತ್ತೊಂದು ಪ್ರಯೋಗವನ್ನು ೧೯೭೦ರಲ್ಲಿ ಮಾರ್ಟಿನ್ ಮುಂತಾದವರು ಮಾಡಿದರು. ಇವರು ಭ್ರೂಣದಿಂದ ಹಿಡಿದು ೯೦ ವರ್ಷ ವಯಸ್ಸಿನವರೆಗಿನ ಮನುಷ್ಯರನ್ನು ಆಯ್ಕೆ ಮಾಡಿ ಅವರ ತೋಳಿನಿಂದ ತಂತುಕಣಗಳನ್ನು ಹೊರತೆಗೆದು ಕೃಷಿಗೊಳಪಡಿಸಿದರು. ಮಾತ್ರ ಕೋಶದ ವಯಸ್ಸು ಹೆಚ್ಚಾದಂತೆಲ್ಲ, ವಿಭಜನಾ ಶಕ್ತಿ ಕುಂದುವುದನ್ನು ಮನಗಂಡು, ಅದು ಪ್ರತಿವರ್ಷ ೦.೨೦ ಕುಗ್ಗುವುದೆಂದು ಸಾರಿದರು.

೧೯೭೩ರಲ್ಲಿ ಲೀಗ್ಯೂರಿ ಮಾನವ ಪಿತ್ತಜನಕಾಂಗ ಕೋಶಗಳನ್ನು, ಶ್ನೀಡರ್ ಮತ್ತು ಮಿಟ್‌ಸೂಯಿ ೧೯೭೬ರಲ್ಲಿ ಚರ್ಮದಿಂದ ಹೊರತೆಗೆದ ತಂತು ಕಣಗಳನ್ನು, ೧೯೭೮ರಲ್ಲಿ ಬೀರ್‌ಮನ್ ರಕ್ತನಾಳ ಗಳಲ್ಲಿರುವ ಮೃದು ಮಾಂಸ ಕೋಶಗಳನ್ನು ಕೃಷಿಗೊಳಪಡಿಸಿ ಮೇಲಿನ ಫಲಿತಾಂಶವನ್ನು ಪುಷ್ಟೀಕರಿಸಿದರು.

## ರಾಕೆಟ್ ವೇಗ

ಅಕಾಲ ವೃದ್ಧಾಪ್ಯ (Pro-geria =Hutchin son gilford syndrome) ಎನ್ನುವುದು ತೀರಾ ಅಪರೂಪದ ರೋಗ. ವ್ಯಕ್ತಿಯ ವಯಸ್ಸು ಕೇವಲ ೯ ವರ್ಷ, ಆದರೆ ಲಕ್ಷಣ ೭೦ ವರ್ಷದವನದ್ದು. ವೃದ್ಧಾಪ್ಯ ಲಕ್ಷಣಗಳು ಏಕೆ ಇವರಲ್ಲಿ ಅಷ್ಟು ತ್ವರಿತವಾಗಿ ತಲೆದೋರುತ್ತವೆ? ವೆರ್ನರ್ ಸಿಂಡ್ರೋಮ್ ಎನ್ನುವ ಮತ್ತೊಂದು ರೋಗವಿದೆ. ಇದೂ ಅಕಾಲ ವೃದ್ಧಾಪ್ಯವನ್ನು ಉಂಟುಮಾಡುವುದಾದರೂ, ಶೈಶವದಲ್ಲಿ ಕಾಡುವುದಿಲ್ಲ. ಕೂದಲೆಲ್ಲ ಬೆಳ್ಳಗಾಗುತ್ತದೆ. ನಂತರ ಉದುರಿಹೋಗುತ್ತದೆ. ಆಕಾರ ಕುಳ್ಳು, ಕಣ್ಣಿನಲ್ಲಿ ಪೊರೆ, ಸಕ್ಕರೆ ಕಾಯಿಲೆಗೆ ತುತ್ತಾಗುವುದು ಹೆಚ್ಚು. ರಕ್ತನಾಳಗಳ ಒಳಭಾಗದಲ್ಲಿ ಕೊಬ್ಬು ಹೆಚ್ಚು ಶೇಖರಣೆಯಾಗುತ್ತದೆ. ಕೊನೆಗೆ ಕಲ್ಲಿನಂತಾಗುತ್ತದೆ. ಮೂಳೆಗಳು ಟೊಳ್ಳಾಗುತ್ತವೆ. ಅರ್ಬುದಕ್ಕೆ ಗುರಿಯಾಗುವ ಸಾಧ್ಯತೆ ಹೆಚ್ಚಿರುತ್ತದೆ.

ಈ ಎರಡು ತರಹದ ರೋಗಿಗಳಲ್ಲಿ ವಯಸ್ಸೆನ್ನುವುದು ರಾಕೆಟ್ ವೇಗದಲ್ಲಿ ಧಾವಿಸುತ್ತಿರುತ್ತದೆ. ಇದಕ್ಕೆ ಕಾರಣಗಳೇನು ? ಜರಾ ವಿಜ್ಞಾನಿಗಳು ಈ ರಹಸ್ಯವನ್ನು ತಿಳಿಯಲು ಇವರ ಮೇಲೆ ಅನೇಕ ಪ್ರಯೋಗಗಳನ್ನು ನಡೆಸುತ್ತಿದ್ದಾರೆ. ಗೋಲ್ಡ್ ಸ್ಟೀನ್ (೧೯೬೯, ೭೧) ಮಾರ್ಟಿನ್ (೧೯೭೦) ಮುಂತಾದವರು ಈ ರೋಗಿಗಳ ದೇಹದಿಂದ ತಂತುಕಣಗಳನ್ನು ಬೇರ್ಪಡಿಸಿ ಕೃಷಿಗೊಳಪಡಿಸಿದರು. ಅವು ೨ರಿಂದ ೧೦ ತಲೆಮಾರುಗಳವರೆಗೆ ಮಾತ್ರ ಬದುಕಿದ್ದು ನಂತರ ಸತ್ತು ಹೋದವು.

## ನಿಶ್ಚಿತ ಅವಧಿ

ಅತ್ಯುತ್ತಮ ವಾತಾವರಣದಲ್ಲಿದ್ದರೂ, ಜೀವಕೋಶಗಳು ಒಂದು ನಿಶ್ಚಿತ ಅವಧಿಯ ನಂತರ ಸಾವನ್ನಪ್ಪುತ್ತವೆ. ಎಂಬುದು ಖಚಿತವಾಯಿತು. ಇದು ಪ್ರಯೋಗಾಲಯದ ಫಲಿತಾಂಶ ಇಂತಹುದೇ ಅತ್ಯುತ್ತಮ ವಾತಾವರಣವನ್ನು ದೇಹದಲ್ಲಿರುವ ಜೀವಕೋಶಗಳಿಗೆ ನೀಡಿದರೆ ? ಅಲ್ಲೂ ಸಾವನ್ನಪ್ಪುತ್ತವೆ. ವಯಸ್ಸಾಗಿರುವ ಒಂದು ಜೀವಕೋಶವನ್ನು ಹೊರತೆಗೆದು, ಅದಕ್ಕೆ ಗುರುತು ಹಚ್ಚಿ, ಒಂದು ಎಳೇ ಜೀವಿಯ ದೇಹದಲ್ಲಿ ಕಸಿ ಮಾಡಿದಾಗ, ಅದು ತನ್ನ ವಯಸ್ಸಿಗನುಗುಣವಾಗಿ ಸತ್ತಿತೇ ಹೊರತು ಎಳೇ ದೇಹದ ಪರಿಸರ ಯಾವ ಪ್ರಭಾವವನ್ನೂ ಬೀರಲಿಲ್ಲ. ಆದರೆ ಕೋಶಕೇಂದ್ರಗಳನ್ನು (Nucleus) ಬದಲಿಸಿದರೆ ಪರಿಣಾಮ ಅದ್ಭುತ ! ವಿವರಗಳನ್ನು ಮುಂದೆ ಓದಿ.

## ಏರುಪೇರು

ಪ್ರಯೋಗಾಲಯದಲ್ಲಿ ವರ್ಧಿಸಿದಷ್ಟು ದೇಹದಲ್ಲಿ ಜೀವಕೋಶಗಳು ವರ್ಧಿಸಲಾರವು. ಏಕೆಂದರೆ ದೇಹದಲ್ಲಿ ಅನೇಕ ವ್ಯಾಪಾರಗಳು ನಡೆಯುತ್ತಿರುತ್ತವೆ. ಅವುಗಳ ಪ್ರಭಾವ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಜೀವಕೋಶಗಳ ಮೇಲೆ ಆಗುತ್ತಿರುತ್ತದೆ. ಹಾಗಾಗಿ ಜೀವಕೋಶದ ವ್ಯಾಪಾರಗಳು ವಯಸ್ಸಿಗನುಗುಣವಾಗಿ ಮಂದವಾಗುತ್ತಾ ನಡೆಯುತ್ತದೆ. ಹೇಫ್ಲಿಕ್ (೧೯೮೦) ಜೀವಕೋಶಗಳಲ್ಲಿ ೧೨೫ಕ್ಕೂ ಹೆಚ್ಚಿನ ಜೈವಿಕ ವ್ಯಾಪಾರಗಳ ವ್ಯತ್ಯಾಸವನ್ನು ನಿರೂಪಿಸಿದರು. ಇವು DNA, RNA, ಕಿಣ್ವ, ಪ್ರೋಟೀನ್, ಶರ್ಕರ, ಮೇದಸ್ಸು, ಶಕ್ತಿ ಉತ್ಪಾದನೆ ಮುಂತಾದುವಕ್ಕೆ ಸಂಬಂಧ ಪಟ್ಟಿವೆ. ಈ ಬದಲಾವಣೆಗಳು ದಟ್ಟವಾದಂತೆಲ್ಲಾ ವಯಸ್ಸುಹೆಚ್ಚಾಗುತ್ತಿದ್ದು, ಕೋಶವು ತನ್ನ ವಿಭಜನಾ ಶಕ್ತಿಯನ್ನು ಪೂರ್ತಿ ಕಳೆದು ಕೊಳ್ಳುವ ಮೊದಲೇ ಸಾವನ್ನಪ್ಪುತ್ತದೆ.

ವಿಭಜನೆ ಮತ್ತು ಈ ೧೨೫ಕ್ಕೂ ಹೆಚ್ಚಿನ ಜೈವಿಕ ವ್ಯಾಪಾರಗಳು ವಂಶವಾಹಿನಿಗಳಲ್ಲಿ ಪೂರ್ವ ನಿರ್ಧಾರಿತವಾಗಿರಬಹುದು. ಈ ವ್ಯಾಪಾರಗಳು ಮಂದವಾಗುತ್ತಿರುವುದನ್ನು ಕೋಶದ ವಿಭಜನಾ ಶಕ್ತಿಯ ರೂಪದಲ್ಲಿ ತಿಳಿಯಬಹುದು. ಹಾಗಾಗಿ, ವಯಸ್ಸಾಗುವುದನ್ನು ತಿಳಿಯಲು ಕೋಶದ ಜೈವಿಕ ವ್ಯಾಪಾರಗಳನ್ನು ಅಭ್ಯಾಸ ಮಾಡುವುದು ಒಳ್ಳೆಯದು. ವಿಭಜನಾ ಶಕ್ತಿಯನ್ನು ಅರಿಯುವುದಕ್ಕಿಂತ ಇದು ಸೂಕ್ತ.

## ವಿಶಿಷ್ಟಾಹಾರ

ಆಯುರ್ವೇದದ ಅಷ್ಟಾಂಗಗಳಲ್ಲಿ ಒಂದಾದ ರಸಾಯನ ತಂತ್ರವು ವಯಸ್ಸನ್ನು ನಿಧಾನಗೊಳಿಸುವಂತಹ ಆಹಾರ ವಿಧಿಗಳ ಬಗ್ಗೆ ವಿಸ್ತೃತ ವರ್ಣನೆಯನ್ನು ನೀಡುತ್ತದೆ. ಇದು ಆಧುನಿಕ ವಿಜ್ಞಾನದ ಬೆಳಕಿನಲ್ಲಿ ವಿಶ್ಲೇಷಣೆಯಾಗಬೇಕು. ಇದರಿಂದ ಖಂಡಿತ ಅನೇಕ ಸ್ವಾರಸ್ಯಕರ ಸಂಗತಿಗಳ ಹೊರಬರುತ್ತವೆ.

ಆಧುನಿಕ ವಿಜ್ಞಾನ ತನ್ನದೇ ಹಾದಿಯಲ್ಲಿ ದೀರ್ಘಾಯಸ್ಸನ್ನು ನೀಡುವಂತಹ ಆಹಾರಾನ್ವೇಷಣೆಯಲ್ಲಿದೆ. ೨೦ರಿಂದ ೪೦ ವರ್ಷ ಆಯಸ್ಸನ್ನು ಹೆಚ್ಚಿಸುವಂತಹ ಆಹಾರವನ್ನು ನೆಬ್ರಾಸ್ಕ ವಿಶ್ವವಿದ್ಯಾಲಯದ ಡಾ। ಡೆನ್‌ಹ್ಯಾಂ ಹರ್ಮನ್‌ರವರು ರೂಪಿಸಿದ್ದಾರೆ. ಇವರು ೨-MEA (೨-Mercapto ethylamine), ವಿಟಮಿನ್ E ಮತ್ತು BHT(butylated hydroxy tolvene) ಎನ್ನುವ ರಾಸಾಯನಿಕ ವಸ್ತುಗಳನ್ನು ಒಳಗೊಂಡ ಆಹಾರವನ್ನು ಇಲಿಗಳಿಗೆ ನೀಡಿ, ಅವುಗಳ ಆಯಸ್ಸನ್ನು ದುಪ್ಪಟ್ಟುಗೊಳಿಸಿದ್ದಾರೆ. ಈ ರಾಸಾಯನಿಕ ವಸ್ತುಗಳು ಪ್ರತಿಭಸ್ಮಕಾರಿಗಳು (antioxidants) ಎನ್ನುವ ಗುಂಪಿಗೆ ಸೇರುತ್ತವೆ. ಮನುಷ್ಯರ ಮೇಲೆ, ಇಲಿಗಳಿಗೆ ನೀಡಿದ ಪ್ರಮಾಣದಷ್ಟು ನೀಡಿ ೨-MEA ಮತ್ತು BHT ಗಳನ್ನು ಪರೀಕ್ಷಿಸಿಲ್ಲ. ಆದರೆ VIT-E ಪ್ರಭಾವವನ್ನು ಬರ್ಕಲೀಯ ಕ್ಯಾಲಿಫೋರ್ನಿಯ ವಿಶ್ವವಿದ್ಯಾಲಯದ ಡಾ। ಲೆಸ್ಟರ್ ಪ್ಯಾಕರ್‌ರವರು ಅಧ್ಯಯನ ಮಾಡಿ, ಅಧಿಕ ಪ್ರಮಾಣದ - ಮಾನವ ಶ್ವಾಸಕೋಶ ಜೀವಿಗಳ ಆಯಸ್ಸನ್ನು ದುಪ್ಪಟ್ಟು ಮಾಡುವುದಾಗಿ ಪ್ರಯೋಗಾಲಯದಲ್ಲಿ ನಿರೂಪಿಸಿದ್ದಾರೆ.

ಭಸ್ಮಕಾರಿ ಸಿದ್ಧಾಂತವನ್ನು ಪ್ರತಿಪಾದಿಸುವವರ ವಿವರಣೆ ಹೀಗಿದೆ. ದೇಹದಲ್ಲಿ ವಿದ್ಯುಚ್ಛಕ್ತಿಯನ್ನು ಹೊಂದಿದ ಕೆಲವು ಕಣಗಳು ಇರುತ್ತವೆ. ಇವುಗಳನ್ನು ಕಣಪುಂಜಗಳು (free radicals) ಎಂದು ಕರೆಯಬಹುದು. ಇವು ದೇಹದ ಅಂಗಾಂಗಗಳಲ್ಲಿ ಒಂದು ರೀತಿಯ ಜೈವಿಕ ತುಕ್ಕನ್ನು (biological rusting) ಉಂಟು ಮಾಡುತ್ತವೆ. ಪ್ರತಿಭಸ್ಮಕಾರಿಗಳು ಈ ತುಕ್ಕನ್ನು ಸ್ಪಂಜಿನಂತೆ ಒರೆಸಿ ಶುಚಿಗೊಳಿಸುವುದಲ್ಲದೆ ಮುಕ್ತ ವಿದ್ಯುತ್ ಕಣಪುಂಜಗಳ ದುಷ್ಪ್ರಭಾವಗಳಿಂದ ದೇಹವನ್ನು ರಕ್ಷಿಸುತ್ತವೆ.

## ಕುಲುಮೆ

ಕೆಲವರ ಸಿದ್ಧಾಂತದಂತೆ ದೇಹವು ಒಂದು ಜೈವಿಕ ಕುಲುಮೆ (metaboilc furnace) ವಯಸ್ಸಾಗುತ್ತಿದ್ದಂತೆ ಕುಲುಮೆ ಮಂದವಾಗುತ್ತಾ ನಡೆಯುತ್ತದೆ. ಉರಿಯನ್ನು ಹೆಚ್ಚಿಸಿದಷ್ಟು ಕಟ್ಟಿಗೆ ಬೇಗ ಉರಿದು ಬೂದಿಯಾಗುವುದಲ್ಲವೆ ! ಹಾಗೆ, ಇಲಿಗಳಿಗೆ ೬೦% ಆಹಾರ ನೀಡಲಾಯಿತು. ಅಂದರೆ ಮೂರು ದಿವಸಗಳಲ್ಲಿ ಒಂದು ದಿವಸ ಉಪವಾಸ ಹಾಕಲಾಯಿತು. ಅವು ತಮ್ಮ ಸರಾಸರಿ ವಯಸ್ಸಿಗಿಂತ ೦.೩೩೩ ರಿಂದ ೦.೫೦ ರವರೆಗೆ ಅಧಿಕ ಕಾಲ ಬದುಕಿದವು ( ಲಂಘನಂ ಪರಮೌಷಧಂ, ಅಲ್ಲವೇ!). ಇಲಿಗಳಿಗೆ ಅತ್ಯುತ್ತಮ ಆಹಾರವನ್ನು ಕನಿಷ್ಠ ಪ್ರಮಾಣದಲ್ಲಿ ನೀಡಿದಾಗ ಅವು

ವೃದ್ಧಾಪ್ಯದ ವಿನಾಶಕರ ಲಕ್ಷಣಗಳಿಗೆ ಅಷ್ಟಾಗಿ ಬಲಿಯಾಗದೆ ಗರಿಷ್ಠ ವಯೋಮಿತಿಯನ್ನು ಮುಟ್ಟಿದವು.

ಮಿತಾಹಾರವನ್ನು ಯಾವ ವಯಸ್ಸಿನಲ್ಲಿ ಬೇಕಾದರೂ ಆರಂಭಿಸಬಹುದು. ಡಾ। ಚಾರ್ಲ್ಸ್ ಬ್ರೌನ್ ಇಲಿಗಳಿಗೆ ಊಟದಲ್ಲಿ ಅರ್ಧದಷ್ಟು ಪ್ರೋಟೀನ್ ಅಂಶವನ್ನು ಅವುಗಳ ಹದಿನಾರನೆಯ ತಿಂಗಳಿನಲ್ಲಿ (ಅಂದರೆ ಮನುಷ್ಯರ ೪೫ ವರ್ಷಗಳಿಗೆ ಸಮ) ಕಡಿಮೆ ಮಾಡಿದಾಗ ಅವುಗಳ ಸರಾಸರಿ ಆಯುಸ್ಸು ೩೩% ರಷ್ಟು ಹೆಚ್ಚಿತು.

ಬರೋಸ್ ಹೇಳುತ್ತಾರೆ "ದೀರ್ಘಾಯಸ್ಸನ್ನು ಕೊಡುವ ಮಾತ್ರೆಗಳು ಇಂದಿಲ್ಲ. ಪ್ರತಿಭಸ್ಮಕಾರಿಗಳನ್ನು ಒಳಗೊಂಡ ಆಹಾರಗಳ ದುಷ್ಪರಿಣಾಮಗಳ ಬಗ್ಗೆ ನಮಗರಿವಿಲ್ಲ. ಆದರೆ ಮಿತಾಹಾರವನ್ನು ಪ್ರತಿಯೊಬ್ಬರೂ ಪಾಲಿಸಬಹುದು. ಪಾಲಿಸಬೇಕು. ಪೌಷ್ಟಿಕಾಂಶಗಳಿಂದ ಕೂಡಿದ, ಕಡಿಮೆ ಕ್ಯಾಲರಿಯ, ಸಮತೋಲನದ ಆಹಾರದಿಂದ ನಮ್ಮ ಬದುಕಿನ ಅವಧಿಯನ್ನು ಹತ್ತು ವರ್ಷಗಳವರೆಗೆ ಹೆಚ್ಚಿಸಿಕೊಳ್ಳಬಹುದು."

## ಮೃತ್ಯು ಚೋದನಿ

ದೇಹದಲ್ಲಿ ಒಂದು ಜೈವಿಕ ಗಡಿಯಾರವಿದೆ ಎಂದು ಹಿಂದೆಯೇ ತಿಳಿದೆವು. ಆದರೆ ಅದು ಎಲ್ಲಿದೆ? ವಿಜ್ಞಾನಿಗಳು ಎರಡು ಸ್ಥಳಗಳಲ್ಲಿ ಗುರುತಿಸಿದ್ದಾರೆ. ಇದು ಚೋದನಿಯ (hormone) ರೂಪಿನಲ್ಲಿ ಮೆದುಳಿನಲ್ಲಿ ಉತ್ಪಾದನೆ ಆಗುತ್ತಿರಬಹುದು. ಇಲ್ಲವೇ ದೇಹದ ಪ್ರತಿಯೊಂದು ಜೀವಕೋಶದಲ್ಲಿರುವ DNAನಲ್ಲಿ ಇರಬಹುದು.

ಲಿಯೋನಾರ್ಡ್ ಹೇಫ್ಲಿಕ್ ಒಂದು ಪ್ರಯೋಗ ಮಾಡಿದರು. ಮುದಿಮುದಿ ಜೀವಕೋಶವೊಂದರಿಂದ ಕೋಶಕೇಂದ್ರವನ್ನು (nucleus) ಹೊರತೆಗೆದು, ಅದರ ಸ್ಥಾನದಲ್ಲಿ ಹಚ್ಚಹಸಯ ಕೋಶದಿಂದ ಹೊರತೆಗೆದ ಕೋಶಕೇಂದ್ರವನ್ನು ಇರಿಸಿದರು. ಮುದಿಮುದಿ ಕೋಶ ಯಯಾತಿಯಂತೆ ನವಯೌವ್ವನವನ್ನು ಪಡೆದು ದೀರ್ಘಕಾಲ ಬಾಳಿತು. ಈ ಪ್ರಯೋಗವನ್ನು ತಿರುಗ ಮುರುಗ ಮಾಡಿದಾಗ, ಮುದಿಕೋಶವನ್ನು ಪಡೆದ ಯುವಕೋಶ ಅಲ್ಪಕಾಲದಲ್ಲಿಯೇ ಸತ್ತಿತು. ಈ ಪ್ರಯೋಗಗಳನ್ನು ಮತ್ತೆ ಮತ್ತೆ ಮಾಡಿ ಫಲಿತಾಂಶವನ್ನು ದೃಢೀಕರಿಸಲಾಗಿದೆ. ಹಾಗಾಗಿ ಅನೇಕ ವಿಜ್ಞಾನಿಗಳು ಜೈವಿಕ ಗಡಿಯಾರ ಸುರುಳಿಯಲ್ಲಿದೆ ಮತ್ತು ಈ ಗಡಿಯಾರವು ೭೦ ವರ್ಷಗಳ ಕಾಲ ನಡೆದು ನಿಲ್ಲುವಂತೆ ರಚಿಸಲ್ಪಟ್ಟಿದೆ ಎಂದು ನಂಬಿದ್ದಾರೆ.

ರಾಶೆ ಇನ್‌ಸ್ಟಿಟ್ಯೂಟ್‌ನಲ್ಲಿ ಕೆಲಸ ಮಾಡುತ್ತಿದ್ದ ಜರಾವಿಜ್ಞಾನಿ ಡಾ। ಡಾನರ್ ಡೆಂಕ್ಲ ಮತ್ತೊಂದು ಸಿದ್ಧಾಂತದ ಮಂಚೂಣಿಯಲ್ಲಿದ್ದಾರೆ. ಇವರ ಅಭಿಪ್ರಾಯದಂತೆ ಗಡಿಯಾರದ ಟಿಕ್ ಟಿಕ್ ಮಿಡಿತ ಹುಟ್ಟು ಮತ್ತು ಹರೆಯದ (puberty) ನಡುವೆ ಎಲ್ಲೋ ಒಂದುಕಡೆ ಆರಂಭವಾಗುತ್ತದೆ. ಯಾವಾಗಲೆಂದು ನಿಖರವಾಗಿ ತಿಳಿದಿಲ್ಲ. ಇದು ಒಂದು ಚೋದನಿಯ ರೂಪದಲ್ಲಿ ಮೆದುಳಿನ ಪಿಟ್ಯೂಟರಿ ಗ್ರಂಥಿಯಿಂದ ಬಿಡುಗಡೆಯಾಗುತ್ತದೆ. ಇದರ ಹೆಸರೇ ಮೃತ್ಯುಚೋದನಿ?

ಡೆಂಕ್ಲರ ಅಭಿಪ್ರಾಯದಂತೆ ಜನರು ಹೃದಯ। ಮೂತ್ರಪಿಂಡ / ಪಿತ್ತಜನಕಾಂಗದ ವೈಫಲ್ಯಗಳಿಂದ ಅಥವಾ ಪಾರ್ಶ್ವವಾಯುವಿನಿಂದ ಸಾಯುವುದಿಲ್ಲ. ಈ ಅಂಗಗಳಿಗೆ ಅತ್ಯವಶ್ಯಕವಾದ ಆಮ್ಲಜನಕದ ಪೂರೈಕೆಯಾಗುವಲ್ಲಿ ಕೆಲವು ಕೋಶಗಳು ಅಸಮರ್ಪಕವಾಗುತ್ತವೆ. ಇದಕ್ಕೆ ಕಾರಣ ಮೃತ್ಯುಚೋದನಿ!

ಡೆಂಕ್ಲರ ಈ ತೀರ್ಮಾನಕ್ಕೆ ಇಲಿಗಳ ಮೇಲೆ ನಡೆಸಿದ ಪ್ರಯೋಗಗಳ ಫಲಿತಾಂಶಗಳೇ ಕಾರಣ. ಪಿಟ್ಯೂಟರಿ ಗ್ರಂಥಿ DECO (decreasing oxygen consumption) ಎನ್ನುವ ರಾಸಾಯನಿಕ ವಸ್ತುವನ್ನು ಬಿಡುಗಡೆ ಮಾಡುತ್ತದೆ. (ಇದರ ಸ್ವರೂಪವನ್ನು ಇನ್ನೂ ತಿಳಿಯಲಾಗಿಲ್ಲ). ಇದರ ಕಾರಣ ಆಮ್ಲಜನಕದ ಸರಬರಾಜು ಕ್ರಮೇಣ ಮಂದವಾಗುತ್ತದೆ. ಮುದಿ ಇಲಿಗಳ ಪಿಟ್ಯೂಟರಿ ಗ್ರಂಥಿಯನ್ನು ತೆಗೆದು ಹಾಕಿದಾಗ ವಯಸ್ಸಾಗುವಿಕೆ "ಸ್ತಬ್ಧ"ವಾಯಿತು. ಥೈರಾಕ್ಸನ್ ಮುಂತಾದ ಅವಶ್ಯಕ ಚೋದನಿಗಳನ್ನು ನೀಡಿದಾಗ ಆ ಇಲಿಗಳು ಕಾಯಕಲ್ಪಗೊಂಡ ತೆರದಲ್ಲಿ ಹೊಸ ತುಪ್ಪಳವನ್ನು ಬೆಳೆಸಿಕೊಂಡವು ಮತ್ತು ಹೃದಯ ದೃಢವಾಗಿ ಮಿಡಿಯಲಾರಂಭಿಸಿತು. ಪಿಟ್ಯೂಟರಿ ಗ್ರಂಥಿಯನ್ನು ಹೊಂದಿರುವ ಮುದಿ ಇಲಿಗಳಿಗೆ ಥೈರಾಕ್ಸನ್ ಮುಂತಾದವುಗಳನ್ನು ನೀಡಿದರೆ ಈ ಲಕ್ಷಣಗಳು ಬಾರವು.

ಈ ಪ್ರಯೋಗದಂತೆ ನಾವು ನಮ್ಮ ಪಿಟ್ಯೂಟರಿ ಗ್ರಂಥಿಯನ್ನು ತೆಗೆಸಿಕೊಳ್ಳುವುದುಸಾಧ್ಯವಿಲ್ಲ. ನಮ್ಮ ದೇಹದ ಅನೇಕ ಕಾರ್ಯಗಳು ಈ ಮಹಾನ್ ಗ್ರಂಥಿಯನ್ನು ಅವಲಂಬಿಸಿವೆ. ಹಾಗಾಗಿ ವಿಜ್ಞಾನಿಗಳು ಈ ಮೃತ್ಯುಚೋದನಿಯ ರೂಪವನ್ನು ಅರಿಯಲಿ, ನಂತರ ಅದು ಬಿಡುಗಡೆಯಾಗದಂತೆ ಅಥವಾ ಬಿಡುಗಡೆಯಾದರೂ ನಿಷ್ಕ್ರಿಯವಾಗುವಂತೆ ಏನಾದರೊಂದು ಔಷಧವನ್ನು ರೂಪಿಸಲಿ ಎಂದು ಆಶಿಸೋಣ.

## ಒತ್ತಡ

ಮಾಂಟ್ರಿಯಲ್ ವಿಶ್ವವಿದ್ಯಾಲಯದ ಡಾ। ಹಾನ್ಸ್ ಸೈಲಿ ಮತ್ತೊಂದು ಸಿದ್ಧಾಂತ ಮಂಡಿಸಿದ್ದಾರೆ. ಅದುವೇ ಒತ್ತಡ ಸಿದ್ಧಾಂತ (stress theory). ನಮ್ಮ ದೇಹದಲ್ಲಿ ರೋಗ ಪ್ರತಿರೋಧವನ್ನುಂಟುಮಾಡುವ ಒಂದು ಸೋಂಕುರಕ್ಷಣಾ ವ್ಯವಸ್ಥೆ ಇರುತ್ತದೆ. ಇದು ದೇಹದ ಮೇಲೆ ಧಾಳಿಮಾಡುವ ಪರವಸ್ತುಗಳಿಂದ ನಮ್ಮನ್ನು ರಕ್ಷಿಸುತ್ತದೆ. ಈ ವ್ಯವಸ್ಥೆ ಅತಿಯಾದ ಒತ್ತಡಕ್ಕೆ ಸಿಲುಕಿದಾಗ ಕುಸಿದು ಬೀಳುತ್ತದೆ. ಆಗ ಈ ವ್ಯವಸ್ಥೆ ದೇಹದ ವಿರುದ್ಧವೇ ತಿರುಗಿ ಬೀಳುತ್ತದೆ.

ಇಡೀ ದೇಹವೇ ನಾಶವಾಗುವವರೆಗೆ ಅಂದರೆ ಸಾವು ಬರುವವರೆಗೆ ವಿನಾಶ ಕಾರ್ಯವನ್ನು ಮುಂದುವರೆಸುತ್ತದೆ. ನಮ್ಮ ದೇಶವನ್ನು ಕಾಯುವ ವೀರ ಯೋಧರೇ ತಿರುಗಿ ಬಿದ್ದು ದೇಶವನ್ನು ಲೂಟಿ ಮಾಡಲು ಆರಂಭಿಸಿದರೆ ಹೇಗಿರುತ್ತದೆ. ಊಹಿಸಿ ಅಂತಹ ಪರಿಸ್ಥಿತಿ ಒತ್ತಡದಿಂದ ತಲೆದೊರುತ್ತದೆ. ಈ ತಿರುಗಿಬೀಳುವಿಕೆಯ ಕಾಲ ಅನುವಂಶಿಕವಾಗಿ ಪೂರ್ವನಿರ್ಧಾರಿತವಾಗಿರುತ್ತದೆ. ಕೆಲವು ಸಲ ಇದು ಅಕಾಲದಲ್ಲಿ ಚೇತನಗೊಳ್ಳಬಹುದು. ನಮ್ಮ ಪ್ರಿಯ ಜನರ ಮರಣ ಅಥವಾ ವಿವಾಹ ವಿಚ್ಛೇದನದಂತಹ ತೀವ್ರ ಮಾನಸಿಕ ಒತ್ತಡ ಈ ಜೈವಿಕ ಆತ್ಮಹತ್ಯೆಗೆ ಅವಕಾಶ ಮಾಡಿಕೊಡಬಹುದು.

## ಸಂಜೀವಿನಿ

ವಯಸ್ಸಾಗುವುದಕ್ಕೆ ಮತ್ತೊಂದು ಕಾರಣ ಕೆಟಕೋಲಮಿನ್‌ಗಳೆಂಬ ರಾಸಾಯನಿಕ ವಸ್ತುಗಳ ಉತ್ಪಾದನೆಯಲ್ಲಿ ಆಗುವ ಕೊರತೆ. ದಕ್ಷಿಣ ಕ್ಯಾಲಿಫೋರ್ನಿಯ ವಿಶ್ವವಿದ್ಯಾಲಯದ ಡಾ। ಕ್ಯಾಲೆಬ್ ಫಿಂಚ್ ೧೯೭೮ರಲ್ಲಿ ಯುವ ಮತ್ತು ಮುದಿ ಇಲಿಗಳ ಮೆದುಳ ಮೇಲೆ ಪ್ರಯೋಗ ನಡೆಸಿ, ಮುದಿ ಇಲಿಗಳ ಮೆದುಳಿನಲ್ಲಿ ಕೆಟಕೋಲಮಿನ್‌ಗಳ ಪ್ರಮಾಣ ಕಡಿಮೆಯಿರುವುದನ್ನು ತೋರಿಸಿದರು.

ಕೆಟಕೋಲಮಿನ್ ಎನ್ನುವ ರಾಸಾಯನಿಕ ವಸ್ತುಗಳಲ್ಲಿ ಡೋಪಮಿನ್ ಮುಖ್ಯವಾದದ್ದು. ಇದರ ಕೊರತೆ ಪಾರ್ಕಿನ್ ಸನ್ ರೋಗಕ್ಕೆ ಕಾರಣವಾಗುತ್ತದೆ. ಇದು ವೃದ್ಧರನ್ನು ಕಾಡುವ ಪ್ರಮುಖ ರೋಗ. ಫಿಂಚ್‌ರವರ ಅಭಿಪ್ರಾಯದಲ್ಲಿ ವೃದ್ಧಾಪ್ಯ ಎನ್ನುವುದು ಪಾರ್ಕಿನ್‌ಸನ್ ರೋಗದ ಪರಮೋಚ್ಛ ಹಂತದ ಮತ್ತೊಂದು ರೂಪದಂತೆ! ನಾವೆಲ್ಲರೂ ೧೫೦ ವರ್ಷ ಬದುಕುವಂತಿದ್ದರೆ ನಮಗೆಲ್ಲರಿಗೂ ಪಾರ್ಕಿನ್‌ಸನ್ ರೋಗ ಖಂಡಿತ ಬರುತ್ತದೆ!

ಮೆದುಳಿನ ಕೆಟಕೊಲಮಿನ್‌ಗಳ ಪ್ರಮಾಣವನ್ನು ಹೆಚ್ಚಿಸುವಂತಹ ಔಷಧಗಳು ಇಂದು ದೊರೆಯುತ್ತಿವೆ. ಆದರೆ ವಯಸ್ಸಾಗುವುದನ್ನು ತಡೆಗಟ್ಟಲು ಇವುಗಳನ್ನು ಬಳಸುವ ದಿಶೆಯಲ್ಲಿ ಪ್ರಯೋಗಗಳು ನಡೆದಿಲ್ಲ.

## ಅರವತ್ತರಲ್ಲಿ ಅಪ್ಪ

ಅರವತ್ತು ವರ್ಷಗಳಾದ ಮೇಲೆ ನಮ್ಮಲ್ಲಿ ಬಹಳ ಜನರಿಗೆ ಲೈಂಗಿಕಾಸಕ್ತಿ ಇರುತ್ತದೆ. ಆದರೆ, ಆರೋಗ್ಯವಂತ ಮಕ್ಕಳನ್ನು ಪಡೆಯುವ ಸಾಧ್ಯತೆ ೩೫ ವರ್ಷಗಳ ನಂತರ ಗಣನೀಯವಾಗಿ ಇಳಿಯುತ್ತದೆ. ಮುಂದೆ ಒಂದು ದಿನ ೬೦ ವರ್ಷ ವಯಸ್ಸಿನಲ್ಲೂ ಆರೋಗ್ಯವಂತ ಮಗುವನ್ನು ಪಡೆಯುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ.

ಪ್ರಜನನ ಅಂಗಗಳ ಹುಟ್ಟು, ಬೆಳವಣಿಗೆ, ಕಾರ್ಯಗಳೆಲ್ಲ ಚೋದನಿಗಳ ನಿಯಂತ್ರಣದಲ್ಲಿರುತ್ತದೆ. ಈ ಚೋದನಿಗಳನ್ನು ನಿಯಂತ್ರಣದಲ್ಲಿಟ್ಟುಕೊಳ್ಳುವ ಪರಮೋಚ್ಚ ಮೆದುಳಿನಲ್ಲಿರುವ ನರ

## ಸಾವನ್ನು ತರುವ ಕಾರಣಗಳು

| ಸಾವಗೆ ಕಾರಣಗಳು | ಹುಟ್ಟಿದಾಗ | ೬೫ನೇ ವರ್ಷದಲ್ಲಿ |
|---|---|---|
| ಹೃದಯ, ರಕ್ತನಾಳ/ ಮೂತ್ರಪಿಂಡದ ಪ್ರಮುಖ ರೋಗಗಳು | ೧೧.೮ | ೧೧.೪ |
| ಹೃದಯದ ರೋಗಗಳು | ೫.೯ | ೫.೧ |
| ಮಿದುಳು ರಕ್ತನಾಳ | ೨.೫ | ೧.೪ |
| ವಾಹನ ಅಪಘಾತ | ೦.೭ | ೦.೧ |
| ವಾಹನ ಅಪಘಾತಗಳನ್ನು ಬಿಟ್ಟು ಇತರ ಅಪಘಾತಗಳು | ೦೬ | ೦.೧ |
| ಇನ್ ಫ್ಲುಯೆಂಜ್ ಮತ್ತು ನ್ಯುಮೋನಿಯಾ | ೦.೫ | ೦.೨ |
| ಸಕ್ಕರೆ ಕಾಯಿಲೆ | ೦.೨ | ೦.೨ |
| ಸೋಂಕು ಮತ್ತು ಪರಾವಲಂಬಿ ಜೀವಿಗಳಿಂದ ಬರುವ ರೋಗಗಳು | ೦.೨ | ೦.೧ |
| ಕ್ಷಯ | | |

ಸೂಚನೆ : ಸಾವನ್ನು ತರುವ ಎಲ್ಲಾ ಕಾರಣಗಳನ್ನು ಸಂಪೂರ್ಣ ನಿವಾರಿಸಿದರೆ ಆಯಸ್ಸಿಗೆ ಸೇರಬಹುದಾದ ಹೆಚ್ಚಿನ ವರ್ಷಗಳು ಹುಟ್ಟು ಮತ್ತು೬೫ ವರ್ಷಗಳಾಗಿರುವಾಗ

ರಾಸಾಯನಿಕ ವಸ್ತುಗಳಲ್ಲಿ ಇರುತ್ತದೆ. ಮಿಚಿಗನ್ ಸ್ಟೇಟ್ ವಿಶ್ವವಿದ್ಯಾಲಯದ ಡಾ। ಗೇಲ್ ರೀಗಲ್ ಇಲಿಗಳ ಮೇಲೆ ಸತತ ಪ್ರಯೋಗ ನಡೆಸಿದರು. ಮೆದುಳಿನಲ್ಲಿರುವ ನಾರ್ ಎಪಿನೆಫ್ರಿನ್ ಎನ್ನುವ ರಾಸಾಯನಿಕ ವಸ್ತು ಮತ್ತು ಪ್ರಜನನ ಶಕ್ತಿಯ ನಡುವೆ ಇರುವ ಸಂಬಂಧವನ್ನು ತೋರಿಸಿದರು. ಇದು ಕಡಿಮೆಯಾದಂತೆ ಪ್ರಜನನ ಶಕ್ತಿಯೂ ಕುಂದುತ್ತದೆ. ಮುದಿ ಹೆಣ್ಣು ಇಲಿಗಳಿಗೆ ನಾರ್ ಎಪಿನೆಫ್ರಿನ್ ಹೆಚ್ಚು ಉತ್ಪಾದನೆಯಾಗುವಂತೆ ಕೃತಕವಾಗಿ ಪ್ರಚೋದಿಸಿದಾಗ ಅದು ಹರಯದ ಇಲಿಯಂತೆ ಆರೋಗ್ಯ ಪೂರ್ಣ ಮರಿಗಳನ್ನು ಹಾಕಿತು. ಇಂತಹುದೇ ಪ್ರಯೋಗವನ್ನು ಮುದಿ ಗಂಡು ಇಲಿಗಳ ಮೇಲೆ ಮಾಡಿದಾಗ ಅದೂ ಯಶಸ್ವಿಯಾಯಿತು.

ಮನುಷ್ಯನ ಮೆದುಳಿನಲ್ಲೂ ನಾರ್ ಎಪಿನೆಫ್ರಿನ್ ಇದೆ. ಆದರ ಕಾರ್ಯ ಚಟುವಟಿಕೆ ನಮಗೆ ಬಹಳ ತಿಳಿದಿದೆ. ಕೃತಕವಾಗಿಅದನ್ನು ಪ್ರಚೋದಿಸುವ ವಿಧಾನಗಳೂ ತಿಳಿದಿವೆ. ಆದರೆ ಅದನ್ನು ಪ್ರಜನನ ಶಕ್ತಿ ಮತ್ತು ವ್ಯಾಪ್ತಿಯನ್ನು ಹೆಚ್ಚಿಸುವಲ್ಲಿ ಉಪಯೋಗಿಸಿ ನೋಡಿಲ್ಲ. ಮುಂದೆ ಒಂದು ದಿನ ಯಾವುದೇ ಪಾರ್ಶ್ವ ಪರಿಣಾಮಗಳಿಲ್ಲದೆ ಪ್ರಜನನ ಶಕ್ತಿಯನ್ನು ಹೆಚ್ಚಿಸುವ ಕಾಲ ಬರುತ್ತದೆ. ಅದೇ ವೇಳೆಗೆ ದೀರ್ಘಾಯಸ್ಸಿನ ಗುಳಿಗೆಗಳು ಲಭ್ಯವಿದ್ದರಂತೂ ಜೀವನವು ಮತ್ತಷ್ಟು ರೋಚಕವಾಗುತ್ತದೆ. ಈಗಾಗಲೇ ಜನ ಸಂಖ್ಯಾ ಸ್ಫೋಟದಿಂದ ಭೂಮಿ ನಡುಗುತ್ತಿದೆ. ಇಂತಹ ಸಂದರ್ಭದಲ್ಲಿ ಇಂತಹ ಸಂಶೋಧನೆಗಳು ನಡೆಯಬೇಕೆ? ಎಂದರೆ ಅದಕ್ಕೆ ಉತ್ತರವನ್ನು ಈ ಪರಿಮಿತ ಲೇಖನದಲ್ಲಿ ನೀಡುವುದು ಕಷ್ಟ.

### ಎಂಡಾರ್ಟರೆಕ್ಟಮಿ

ಆಯಸ್ಸನ್ನು ೧೨೦ ವರ್ಷಗಳವರೆಗೆ ಹಿಗ್ಗಿಸಿ, ಮುದಿತನದ ಲಕ್ಷಣಗಳೆಲ್ಲ ೯೦ಕ್ಕೇ ಬರುವಂತಾದರೆ, ಉಳಿದ ೩೦ ವರ್ಷಗಳನ್ನು ಅರಳು-ಮರಳು ಸ್ಥಿತಿಯಲ್ಲಿ ಕಳೆಯಲು ಯಾರು ತಾನೇ ಇಷ್ಟ ಪಡುತ್ತಾರೆ?

ಮಿದುಳಿಗೆ ರಕ್ತಸರಬರಾಜು ಕೆರೋಟಿಡ್ ಎಂಬ ಒಂದು ಜೊತೆ ರಕ್ತನಾಳಗಳ ಮುಖಾಂತರ ನಡೆಯುತ್ತದೆ. ವಯಸ್ಸಾಗುತ್ತಿದ್ದಂತೆ ಈ ರಕ್ತನಾಳಗಳ ಒಳಭಾಗದಲ್ಲಿ ಕೊಬ್ಬಿನಂಶ ಶೇಖರವಾಗಿ, ನಾಳದ ವ್ಯಾಸ ಕುಗ್ಗಿ ಹರಿಯುವ ರಕ್ತದ ಪ್ರಮಾಣವೂ ಕುಗ್ಗುತ್ತದೆ. ಹೀಗಾಗಿ ಮೆದುಳಿಗೆ ಕ್ರಮೇಣ ಉಪವಾಸವಾಗುವುದರಿಂದ ಮರೆವು ಆರಂಭವಾಗುತ್ತದೆ. ನೆನಪುಗಳು ಮುಗ್ಗರಿಸುತ್ತವೆ.

ಅಟ್ಲಾಂಟ ಎಮೊರಿ ವಿಶ್ವವಿದ್ಯಾಲಯದ ಡಾ। ಸಿ. ಡಾಯಲ್ ಹೇಯನ್ಸ್ ಒಂದು ಶಸ್ತ್ರಚಿಕಿತ್ಸೆಯನ್ನು ರೂಪಿಸಿದರು. ಅದುವೇ ಎಂಡಾರ್ಟರೆಕ್ಟಮಿ. ಕೆರೋಟಿಡ್ ರಕ್ತನಾಳಗಳ ಒಳಭಾಗದಲ್ಲಿ ಹೆಪ್ಪುಗಟ್ಟಿರುವ ಕೊಬ್ಬಿನಂಶವನ್ನೆಲ್ಲ ಕೆರೆದು ಶುಚಿಗೊಳಿಸಿ ನಾಳದ ವ್ಯಾಸವನ್ನು ಮೊದಲಿನ ಮಟ್ಟಕ್ಕೆ ತರಲೆತ್ನಿಸುವ ಶಸ್ತ್ರಚಿಕಿತ್ಸೆ ಇದು.

೫೦ ವರ್ಷಕ್ಕಿಂತ ಕಡಿಮೆ ವಯಸ್ಸಿನವರಲ್ಲಿ ೧೦% ಜನ, ೫೦ಕ್ಕಿಂತ ಹೆಚ್ಚಿನವರಲ್ಲಿ ೪೦% ಜನ, ತಮ್ಮ ಕ್ಯಾರೋಟಿಡ್ ನಾಳಗಳ ವ್ಯಾಸದಲ್ಲಿ ಏರುಪೇರನ್ನು ಹೊಂದಿರುವ ಕಾರಣ ಮರೆವು ಸಾಮಾನ್ಯವಾಗಿ ನಡುವಯಸ್ಸಿನಲ್ಲಿ ಆರಂಭವಾಗುತ್ತದೆ.

ಹೇಯನ್ಸ್ ಎಂಡಾರ್ಟರೆಕ್ಟಮಿಯನ್ನು ೫೭ರಿಂದ ೮೦ ವರ್ಷದವರೆಗಿನ ಅನೇಕ ರೋಗಿಗಳಿಗೆ ಮಾಡಿದರು. ಶಸ್ತ್ರಚಿಕಿತ್ಸೆಯ ನಂತರ ಅವರ ವ್ಯಕ್ತಿತ್ವವೆ ಬದಲಾಯಿತು. ಅವರ I. Q. ಹೆಚ್ಚಿತು. ಮಾತನಾಡುವುದು, ವಿಚಾರವನ್ನು ಗ್ರಹಿಸುವುದು, ವಿಶ್ಲೇಷಿಸುವುದು ಎಲ್ಲವೂ ಉತ್ತಮವಾಯಿತು.

ಹೇಯನ್ಸ್ ಹೇಳುತ್ತಾರೆ: ಕಾಲ ಹೆಚ್ಚುವುದರಿಂದ ಮುದಿತನ ಮೆದುಳಿನ ಜೀವಕೋಶಗಳಿಗೆ ಬರಲಾರದು. ದೇಹದಲ್ಲಿರುವ ಎಲ್ಲ ಜೀವಕೋಶಗಳಿಗಿಂತಲೂ ಅವು ಗಟ್ಟಿಮುಟ್ಟಿನವು. ಮೆದುಳಿಗೆ ರಕ್ತ ಸರಬರಾಜು ಕಡಿಮೆಯಾದರೆ ಸಹಜವಾಗಿ ಆಮ್ಲಜನಕ, ಗ್ಲೂಕೋಸ್ ಮುಂತಾದ ಜೀವನಾವಶ್ಯಕ ಪದಾರ್ಥಗಳೂ ಕಡಿಮೆ ಆಗುತ್ತವೆ. ಇದೇ ವೃದ್ಧಾಪ್ಯಕ್ಕೆ ಕಾರಣವಾಗಬಹುದು. ಎಂಡಾರ್ಟರೆಕ್ಟಮಿಯನ್ನು ಇಂದು ಪಾರ್ಶ್ವವಾಯುವನ್ನು ತಡೆಗಟ್ಟಲು ಮಾತ್ರ ಬಳಸುತ್ತಾರೆ. ವೃದ್ಧಾಪ್ಯವನ್ನು ತಡೆಗಟ್ಟಲು ಈ ಶಸ್ತ್ರಚಿಕಿತ್ಸೆಯನ್ನು ಉಪಯೋಗಿಸುವ ಕಾಲ ಮುಂದೊಂದು ದಿನ ಬರಬಹುದು.

### ಉಪಸಂಹಾರ

ಮುದಿತನದಿಂದ ಸಾವು ಬರುವುದು ಮನುಷ್ಯ, ಮನುಷ್ಯನ ಸಾಕುಪ್ರಾಣಿಗಳ ಮತ್ತು ಪ್ರಾಣಿಸಂಗ್ರಹಾಲಯದ ಪ್ರಾಣಿಗಳಿಗೆ ಮಾತ್ರ ಸೀಮಿತವಾಗಿದೆ. ಕಾಡು ಪ್ರಾಣಿಗಳು ವಯಸ್ಸಾಗಿ ಸಾಯುವುದು ಅಪರೂಪ. ಅವು ಸಾಮಾನ್ಯವಾಗಿ ಮತ್ತೊಂದು ಪ್ರಾಣಿಗೆ ಬೇಟೆಯಾಗುತ್ತವೆ, ಇಲ್ಲವೇ ರೋಗರುಜಿನಗಳಿಗೆ ತುತ್ತಾಗಿ ಸಾಯುತ್ತವೆ.

ಜೀವಶಾಸ್ತ್ರದ ದೃಷ್ಟಿಯಿಂದ ಮಕ್ಕಳನ್ನು ಪಡೆದ ನಂತರ ಮನುಷ್ಯಜನ್ಮ ನಿಷ್ಪ್ರಯೋಜಕ. ೪೦ ವರ್ಷಗಳ ನಂತರ ಮನುಕುಲ ಮುಂದುವರೆಸಲು ಅವನಿಂದ ಸಾಧ್ಯವಿಲ್ಲ. ಬಿಡ್ಡರ್ ೧೯೨೫ರಲ್ಲಿ ನುಡಿದರು : ''ಕಾಡು ಮನುಷ್ಯ ೩೭ ವರ್ಷಗಳ ಕಾಲಬದುಕಿದ. ಈಗವನ ಮಗ ಬೆಳೆದು ತನ್ನ ಮಕ್ಕಳ ಯೋಗ ಕ್ಷೇಮವನ್ನು ವಹಿಸಲು ಸಮರ್ಥನಿದ್ದಾನೆ. ಹಾಗಿರುವಾಗ ಇವನೇಕೆ ಬದುಕಿರಬೇಕು?''

ಮನುಷ್ಯ ವೇದಾಂತ ನುಡಿಯುತ್ತಾನೆ, ಅದನ್ನೊಪ್ಪುವುದಿಲ್ಲ. ಒಪ್ಪಿದರೂ ಪಾಲಿಸುವುದಿಲ್ಲ. ಪುರಾಣವಿರುವುದು ಹೇಳುವುದಕ್ಕೆ, ಬದನೆಕಾಯಿಯಿರುವುದು ತನ್ನುವುದಕ್ಕಲ್ಲವೆ ?

ವಯಸ್ಸಾಗುವುದನ್ನು ತಡೆಗಟ್ಟಿ ದೀರ್ಘಾಯಸ್ಸನ್ನು ನೀಡುವಂತಹ ಒಂದು ಗುಳಿಗೆ ಮುಂದೊಂದು ದಿನ ಬರುತ್ತದೆ. ಆಗ ಬದುಕು ಖಂಡಿತ ಭಿನ್ನವಾಗಿರುತ್ತದೆ. ಸಾಮಾಜಿಕ, ಆರ್ಥಿಕ ಧಾರ್ಮಿಕ ರೀತಿನೀತಿಗಳಲ್ಲಿ ಅಪಾರ ಬದಲಾವಣೆಗಳೂ ಆಗುತ್ತವೆ. ಅವು ಹೇಗಿರಬಹುದೆಂಬ ಭವಿಷ್ಯವನ್ನು ಓದಿ ನೋಡಿ

ದೀರ್ಘಾಯಸ್ಸು ಬೇಕೆ ಬೇಡವೇ ಎಂದು ನೀವೇ ನಿರ್ಧರಿಸಿ.

(ಮುಂದುವರಿಯುವುದು)



# ಹೇನು ತೊಂದರೆಗೆ ಏನು ಮದ್ದು?

**ಹೇನು ಎಂಬ ಪರಾವಲಂಬಿ ಜೀವಿಯು ಪರಪೀಡನೆಗೆ ನಮ್ಮ ತಲೆಯಲ್ಲಿ ಸೇರಿದಾಗ ಕೂದಲ ಕಾಡಿಗೆ ಅದೇ ರಾಜ. ಅದರ ಬಗೆಗಿನ ಅಜ್ಞಾನವೇ ಅದು ಹಬ್ಬಲು ಮುಖ್ಯ ಕಾರಣ. ಅದರ ಸಾಮ್ರಾಜ್ಯವನ್ನು ನೀವು ಒಂದೇ ದಿನದಲ್ಲಿ ಗೆದ್ದುಕೊಳ್ಳುವುದು ಸಾಧ್ಯವಿದೆ.**

ಹೇನನ್ನು ಪರಾವಲಂಬಿ (Parasite) ವರ್ಗಕ್ಕೆ ಸೇರಿಸಿದ್ದಾರೆ. ಮಾನವ ಇಲ್ಲವೇ ಪ್ರಾಣಿಗಳ ದೇಹವನ್ನಲಂಬಿಸಿ, ಅಲ್ಲಿರುವುದನ್ನು ತಿಂದು ಬದುಕಿ, ವಂಶಾಭಿ ವೃದ್ಧಿ ಮಾಡುವ ಜಾತಿಯವು, ಇವು. ಪ್ರತ್ಯೇಕವಾಗಿ ಬದುಕಲಾರವು.

ಇಂಥ ನಾಗರಿಕ ಕಾಲದಲ್ಲೂ ಹೇನುಗಳ ಆಧಿಕ್ಯವು ಮಾನವನ ಮೇಲೆ ಮುಂದುವರಿದೇ ಇದೆ. ಆದೂ ಗಂಡಸರಿಗಿಂತ ಹೆಂಗಸರಲ್ಲಿ ಅದು ನಿರಂತರನಂಟನ್ನು ಹೊಂದಿದೆ. ಕೆಲವು ಎಳೆಯ ಬಾಲೆಯರಿಗಂತೂ ಬೇರೆ ಆರೋಗ್ಯ ಸಮಸ್ಯೆಗಳಿಗಿಂತ ಹೇನಿನ ಸಮಸ್ಯೆಯೇ ದೊಡ್ಡದಾಗಿದೆ.

ನೈರ್ಮಲ್ಯದ ಕೊರತೆ, ಆರೋಗ್ಯ ಪರಿಸರ ಕೊರತೆಯೇ ನಮ್ಮನ್ನು ಹೇನು ಆಕ್ರಮಿಸಿಕೊಳ್ಳಲು ಕಾರಣವಾಗಿದೆ. ಅರಿವಿನ ಕೊರತೆಯ ಕಾರಣದಿಂದ ಹೇನು ಒಬ್ಬರಿಂದ ಇನ್ನೊಬ್ಬರಿಗೆ ಸೋಂಕಿಕೊಳ್ಳುತ್ತದೆ.

### ವಿಧಗಳು

ನೋಡಲು ನಸು ಕಪ್ಪಗೆ ಗುಡುಸೂಜಿಯ ತಲೆಯಷ್ಟೇ ಕಾಣುವ ಹೇನು ನೋಡಲು ಒಂದೇ ತರವಿದ್ದರೂ ಇದರಲ್ಲಿ ಮೂರು ವಿಧ.

೧. ತಲೆಹೇನು (Head Louse)
೨. ಒಡಲು ಹೇನು (Body Louse)
೩.. ಗುಂಜೆಲು ಹೇನು (Puleic Louse)

ಇವುಗಳಲ್ಲಿ ತಲೆಹೇನು ಮತ್ತು ಒಡಲು ಹೇನುಗಳು ಒಂದೇ ಮಾದರಿಯಿದ್ದರೂ, ಅವು ವಾಸ ಮಾಡುವ ಸ್ಥಳಗಳು ಬೇರೆಬೇರೆಯಾಗಿವೆ. ಇನ್ನು ಗುಂಜೆಲು ಹೇನು ವಾಸಿಸುವ ಸ್ಥಳ ಬೇರೆಯಷ್ಟೇ ಅಲ್ಲ, ಅದರ ದೇಹ ಸ್ವರೂಪವೂ ವಿಭಿನ್ನವಿರುತ್ತದೆ.

### ತಲೆ ಹೇನು

ತಲೆ ಹೇನು ಕೈಗೂಸಿನಿಂದ ಹಿಡಿದು, ಹಾಸಿಗೆ ಹಿಡಿದ ಮುದುಕರವರೆಗೂ ಬಾಧಿಸಬಲ್ಲದುದಾಗಿದೆ. ಸ್ವಚ್ಛತೆ ಇಲ್ಲದವರಲ್ಲೂ, ಆರೋಗ್ಯದ ಕಡೆಗೆ ಗಮನ ಕೊಡದವರಲ್ಲೂ ತಲೆ ಹೇನು ತನ್ನ ಸಾಮ್ರಾಜ್ಯ ಸ್ಥಾಪಿಸಿರುತ್ತದೆ.

ಪ್ರಾಕೃತಿಕವಾಗಿಯೇ ಹೆಂಗಸರ ತಲೆಗೂದಲು ಉದ್ದ, ದಟ್ಟ ಮತ್ತು ಹೆಚ್ಚಾಗಿಯೂ ಇರುವುದರಿಂದ ಅದರ ಸ್ವಚ್ಛತೆ ಸುಲಭವಾದುದಲ್ಲ. ಹಾಗಾಗಿಯೇ ಗಂಡಸರಿಗಿಂತ ಹೆಂಗಸರಲ್ಲಿ ಹೇನು ಹೆಚ್ಚಾಗಿ ಕಂಡು ಬರುವುದು.

ಒಂದು ಮನೆಯಲ್ಲಿ ಒಬ್ಬರ ತಲೆಯಲ್ಲಿ ಹೇನಾಯಿತೆಂದರೆ, ಮುಂದಿನ ಹದಿನೈದು ದಿನಗಳಲ್ಲಿ ಅದು ಎಲ್ಲರ ತಲೆಗೂ ಹಬ್ಬಿಬಿಡುತ್ತದೆ. ಹೇನು ಇರುವವ ರೊಡನೆ ತೀರಾ ಸನಿಹದಿಂದ ವ್ಯವಹರಿಸುವುದರಿಂದ ಹೇನು ಒಬ್ಬರಿಂದೊಬ್ಬರಿಗೆ ಹಬ್ಬುತ್ತದೆ.

ಶಾಲೆಯಲ್ಲಿ ಮಕ್ಕಳು ತುಂಬ ಅನ್ಯೋನ್ಯವಾಗಿ ಓಡಿಯಾಡುವುದರಿಂದಾಗಿ ಹೇನು ಒಬ್ಬರಿಂದೊಬ್ಬರಿಗೆ ಹಬ್ಬುತ್ತದೆ. ಮನೆಯಿರಲಿ, ವಸತಿಗೃಹ- ದೇವಾಲಯಗಳಂಥ ಸಾರ್ವಜನಿಕ ಸ್ಥಳವಿರಲಿ, ತೀರಾ ಹತ್ತಿರ ಹತ್ತಿರವಾಗಿ ಮಲಗಿದಾಗ, ಹೇನುಗಳು ಒಬ್ಬರ ತಲೆ ಯಿಂದ ಇನ್ನೊಬ್ಬರ ತಲೆಗೆ ಹಬ್ಬಿಬಿಡುತ್ತವೆ.

ಜೊತೆಗೆ ಹೇನು ಉಳ್ಳವರು ಬಳಸಿದ ಬಾಚಣಿಗೆ, ರಿಬ್ಬನ್, ತಲೆದಿಂಬು, ಹಾಸಿಗೆ, ಬೆಡ್‌ಶೀಟ್, ಬಟ್ಟೆ ಮೊದಲಾದವುಗಳನ್ನು ಬೇರೆಯವರು ಬಳಸಿದಾಗ ಹೇನು ಅವರಿಗೂ ಅಂಟುತ್ತದೆ.

### ತಲೆತುಂಬ ಮೊಟ್ಟೆಗಳು

ಅದೂ ಅಲ್ಲದೆ ಒಬ್ಬರ ತಲೆಯಲ್ಲಿ ಹೇನಿನದೇ ರಾಜ್ಯಭಾರ ನಡೆದಿದ್ದರೆ, ಬಲವಾದ ಗಾಳಿಯಿಂದಲೂ ಇದು ಒಬ್ಬರಿಂದೊಬ್ಬರಿಗೆ ಹಬ್ಬುತ್ತದೆ.

ಈ ಹೇನುಗಳು ತಲೆಯಲ್ಲಿರುವ ಕೊಳೆ ಮತ್ತು ಚರ್ಮದಿಂದ ರಕ್ತಹೀರಿ ಬದುಕುತ್ತವೆ. ಬಳಿಕ ಅವು ತಲೆಕೂದಲ ಬುಡದಲ್ಲಿ ಮೊಟ್ಟೆಯಿಡುತ್ತವೆ. ಒಂದೆರ ಡಲ್ಲ, ಒಂದು ಹೇನು ಒಂದು ವಾರದಲ್ಲಿ ಸುಮಾರು ೩೦೦ ಮೊಟ್ಟೆಗಳನ್ನು ಇಡುತ್ತದೆ.

ಈ ಮೊಟ್ಟೆಗಳನ್ನು ನಾವು ಕಣ್ಣಿನಿಂದ ನೋಡಬಹುದು. ಹೇನು ಜಾಸ್ತಿ ಇರುವವರ ತಲೆಕೂದಲನ್ನು ತುಸು ಸರಿಸಿ ಸೂಕ್ಷ್ಮವಾಗಿ ನೋಡಿದರೆ ಬಿಳಿ ಹೊಟ್ಟಿನಂತೆ ಒಂಟಿಯಾಗಿ ಇಲ್ಲವೇ ಗೊಂಜಲಿನಂತೆ ಮೊಟ್ಟೆಗಳಿರುವುದನ್ನು ಕಾಣಬಹುದು.

ಈ ಮೊಟ್ಟೆಗಳು ಇಡಲ್ಪಟ್ಟ ಒಂದು ವಾರದಲ್ಲಿ ಲಾರ್ವಾ ಮರಿಹೇನುಗಳು ಹೊರಬರುತ್ತವೆ. ಇವನ್ನು ಕೆಲವೆಡೆ ಚೀರು ಹೇನು, ಬೀರು ಹೇನು, ಎಂದಿತ್ಯಾದಿಯಾಗಿ ಹೇಳುವುದಿದೆ. ಇದು ಹುಟ್ಟಿದ ಒಂದು ವಾರ ದಲ್ಲಿ ಹಿರಿಹೇನಾಗಿ ಬೆಳೆಯುತ್ತದೆ.

### ಲಕ್ಷಣಗಳು

ಒಬ್ಬರ ತಲೆಯಲ್ಲಿ ಹೇನು ಮನೆ ಮಾಡಿತು ಎನ್ನುವುದರ ಸೂಚನೆ, ತಲೆ ತುರಿಕೆಯಿಂದ ಆರಂಭವಾಗು ತ್ತದೆ. ಹೇನು ಕಡಿದ ಜಾಗದಲ್ಲಿ ಅದರ ನಂಜುಜೊಲ್ಲು ಈ ರೀತಿಯ ಕೆರೆತವನ್ನುಂಟುಮಾಡುತ್ತದೆ. ನಮಗರಿ ವಿಲ್ಲದೆಯೇ ನಾವು ತಲೆ ಕೆರೆದುಕೊಳ್ಳುವುದಕ್ಕೆ ಕಾರಣ ಇದೇ ಆಗಿದೆ.

ಆರಂಭದಲ್ಲಿ ಇಂಥ ಕೆರೆತವು ರಾತ್ರಿ ಹೊತ್ತಿನಲ್ಲಿ ಮಾತ್ರವೇ ಇರುತ್ತದೆ. ದಿನಗಳೆದಂತೆ ಹಗಲಿರುಳೆನ್ನದೆ ಕೆರೆತ ಉಂಟಾಗುತ್ತದೆ. ಹಾಗೆ ಕೆರೆದಾಗ ಉಗುರುಸಂದಿಯಲ್ಲಿರುವ ಕೊಳೆ ಮತ್ತು ಕ್ರಿಮಿಗಳು ತಲೆ ಚರ್ಮಕ್ಕೆ ಸೇರುತ್ತವೆ. ಅದರ ಜೊತೆಗೆ ಸಣ್ಣ ಸಣ್ಣ ಗೀರಲು ಗಳುಂಟಾಗಿ ಚರ್ಮದುರಿತ (Dermatitis) ಉಂಟಾಗುತ್ತದೆ.

ಇದರಲ್ಲಿ ಬ್ಯಾಕ್ಟೀರಿಯಾಗಳು ಸೇರಿ ಹುಣ್ಣುಗಳಾಗುತ್ತವೆ. ಚಿಕ್ಕಮಕ್ಕಳ ತಲೆಯಲ್ಲಿ ಹುಣ್ಣುಗಳಾಗಲಿಕ್ಕೆ ಬಹುಪಾಲು ಹೇನುಗಳೇ ಕಾರಣವಾಗಿರುತ್ತವೆ. ಹೀಗೆ ಹುಣ್ಣುಗಳಾದಾಗ, ಕತ್ತು ನೆರಿಗೆ ಕಟ್ಟುತ್ತದೆ. ಜ್ವರಬರುತ್ತದೆ. ಹೀಗೆ ಹಲವಾರು ತೊಂದರೆಗಳು ಒಡಗೂಡುತ್ತವೆ.

ಇದಲ್ಲದೆ ಹಲವು ರೋಗಕ್ರಿಮಿಗಳನ್ನು ಹೊತ್ತೊಯ್ಯುವ ವಾಹಕಗಳಾಗಿಯೂ ಈ ಹೇನುಗಳು ಕೆಲಸ ಮಾಡುತ್ತವೆ. ಉದಾಹರಣೆಗೆ ಟೈಪಸ್ (Typpus) ಎಂಬ ಕರುಳುಹುಣ್ಣು ನಮಗೆ ಬರುವುದಕ್ಕೆ ಹೇನು ಗಳೇ ಕಾರಣವಾಗಿವೆ.

ಇದೇ ರೀತಿ ಮರುಕಳಿತ ಜ್ವರ (Relapsing fever) ಮತ್ತು ಟ್ರೆಂಚ್ ಜ್ವರ (Trench fever) ಗಳು ಬರುವುದಕ್ಕೂ ಹೇನುಗಳೇ ಮೂಲ ಕಾರಣವಾಗಿವೆ. ಇದೆಲ್ಲ ತಲೆಹೇನಿನ ಪುರಾಣ ವಾಯಿತು. ಇನ್ನು ಒಡಲ ಹೇನನ್ನು ಗಮನಿಸೋಣ.

### ಒಡಲ ಹೇನು

ಈ ಹೇನು ದೇಹ ಭಾಗದಲ್ಲಿರುತ್ತದೆ. ಎದೆ, ಬೆನ್ನುಗಳಲ್ಲಿ ಹೆಚ್ಚು ರೋಮವಿರುವವರು ಇದರ ಬಗೆಗೆ ಎಚ್ಚರಿಕೆಯಿಂದಿರಬೇಕು. ಕಂಕುಳು, ಹೊಕ್ಕುಳು, ಮುಂತಾದ ಸ್ಥಳಗಳನ್ನು ಸ್ವಚ್ಛಗೊಳಿಸುವುದು ತಪ್ಪಿದರೆ ಈ ಹೇನು ಹಬ್ಬುವ ಅವಕಾಶಗಳು ಹೆಚ್ಚು.

ಕೆಲವರಿಗೆ ಕಣ್ಣಿನ ರೆಪ್ಪೆ, ಹುಬ್ಬುಗಳಂಥ ಜಾಗಗಳಲ್ಲೂ ಕೂಡ ಈ ಹೇನು ಬೆಳೆಯಲವಕಾಶವುಂಟು. ಆದರೆ ತಲೆ ಹೇನಿನಷ್ಟು ಸಂಖ್ಯೆಯಲ್ಲಿ ಈ ಹೇನು ಬೆಳೆಯಲಾರದು. ಆದರೂ ತಲೆ ಹೇನು ತಲೆಯಲ್ಲಿ ಮಾಡ ಬಹುದಾದ ಎಲ್ಲ ತೊಂದರೆಗಳನ್ನೂ ಈ ಹೇನು ದೇಹ ದಲ್ಲಿ ಮಾಡಬಲ್ಲುದು.

### ಗುಂಜೆಲು ಗೊಂಚಲು

ಇನ್ನು ಗುಂಜೆಲು ಹೇನು ಇದು ಹೆಣ್ಣು ಮತ್ತು ಗಂಡುಗಳ ಜನನಾಂಗ ಪ್ರದೇಶದಲ್ಲಿ ಹಾಗೂ ಗುದ ಮುಂದಾಣ (Perineum) ಜಾಗಗಳಲ್ಲಿ ಬೆಳೆಯುತ್ತವೆ. ಈ ಹೇನಿನಿಂದ ನಮಗೆ ಹೇಳಿಕೊಳ್ಳುವಂಥ ತೊಂದರೆಗಳ್ಯಾವುವೂ ಇರುವುದಿಲ್ಲ. ತುರಿಕೆಯೂ ತಲೆಹೇನು ತಂದಷ್ಟು ಇರುವುದಿಲ್ಲ.

ಇದು ಎಲ್ಲಿಗೂ ತೆವಳಿಕೊಂಡು ಹೋಗುವುದಿಲ್ಲ. ಜನನಾಂಗ ಪ್ರದೇಶದ ರೋಮಗಳಲ್ಲಿ ಅಂಟಿಕೊಂಡು ಬೆಳೆಯುತ್ತವೆ. ಇದು ರೋಗವನ್ನೂ ಹರಡದು. ಆದರೆ ಸಂಖ್ಯೆಯಲ್ಲಿ ಹೆಚ್ಚಾದರೆ ಅಸಹ್ಯವಾದ್ದರಿಂದ ಇದರ ಹತೋಟಿ ಮಾಡಬೇಕಾಗುತ್ತದೆ. ಹಳ್ಳಿಗಳಲ್ಲಿ ಹೇನು ಹೆಕ್ಕುವ ಸ್ಪೆಶಲಿಸ್ಟ್ ಅಜ್ಜಿಯರನ್ನು ಕಾಣಬಹುದು. ಇವರು ಎಷ್ಟು ಜನಪ್ರಿಯರಿರುತ್ತಾರೆಂದರೆ ಹಗಲಿಡೀ ಹುಡುಗಿಯರು ನನ್ನ ತಲೆ, ನನ್ನ ತಲೆ ಎಂದು ಇವರ ಮಡಿಲು ಸೇರುತ್ತಿರುತ್ತಾರೆ.

ಆದರೆ ಇಂಥ ಸ್ಪೆಶಲಿಸ್ಟ್‌ಗಳು ಹಿಡಿದು ಹೊಸಕುವಂಥ ಸಾಮಾನ್ಯ ಚಿಕಿತ್ಸೆಗಳಿಂದೆಲ್ಲ ಹೇನುನಾಶವಾಗಲಾರದು. ತಲೆಗೆ ಹೇನು ಅಡಿಯಿಟ್ಟಿತೆಂದರೆ ವೈದ್ಯರ ಸಲಹೆಯಂತೆ ಸೂಕ್ತ ಹೇನು ನಾಶವಾಗುವ ಮದ್ದನ್ನು ಬಳಸಬೇಕು.

### ಚಿಕಿತ್ಸೆ

ತಲೆಹೇನು, ಒಡಲಹೇನು, ಜನನಾಂಗ ರೋಮಗಿಗಳ ಹೇನುಗಳನ್ನು ನಿವಾರಿಸಲು ಮೆಲಾಥಿಯಾನ್, ಕಾರ್ಬೊರಿಲ್, ಫೆರಿಕ್ರಿಯಾ ಮುಂತಾದ ಔಷಧಗಳಿವೆ. ವೈದ್ಯರ ಸಲಹೆ ಮೇರೆಗೆ ಇವನ್ನು ಬಳಸಬಹುದು.

ಇದಕ್ಕಿಂತಲೂ ಸುಲಭವಾಗಿ ಮನೆಯಲ್ಲೇ ಮಾಡಬಹುದಾದ ಔಷಧಿಯೊಂದಿದೆ. ಆಲಿವ್ ಎಣ್ಣೆ ಮತ್ತು ಸೀಮೆಯೆಣ್ಣೆಯನ್ನು ಸಮಪ್ರಮಾಣದಲ್ಲಿ ಬೆರೆಸಿಕೊಳ್ಳಬೇಕು. ೧೫ ಮಿ. ಲೀ. ನಷ್ಟು ಇದನ್ನು ತಲೆಗೆ ಹಚ್ಚಿಕೊಳ್ಳಬೇಕು. ೨ ಗಂಟೆಯ ಬಳಿಕ ಬಿಸಿನೀರಿ ನಿಂದ ಸ್ನಾನ ಮಾಡಬೇಕು.

ಇದರಿಂದ ತಲೆ ಹೇನುಗಳು ನಾಶವಾಗುತ್ತವೆ. ಸೀಮೆಯೆಣ್ಣೆಯ ವಾಸನೆಹೋಗಲು ಆ ಬಳಿಕ ಒಳ್ಳೆಯ ಪರಿಮಳದ ಸಾಬೂನು ಹಚ್ಚಿ ತಲೆ ತೊಳೆದು ಕೊಳ್ಳಬೇಕು. ಒಂದು ಎಚ್ಚರಿಕೆ, ಈಗಾಗಲೇ ಕೂದಲು ದುರುತ್ತಿರುವವರು ಈ ಕ್ರಮ ಅನುಸರಿಸಬಾರದು. ಕೂದಲು ಇನ್ನೂ ಹೆಚ್ಚು ಉದುರುತ್ತದೆ.

ತಿಂಗಳಾನುಗಟ್ಟಲೆ ಹೇನುಗಳನ್ನು ಗಮನಿಸದೆ ಬಿಟ್ಟು ಬಿಟ್ಟವರು ತಲೆ ಮತ್ತು ಗುಪ್ತಾಂಗಗಳ ಬಳಿಯ ಕೂದಲುಗಳನ್ನೆಲ್ಲ ಬೋಳಿಸಿಬಿಡುವುದೊಳಿತು. ಆಗ ಮಾತ್ರ ಮೊಟ್ಟೆಗಳಿಂದ ಮರಿಗಳು ಬಂದು ಮತ್ತೆ ತೊಂದರೆ ತರುವುದನ್ನು ತಡೆಯಬಹುದು.

### ತಡೆಗಟ್ಟುವಿಕೆ

ತಲೆಯನ್ನು ಶುದ್ಧವಾಗಿಟ್ಟುಕೊಳ್ಳುವುದರಿಂದ ತಲೆಗೆ ಹೇನು ಹತ್ತದಂತೆ ತಡೆಯಬಹುದು. ಪ್ರತಿದಿನ ಬೆಳಗ್ಗೆ ಸ್ನಾನ ಮಾಡುವಾಗ ಶಾಂಪೂ ಇಲ್ಲವೇ ಸಾಬೂನು ನೊರೆಯಿಂದ ತಲೆಗೂದಲನ್ನು ತೊಳೆಯಬೇಕು.

ದೇಹವನ್ನು ಯಾವಾಗಲೂ ಶುದ್ಧವಾಗಿಟ್ಟುಕೊಳ್ಳಬೇಕು. ಮುಖ್ಯವಾಗಿ ಕಂಕುಳು, ಹೊಕ್ಕುಳು, ಜನ ನಾಂಗ ಭಾಗಗಳನ್ನು ಹೆಚ್ಚು ಗಮನವಿರಿಸಿ ಶುದ್ಧೀಕರಿಸಿ ಕೊಳ್ಳಬೇಕು.

ಬೇರೆಯವರ ಬಾಚಣಿಗೆ, ರಿಬ್ಬನ್, ತಲೆದಿಂಬು ಮೊದಲಾದವುಗಳನ್ನು ಬಳಸಬಾರದು. ಒಮ್ಮೆ ಹೇನು ಬಾಧೆಯಿಂದ ಬಾಧಿಸಲ್ಪಟ್ಟವರು ತಮ್ಮೆಲ್ಲ ಬಟ್ಟೆಗಳನ್ನೂ ಒಂದು ಬಾರಿ ಬಿಸಿನೀರಿನಿಂದ ನೆನಸಿ ಹಾಕಿ ತೆಗೆಯುವುದೊಳಿತು. ಬಳಿಕ ಇಸ್ತ್ರಿ ಹಾಕಿ ಧರಿಸಬೇಕು. ಶಾಲೆ, ಕಾಲೇಜು, ಬಿಡದಿಗಳಲ್ಲಿ ತಂಗುವವರು ಒಬ್ಬರಿಗೊಬ್ಬರು ತುಂಬ ಸಮೀಪದಲ್ಲಿ ಮಲಗುವುದನ್ನು ತಪ್ಪಿಸಬೇಕು. ಉದ್ದನೆಯ ಕೂದಲಿರುವವರು ತಮ್ಮ ಕೂದಲನ್ನು ಶ್ರಮವಹಿಸಿ ಶುದ್ಧವಾಗಿಟ್ಟಿರಬೇಕು.

ಸ್ವಚ್ಛತೆ, ಶುದ್ಧತೆ, ಆರೋಗ್ಯನಿಯಮಪಾಲನೆ ನಮ್ಮನ್ನು ಹೇನುಗಳಿಂದ ರಕ್ಷಿಸುತ್ತದೆ ಹಾಗೂ ಒಟ್ಟಾರೆ ಆರೋಗ್ಯವಂತರನ್ನಾಗಿಡುತ್ತದೆ.

### ಸಂಸಾರಕ್ಕೆ ಬೆಂಕಿ



ಆಸ್ಪತ್ರೆಯ ಹೊರರೋಗಿ ವಿಭಾಗದಲ್ಲಿ ತ್ವಚೆಯ ಲೈಂಗಿಕ ರೋಗ ವಿಭಾಗದ ಮುಖ್ಯಸ್ಥರು ಬಂದು ರೋಗಿಗಳ ತಪಾಸಣೆ ನಡೆಸುತ್ತಾ, ಅವರಿಗೆ ಸೂಕ್ತ ಸಲಹೆಗಳನ್ನು ಕೊಡುತ್ತ ಕೂತಿದ್ದರು. ಒಬ್ಬರಾದ ಮೇಲೆ ಒಬ್ಬ ರೋಗಿ ಬರುತ್ತಿಲಿದ್ದರು. ಒಬ್ಬ ರೋಗಿ ಜೋಲು ಮೋರೆ ಹಾಕಿಕೊಂಡು ಕುಂಟುತ್ತ ಬಂದು ವೈದ್ಯರ ಎದುರು ನಿಂತು, "ಸಾಹೇಬ್ರ, ಲಗು ಲಗು ನೋಡ್ರಿ" ಎಂದನು.

ವೈದ್ಯರು: "ಏನು ಎಂಥ ತೊಂದರೆ?" ಎಂದು ಕೇಳಿದರು.

ರೋಗಿ: "ಸಂಸಾರದೊಳಗೆಲ್ಲ ಬೆಂಕಿ ಬೀಳಾಕ ಹತ್ತೈತ್ರಿ".

ವೈದ್ಯರು: "ಏನು ಸರಿಯಾಗಿ ಇನ್ನೊಮ್ಮೆ ಹೇಳು ?"

ರೋಗಿ: "ಅದರೀ, ಸಂಸಾರದೊಳಗೆಲ್ಲ ಬೆಂಕಿ ಬೀಳುತ್ತಿದೆ ಅಂದೆನ್ರಿ"

ವೈದ್ಯರು: "ಅಲ್ಲೋ, ಎಲ್ಲ ಜನರು ಅಡ್ಡಾಡುತ್ತಿ ದ್ದಾರೆ, ವಾಹನ ಚಲಿಸುತ್ತಿವೆ, ಬೆಂಕಿ ಎಲ್ಲಿ ಬಿದ್ದಿದೆ?

ರೋಗಿ: ನನ್ನ ಸಂಸಾರದೊಳಗ್ರೀ. ಸಾಹೇಬ್ರ ಅನ್ನುತ್ತ ತನ್ನ ದೋತ್ರವನ್ನು ಬದಿಗೆ ಸರಿಸಿದನು. ಅದನ್ನು ನೋಡಿ ವೈದ್ಯರು ದಂಗಾಗಿ ಕುಳಿತರು. ಮಗ್ಗುಲಲ್ಲಿಯೇ ಉತ್ತರ ಕರ್ನಾಟಕದ ವೈದ್ಯರೊಬ್ಬರು, ಮೈಸೂರಿನ ಕಡೆಯ ವೈದ್ಯರಿಗೆ ರೋಗಿ ಹೇಳಿದ 'ಸಂಸಾರ' ಎಂದರೇನು ಎಂಬುದನ್ನು ನಗುತ್ತ ತಿಳಿಸಿದರು.

ನಿರೀಕ್ಷಿಸಿ !

# ಹೊಸ ಅಂಕಣ

## ಮಕ್ಕಳಿಗಾಗಿ ವಿಶೇಷವಾದ ಅಂಕಣ

ಆರೋಗ್ಯ ಮಾಹಿತಿಗಳು, ಓದುವ ಸರಿಯಾದ ವಿಧಾನಗಳು, ನೆನಪನ್ನು ಹೆಚ್ಚಿಸಿಕೊಳ್ಳಲು ಸಲಹೆಗಳು, ರಸಪ್ರಶ್ನೆ, ಕಥೆಗಳು, ಲೇಖನಗಳು, ಸ್ಪರ್ಧೆಗಳು ಇತ್ಯಾದಿ.

ಈ ವಿಶೇಷ ಅಂಕಣವನ್ನು ನಿಮಗಾಗಿ ಪ್ರಸ್ತುತಪಡಿಸಲಿದ್ದಾರೆ ರಾಜ್ಯ ಪ್ರಶಸ್ತಿ ವಿಜೇತ ಶಿಕ್ಷಕರಾದ

**ಶ್ರೀ ಸಂಪಟೂರು ವಿಶ್ವನಾಥ್**



# ನಡೆದಾಡುವ

## ಮಾನವ ದೇಹದೊ

ಮಾನವನ ಒಡಲು ವೈವಿಧ್ಯಮಯ ಚಿತ್ರ ವಿಚಿತ್ರ ಬಣ್ಣ ಬಣ್ಣದ ಕಲಾಕೃತಿಗಳ ಆಗರ. ನಾವೆಲ್ಲ ನಡೆದಾಡುವ ಆರ್ಟ್ ಗ್ಯಾಲರಿಗಳು! ಇದುವರೆಗೂ ಕೇವಲ ವೈದ್ಯರಿಗೆ ಮಾತ್ರ ನೋಡಲು ಸಿಗುತ್ತಿದ್ದ ಈ ಅಪೂರ್ವ ಕಲಾಕುಸುಮಗಳ ಒಂದು ನೋಟವನ್ನು ಇಲ್ಲಿ ನೀವೀಗ ನೋಡುತ್ತಿದ್ದೀರಿ.

ಇದುವರೆಗೆ ಕೇವಲ ವೈದ್ಯರ ಕಣ್ಣುಗಳಿಗೆ ಮಾತ್ರ ಕಾಣುತ್ತಿದ್ದ ದೃಶ್ಯ ವೈಭವವನ್ನು ಉಳಿದ ಜನತೆಗೂ ಒದಗಿಸಿದೆ ಸೂಕ್ಷ್ಮದರ್ಶಕದ ಛಾಯಾಚಿತ್ರಗ್ರಹಣ. ಅದರಲ್ಲೂ ಎಲೆಕ್ಟ್ರಾನ್ ಮೈಕ್ರೋಸ್ಕೋಪಿನ ಆವಿಷ್ಕಾರ ಒಡಲ ಅದ್ಭುತ ಲೋಕವನ್ನು ಎಲ್ಲರೆದುರು ತೆರೆದಿಡಲು ಇಂದು ನೆರವಾಗಿದೆ.

ಚಿತ್ರ ೧,೭,೮ ಮತ್ತು ೯ನ್ನು ನೋಡಿ. ಇದನ್ನು ''ಇಮ್ಯುನೋಫ್ಲೊರಸೆಂಟ್ ಲೈಟ್ ಮೈಕ್ರೋಗ್ರಾಫಿ'' ಎಂಬ ತಂತ್ರಜ್ಞಾನದ ನೆರವಿನಿಂದ ಚಿತ್ರಗಳನ್ನು ತೆಗೆದಿದ್ದಾರೆ ವೈದ್ಯ ವಿಜ್ಞಾನಿಗಳು. ನಮ್ಮ ಒಡಲ ಒಂದೊಂದು ಭಾಗಕ್ಕೆ ನಿರ್ದಿಷ್ಟವಾದ ಪ್ರತಿಕಾಯಗಳಿಗೆ, ಬಣ್ಣಗಟ್ಟಿದಾಗ, ಅವು ವರ್ಣ ವೈವಿಧ್ಯತೆಗಳನ್ನು ಒದಗಿಸುತ್ತವೆ. ಅವುಗಳ ಯಥಾವತ್ ಚಿತ್ರಗಳಿವು. ಉಳಿದ ಚಿತ್ರಗಳನ್ನೆಲ್ಲ ''ಸ್ಕ್ಯಾನಿಂಗ್ ಎಲೆಕ್ಟ್ರಾನ್ ಮೈಕ್ರೋಸ್ಕೋಪಿ'' ಯಿಂದ ತೆಗೆದಂತಹವು. ಈ ತಂತ್ರಜ್ಞಾನದಲ್ಲಿ ಬೆಳಕಿನ ಬದಲು ಎಲೆಕ್ಟ್ರಾನುಗಳನ್ನು ಬಳಸುತ್ತೇವೆ. ನಮ್ಮ ಬರಿಗಣ್ಣು ನೋಡಬಹುದಾದ ಅತ್ಯಂತ ಸೂಕ್ಷ್ಮ ಆಕೃತಿಗಿಂತಲೂ ೧೦,೦೦೦ ಪಟ್ಟು ಪುಟ್ಟದಾದ ರಚನೆಗಳನ್ನು ಮೂಡಿಸುವ ಅಪಾರ ಶಕ್ತಿಯನ್ನು ಹೊಂದಿದೆ ಈ ಎಲೆಕ್ಟ್ರಾನ್ ಮೈಕ್ರೋಸ್ಕೋಪು.

**ಈಗ ಕೆಲವು ಜೀವಂತ ಕಲಾಕೃತಿಗಳ ಪರಿಚಯವನ್ನು ಮಾಡಿಕೊಳ್ಳೋಣ.**

೧. ಒಂದು ಕಟ್ಟಡ ಇಟ್ಟಿಗೆಗಳಿಂದ ಕಟ್ಟಲ್ಪಡುವ ಹಾಗೆ, ನಮ್ಮ ದೇಹ ಜೀವಕೋಶಗಳಿಂದ ಆಗಿದೆ. ಜೀವಕೋಶಗಳ ಆಕೃತಿ, ರಚನೆ ಹಾಗೂ ಕೆಲಸ ವೈವಿಧ್ಯಮಯ. ಚರ್ಮ, ಅಸ್ಥಿ ಹಾಗೂ ಮೃದ್ವಸ್ಥಿಗಳ ರಚನೆಯಲ್ಲಿ ನಾರು ಎಳೆಕೋಶ (ಫೈಬ್ರೋಬ್ಲಾಸ್ಟ್) ಪ್ರಮುಖ ಪಾತ್ರವನ್ನು ವಹಿಸುತ್ತದೆ. ಇದು ಚಿತ್ರದ ಮಧ್ಯದಲ್ಲಿದೆ. ಉಳಿದ ಪುಟ್ಟ ಪುಟ್ಟ ಜೀವಕೋಶಗಳು ಕ್ಯಾನ್ಸರ್ ಕಣಗಳು. ಕಣಗಳ ಒಳಗಿರುವ ಬೀಜಗಳು ನೀಲಿಬಣ್ಣವನ್ನು ತಳೆದಿದ್ದರೆ, ಕೋಶದ್ರವ್ಯ ಕಿತ್ತಳೆ ವರ್ಣವನ್ನು ತಳೆದಿದೆ.

೨. ಕೆಂಪುರಕ್ತಕಣಗಳು ನಮಗೆಲ್ಲ ತಿಳಿದಿವೆ. ಹೆಚ್ಚೂ ಕಡಿಮೆ ಉದ್ದಿನವಡೆಗಳಂತೆ ಕಾಣುವ ಈ ಕಣ ಗಳು ಶ್ವಾಸಕೋಶಗಳಿಂದ ಆಮ್ಲಜನಕವನ್ನು ಒಯ್ದು ದೇಹದ ಪ್ರತಿಯೊಂದು ಜೀವಕೋಶಗಳಿಗೆ ತಲುಪಿಸು ತ್ತವೆ. ಉಪಾವಚಯದ (ಮೆಟಬಾಲಿಸಂ) ನಂತರ ಬಿಡುಗಡೆಯಾದ $Co_2$ನ್ನು ಮರಳಿ ಶ್ವಾಸಕೋಶಗಳಿಗೆ ಹಿಂದಿರುಗಿಸುತ್ತವೆ. ಹಾಗಾಗಿ ಈ ಕಣಗಳು ಒಂದೆಡೆ ನಿಲ್ಲುವುದಿಲ್ಲ. ಸದಾ ಚಲಿಸುತ್ತಿರುತ್ತವೆ. ಇವು ತಮ್ಮ ಜೀವಮಾನವಾದ ೧೨೦ ದಿನಗಳ ಅವಧಿಯಲ್ಲಿ ಸುಮಾರು ೯೦೦ ಮೈಲಿಗಳಷ್ಟು ದೂರವನ್ನು ಕ್ರಮಿಸು ತ್ತವೆ ನಮ್ಮ ದೇಹದ ರಕ್ತನಾಳಗಳೆಂಬ ರಸ್ತೆಗಳಲ್ಲಿ!

೩. ನಮಗೆ ಶಬ್ದ ಹೇಗೆ ಕೇಳಿಸುತ್ತದೆ?.....ಶಬ್ದದ ಅಲೆಗಳು ಹೊರ ಕಿವಿಯಲ್ಲಿರುವ ನಳಿಕೆಯಲ್ಲಿ ಹಾದು ಕಿವಿತಮಟೆಯನ್ನು ತಾಗುತ್ತವೆ. ತಮಟೆಯು ಆ ಸ್ಪಂದನಗಳನ್ನು ಮುದ್ಗರಾಸ್ಥಿ, ಸ್ಥೂಣಾಸ್ಥಿ ಮತ್ತು ಲಾಳಾಸ್ಥಿಗಳಿಗೆ ವರ್ಗಾಯಿಸುತ್ತದೆ. ನಂತರ ಅಲೆಗಳು ಒಳಗಿವಿಯಲ್ಲಿರುವ ಕಾರ್ಟಿಯ ಅಂಗ (ಆರ್ಗನ್ ಆಫ್ ಕಾರ್ಟಿ) ವನ್ನು ತಲುಪುತ್ತವೆ. ಇಲ್ಲಿ ಶಬ್ದದ ಅಲೆಗಳು ವಿದ್ಯುದಾವೇಗಗಳಾಗಿ ಬದಲಾಗುತ್ತವೆ ಹಾಗೂ ಮಿದುಳಿನ ಶ್ರವಣ ಕ್ಷೇತ್ರವನ್ನು ತಲುಪುತ್ತವೆ. ಆಗ ನಮಗೆ ಶಬ್ದ ಕೇಳಿಸುತ್ತದೆ! ಚಿತ್ರದ ಮೇಲುಭಾಗ ವನ್ನು ನೋಡಿ. ಅಲ್ಲಿ ನಾಲ್ಕು ಸಾಲು ಜೀವಕೋಶ ಗಳಿವೆ. ಇವೇ ರೋಮ ಕೋಶಗಳು. ಶಬ್ದ ತರಂಗಗ ಳನ್ನು ವಿದ್ಯುತ್ ಆವೇಗಗಳನ್ನಾಗಿ ಪರಿವರ್ತಿಸುವ ರಚನೆಗಳು.

೪. ನಮ್ಮ ಬೆರಳಿಗೆ ಗಾಯವಾದಾಗ, ರಕ್ತ ಹರಿಯ ಲಾರಂಭಿಸುತ್ತದೆ. ನೋಡ ನೋಡುತ್ತಿರುವಂತೆಯೇ ರಕ್ತ ಹೆಪ್ಪುಗಟ್ಟುತ್ತದೆ. ರಕ್ತ ಸ್ರಾವ ನಿಲ್ಲುತ್ತದೆ. ಇದೆಲ್ಲ ನಮ್ಮ ಅನುಭವಕ್ಕೆ ಬಂದಿರುವಂತಹ ವಿಷಯವೇ ಸರಿ. ಆದರೆ ರಕ್ತ ಹೇಗೆ ಹೆಪ್ಪುಗಟ್ಟುತ್ತದೆ, ಹೆಪ್ಪಿನ ರಚನೆ ಹೇಗಿರುತ್ತದೆ? ಇದು ಕುತೂಹಲಕರವಾಗಿದೆ. ಗಾಯವಾದಾಗ ಒಂದು ಹೊಸ ಪ್ರೋಟೀನ್ ಉತ್ಪಾದನೆ ಯಾಗುತ್ತದೆ. ಅದರ ಹೆಸರು ಫೈಬ್ರಿನ್. ಇದು ಒಂದು ಜಾಲವನ್ನು ರೂಪಿಸುತ್ತದೆ. ಈ ಫೈಬ್ರಿನ್ ಜಾಲ ದಲ್ಲಿ ಸಿಕ್ಕಿ ಹಾಕಿಕೊಳ್ಳುತ್ತವೆ? ಎಲ್ಲ ರಕ್ತಕಣಗಳು ಹೇಗೆ ಕಾಣುತ್ತವೆ ನೋಡಿ ಆ ದೃಶ್ಯ!

೫. ಈ ಜಗತ್ತಿನಲ್ಲಿರುವ ಅತ್ಯುತ್ತಮ ವಿದ್ಯುತ್ ವಾಹಕ ವ್ಯವಸ್ಥೆ ಹಾಗೂ ಸಂಪರ್ಕ ವ್ಯವಸ್ಥೆ ನಮ್ಮ ಮಿದುಳಿನಲ್ಲಿವೆ. ಮಿದುಳಿನ ಮೂಲ ರಚನೆ ನರ ಕೋಶಗಳು. ಒಂದೊಂದು ನರಕೋಶದಲ್ಲಿ ಕೋಶ ದೊಡಲಿವೆ. ಅದರಿಂದ ಉದ್ದನೆಯ ಅಕ್ಷತಂತು ಹೊರಡುತ್ತದೆ. ಕೋಶದೊಡಲಿನಿಂದ ಹೊರಟ ವೃಕ್ಷಕವಲುಗಳು ಇತರ



೧. ಚರ್ಮ ಕ್ಯಾನ್ಸರ್‌ನಲ್ಲಿ ಕಾಣುವ ಜೀವಕೋಶಗಳು (X೯೨೦)



೨. ಕೆಂಪು... ನಾಳದಿಂದ... ಹೋಗುತ್ತಿ...



೪. ರಕ್ತದ ಹೆಪ್ಪು-ರಕ್ತಕಣಗಳು(ಕಿತ್ತಳೆ) ಫೈಬ್ರಿನ್ ಜಾಲ (ಹಸಿರು) (X೪೭೫೦).



೫. ಮಿದುಳ...



೭. ಬೃಹತ್ ಭಕ್ಷ... ಈಸ್ಟ್ ಕೋಶಗ...



೬. ಪುರುಷನ ಅಂಗೈನಲ್ಲಿರುವ ಬೆವರು ಗ್ರಂಥಿಯ ಪ್ರವೇಶ ದ್ವಾರ (X೪೩೦)



೧೦. ದುರಾರ್ಗರುಳುವಿನಲ್ಲಿರುವ ಹೀರು ಲೋಮಗಳು (X೨೫)

# ...ಟ್ ಗ್ಯಾಲರಿ !



## ...ಂದು ಇಣುಕು ನೋಟ



... ದೊಡ್ಡ ರಕ್ತ ...ನಾಳ ದೊಳಗೆ



೩. ಕಾರ್ಟಿಯ ಅಂಗ (X೧೮೪೦)



...ಕೋಶಗಳು.



೮. ನಿಷೇಚನೆ! ಮಧ್ಯದಲ್ಲಿ ಅಂಡಾಣುವಿದೆ. ಅದರ ಸುತ್ತಲು ವೀರ್ಯಾಣುಗಳಿವೆ.



...ಭರಿತ ನೀಲಿಬಣ್ಣದ ...ದೆ. (X೧೮೪೦)



೯. ನಕ್ಷತ್ರದ ಆಕಾರದಲ್ಲಿರುವ ತಾರಾಕಣಗಳು (X೯೬೦)



ನರಕೋಶಗಳೊಂದಿಗೆ ಸಂಪರ್ಕ ಪಡೆದಿರುತ್ತವೆ. ವಿದ್ಯುದಾವೇಗಗಳು ವೃಕ್ಷಕವಲುಗಳ ಮೂಲಕ ಕೋಶದೊಡಲನ್ನು ಪ್ರವೇಶಿಸುತ್ತವೆ. ಅಲ್ಲಿ ಮಾಹಿತಿ ಸಂಸ್ಕಾರಗೊಂಡು, ಅಕ್ಷ ತಂತುವಿನ ಮೂಲಕ ಮುಂದಿನ ಕೋಶಕ್ಕೆ ರವಾನೆಯಾಗುತ್ತವೆ!

೬. ನಿಮ್ಮ ಅಂಗೈಯನ್ನು ಒಮ್ಮೆ ಪರೀಕ್ಷಿಸಿ. ಎಷ್ಟು ಮೃದುವಾಗಿದೆ ಅಲ್ಲವೆ? ಕೈಯನ್ನು ಮತ್ತಷ್ಟು ಸೂಕ್ಷ್ಮವಾಗಿ ಪರಿಶೀಲಿಸಿ. ಅಂಗೈ ಮೇಲೆ ನವಿರಾದ ಗೆರೆಗಳು ಚಿತ್ರವಿಚಿತ್ರ ಆಕೃತಿಗಳನ್ನು ರೂಪಿಸಿರುವುದು ಕಂಡುಬರುತ್ತದೆ. ಅದೇ ಅಂಗೈಯನ್ನು ಸೂಕ್ಷ್ಮದರ್ಶಕದಡಿಯಲ್ಲಿ ನೋಡಿದರೆ...ನೂರಾರು ಬಿಲಗಳು!!......ಇವು ಬೆವರ ಗ್ರಂಥಿಗಳ ಬಾಯಿ. ಈ ಬಿಲದೊಳಗೆ ನಾವೇನಾದರೂ ಹೋದರೆ ನೇರವಾಗಿ ಬೆವರ ಗ್ರಂಥಿಗಳ ಕೊಳದಲ್ಲಿ ಮುಳುಗಬೇಕಾಗುತ್ತದೆ!

೭. ನಮ್ಮ ದೇಹವೆಂಬ ದೇಶವನ್ನು ಕಾಯಲು ಒಂದು ಅದ್ಭುತ ಮಿಲಿಟರಿ ಪಡೆಯಿದೆ. ಇವು ದೇಹ ದೊಳಗೆ ಪ್ರವೇಶಿಸುವ ಬ್ಯಾಕ್ಟೀರಿಯ, ವೈರಸ್ ಮುಂತಾದ ಶತ್ರುಗಳನ್ನು ಸದೆಬಡಿಯುತ್ತವೆ. ಆ ಮಿಲಿಟರಿ ಪಡೆಗೆ ಸೇರಿದ ಒಂದು ಯೋಧ ಬೃಹತ್ ಭಕ್ಷಕ! (ಮ್ಯಾಕ್ರೋಫೇಜ್) ಚಿತ್ರದಲ್ಲಿ ಹಸಿರು ಬಣ್ಣ ತಳೆದಿವೆ ಕ್ಯಾನ್ಸರ್ ಜೀವಕೋಶಗಳು. ಇವೂ ''ಶತ್ರುಗಳು'' ಇವನ್ನು ನುಂಗಿ ನೀರುಕುಡಿಯಲೆಂದು ಹೊರಟಿದೆ ಬೃಹತ್ ಭಕ್ಷಕ!

೮. ಈ ಜಗತ್ತಿನಲ್ಲಿಅತ್ಯಂತ ಕಷ್ಟಕರವಾದ ಓಟದ ಸ್ಪರ್ಧೆ ಯಾವುದು ಗೊತ್ತೆ? ಒಲಿಂಪಿಕ್‌ನ ಮೆರಥಾನ್ ಸ್ಪರ್ಧೆ ಎಂದಿರಾ...ಇಲ್ಲವೇ ಇಲ್ಲ. ಅದಕ್ಕಿಂತಲೂ ಕಷ್ಟಕರವಾದ ಸ್ಪರ್ಧೆ ಇದೆ. ಒಮ್ಮೆ ಒಬ್ಬ ಪುರುಷನು ಸ್ಖಲಿಸಿದಾಗ ಸುಮಾರು ೩೦೦ ಮಿಲಿಯನ್ ವೀರ್ಯಾಣುಗಳು ಯೋನಿಯನ್ನು ಪ್ರವೇಶಿಸುತ್ತವೆ. ಆಗ ಆರಂಭವಾಗುತ್ತದೆ. ನಿಜವಾದ ಸ್ಪರ್ಧೆ. ಅವುಗಳ ಗುರಿ.... ಅಂಚ ವಾಹಕ ನಳಿಕೆಯಲ್ಲಿ ಕಾಯುತ್ತಿರುವ ಅಂಡಾಣುವನ್ನು ತಲುಪಿ ಫಲಕಟ್ಟುವುದು. ಮೆರಥಾನ್ ಸ್ಪರ್ಧೆಯಲ್ಲಿ ಮೊದಲನೆ, ಎರಡನೆ, ಮೂರನೆಯ ಬಹುಮಾನ ಗಳುಂಟು! ಇಲ್ಲಿ ಒಂದೇ ಒಂದು ಬಹುಮಾನ! ಎಲ್ಲರಿಗಿಂತ ಮೊದಲು ಬಂದ ವೀರ್ಯಾಣು ಅಂಡಾಣುವಿನ 'ಜೋನ ಪೆಲ್ಯುಸಿಡ' ವನ್ನು ಭೇದಿಸಿ ಒಳ ನುಗ್ಗುತ್ತದೆ. ನಂತರ ಅಭೇದ್ಯ ''ಚಕ್ರವ್ಯೂಹ''ವನ್ನು ಯಾವೊಂದು ಶುಕ್ರಾಣುವು ಭೇದಿಸಲು ಅಸಮರ್ಥ ವಾಗುತ್ತವೆ!....ಆ ''ಫೋಟೋ ಫಿನಿಶ್'' ಚಿತ್ರವನ್ನು ನೋಡಿ!

೯. ಮಿದುಳಿನಲ್ಲಿರುವ ಪ್ರಧಾನ ಕಾರ್ಯನಿರ್ವಾಹಕ ಕೋಶಗಳೆಂದರೆ ನರಕೋಶಗಳು ಎಂಬುದನ್ನು ಈಗಾಗಲೆ ಹೇಳಿದ್ದೇನೆ. ಮಿದುಳಲ್ಲಿ ಮತ್ತೊಂದು ರೀತಿಯ ಕೋಶಗಳಿವೆ. ನರ ಅಂಟು ಕೋಶಗಳೆಂದು (ನ್ಯೂರೋಗ್ಲಿಯಲ್ ಕೋಶಗಳು) ಅವುಗಳ ಹೆಸರು. ಆ ಗುಂಪಿಗೆ ತಾರಾ ಕಣಗಳು (ಆಸ್ಟ್ರೋಸೈಟ್) ಸೇರು ತ್ತವೆ. ಇವು ನರಕೋಶಗಳಿಗೆ ಸೂಕ್ತ ಆಧಾರವನ್ನು ಒದಗಿಸುತ್ತವೆ.

೧೦. ನಮ್ಮ ಶಾಲೆಯ ಆರೋಗ್ಯ ಪುಟದಲ್ಲಿ 'ಡುಯೋಡಿನಂ' ಎಂಬ ಹೆಸರನ್ನು ಕೇಳಿದ್ದೇವಲ್ಲ! ....ಇದು ಸಣ್ಣ ಕರುಳಿನ ಆರಂಭ ಭಾಗ. ಇಲ್ಲಿ ಹೀರುಲೋಮಗಳೆಂಬ (ವಿಲ್ಲೈ) ರಚನೆಗಳಿವೆ. ಈ ರಚನೆಗಳು ೦.೫-೧.೦ ಎಂ.ಎಂ.ನಷ್ಟು ಉದ್ದಕ್ಕೆ ಡುಯೋಡಿನಂ ಪೊಳ್ಳಿನೊಳಗೆ ಚಾಚಿಕೊಂಡಿರುತ್ತವೆ. ಇವುಗಳ ಮುಖ್ಯ ಕೆಲಸ ಜೀರ್ಣವಾದ ಆಹಾರಾಂಶಗಳ ಹೀರುವಿಕೆ!

ಅಂದಹಾಗೆ ಈ 'ಡುಯೋಡಿನಂ' ಎಂಬ ಹೆಸರು ಹೇಗೆ ಬಂದಿತೆಂದು ನಿಮಗೆ ಗೊತ್ತೆ? ಕ್ರಿ.ಪೂ. ೨೫೦ ರಲ್ಲಿ ಗ್ರೀಕ್ ವಿಜ್ಞಾನಿ ಹೆರೋಫಿಲಸ್. ಇವನು ಪ್ರಾಣಿ ಗಳ ಕರುಳಿನ ಮೊದಲ ಭಾಗವನ್ನು ಅಳೆದ. ಅಕ್ಕಪಕ್ಕ ದಲ್ಲಿ ಒಂದೊಂದೇ ಬೆರಳುಗಳನ್ನು ಇಟ್ಟು ಅಳೆದಾಗ ಹನ್ನೆರಡು ಬೆರಳುಗಳಷ್ಟು ಉದ್ದವಿದ್ದುದು ತಿಳಿಯಿತು. ಅದಕ್ಕೆ ಅವನು ''ಡೂಡಕ ಡಕ್ಟೈಲಾನ್'' ಎಂದು ಕರೆದನು. ಗ್ರೀಕ್ ಭಾಷೆಯಲ್ಲಿ ಡೂ ಎಂದರೆ ಎರಡು, ಡೆಕ ಎಂದರೆ ಹತ್ತು ಮತ್ತು ಡಕ್ಟೈಲಾನ್ ಎಂದರೆ ಬೆರಳುಗಳು. ಎಂದರೆ ೧೨ ಬೆರಳುಗಳು ಎಂದರ್ಥ. ಈ ಗ್ರೀಕ್ ಪದ ಕಾಲಕ್ರಮೇಣ ಅರಬ್ಬಿ ಭಾಷೆಗೆ ಹೋಗಿ ಲ್ಯಾಟಿನ್ ಭಾಷೆಗೆ ಬಂದಾಗ 'ಡುಯೋಡಿನಂ' ಎಂದು ಅಪಭ್ರಂಶವಾಗಿ ಬಿಟ್ಟಿತ್ತು!...ಈ ತಪ್ಪು ಪದವನ್ನೇ ಸರಿಯಾದ ಪದವೆಂದು ಇಂದಿಗೂ ನಾವು ಬಳಸುತ್ತಿ ದ್ದೇವೆ. ಕನ್ನಡದಲ್ಲಿ ಇದಕ್ಕೆ 'ದುರರ್ಗರುಳು' ಎಂಬ ಸಮಪದವನ್ನು ನೀಡಿದ್ದಾರೆ. ವೈದ್ಯಶಬ್ದ ಬ್ರಹ್ಮ ಡಾ। ಡಿ.ಎಸ್.ಶಿವಪ್ಪನವರು!

ಓದುಗರೆ! ಹೇಗಿದೆ ನಡೆದಾಡುವ ಗ್ಯಾಲರಿ ಯಲ್ಲಿನ ವರ್ಣಚಿತ್ರಗಳು! ನಮ್ಮ ದೇಹದಲ್ಲಿ ಇಂತಹವುಗಳು ಅಸಂಖ್ಯವಾಗಿವೆ! ಅಂತಹವುಗಳಲ್ಲಿ ಕೆಲವನ್ನು ಇಲ್ಲಿ ನೀಡಿದ್ದೇನೆ. ಹೇಗೆನಿಸುತ್ತಿವೆ. ಇವು?... ಬರೆದು ತಿಳಿಸುತ್ತೀರಲ್ಲ!



## ...ಕಿಕೆಯ ವಿಶೇಷ ಕೊಡುಗೆ

## ಒಂದು ಚಿತ್ರ - ಎರಡು ಶೀರ್ಷಿಕೆ



# ದೂರ್ವಾಸರಿಗೆ ಬೇಕು ಆಸ್ಪಿರಿನ್ !

ಪಾಪ ಶಾಕುಂತಲೆ!... ಅವಳನ್ನು ವಿರಹದಲ್ಲಿ ಬೇಯಲು ಬಿಟ್ಟು ಹೊರಟೇ ಹೋದ ದುಷ್ಯಂತ! ಅವನ ಚಿಂತೆಯಲ್ಲಿ ಕಂಡು ಬಂದ ಶಕುಂತಲೆಯ ಶಪಿಸಬೇಕೆ ದೂರ್ವಾಸ! ಎಂತಹ ಕೋಪಿಷ್ಠ ಈ ಮುನಿ, ಮುನಿಯುವುದೇ ಹೀಗೆ ಆ ಅಬಲೆಯ ಮೇಲೆ!

ದೂರ್ವಾಸ ಎಂಬ ವ್ಯಕ್ತಿ ಇದ್ದ ಬಗ್ಗೆ ದಾಖಲಿಸು ತ್ತವೆ ನಮ್ಮ ಪುರಾಣಗಳು. ಆದರೆ ಅವನು ಹೇಗೆ ಸತ್ತ ಎಂಬುದರ ಬಗ್ಗೆ ಯಾವುದೇ ಪುರಾಣ ಹೇಳಿಲ್ಲ ಎಂದೇ ನನ್ನ ಭಾವನೆ. ನನ್ನನ್ನು ಕೇಳಿದರೆ ಅವನು ಹೃದಯಾಘಾತದಿಂದಲೇ ಸತ್ತಿರಬೇಕು!

ಕೋಪಿಷ್ಠರು ಹೃದಯಾಘಾತದಿಂದ ಸಾಯುವ ಸಾಧ್ಯತೆ ಎರಡುಪಟ್ಟು ಹೆಚ್ಚಿದೆಯಂತೆ. ಇದಕ್ಕೆ ಪುರಾವೆ ಒದಗಿಸುತ್ತವೆ ಬಾಸ್ಟನ್ನಿನ ಡಿಕೋನೆಸ್ ಆಸ್ಪತ್ರೆ ಹಾಗೂ ಹಾರ್ವರ್ಡ್ ಮೆಡಿಕಲ್ ಸ್ಕೂಲಿನಲ್ಲಿ ನಡೆದ ಎರಡು ಅಧ್ಯಯನಗಳು. ಇವರು ಹೃದಯಾಘಾತವನ್ನು ಹೊಂದಿದ ೧೬೦೦ ರೋಗಿಗಳನ್ನು ಸಂದರ್ಶಿಸಿದರು. ವಿಚಾರಿಸಿದರು. ಆಗ ಹೊರಬಂತು!.... ಅವರ ಹೃದಯಾಘಾತಕ್ಕೆ ಅವರು ಹೊಂದಿದ್ದ ಕೋಪವೇ ಮುಖ್ಯ ಕಾರಣವಾಗಿತ್ತಂತೆ! ಬಹುಶಃ ಅಲ್ಲೂ ದೂರ್ವಾಸನ ವಂಶಜರು ಸಾಕಷ್ಟಿದ್ದಿರಬೇಕು!

ಆದರೆ ಕೋಪವನ್ನು ತಡೆಗಟ್ಟುವುದು ಹೇಗೆ? ಎಲ್ಲರೂ ಏಸು ಕ್ರಿಸ್ತನಾಗಲು ಸಾಧ್ಯವಿಲ್ಲವಲ್ಲ! ಚಿಂತೆಯಿಲ್ಲ ಬಿಡಿ. ನೀವು ಏಸುಕ್ರಿಸ್ತರಾಗಬೇಕಾಗಿಲ್ಲ! ದಿನಕ್ಕೊಂದು ಆಸ್ಪಿರಿನ್ನನ್ನು ನಿಯಮಿತವಾಗಿ ನುಂಗಿ! ನಿಮಗೆ ಕೋಪ ಉಕ್ಕಿದಾಗ ರಕ್ತ ಹೆಪ್ಪುಗಟ್ಟಿ, ಹೃದಯದ ಕರೋನರಿ ರಕ್ತನಾಳಗಳಲ್ಲಿ ಗರಣೆ ಆಗದಂತೆ ನೋಡಿ ಕೊಳ್ಳುತ್ತದೆ ಆಸ್ಪಿರಿನ್! ಆಸ್ಪಿರಿನ್ ರಕ್ತ ಹೆಪ್ಪುಗಟ್ಟು ವುದನ್ನು ತಡೆಯುತ್ತದೆಯಂತೆ! ಯಾರು ವೈದ್ಯರ ಸಲಹೆಯ ಮೇರೆಗೆ ಆಸ್ಪಿರಿನ್ ಸೇವಿಸುತ್ತಾರೋ, ಅಂತಹವರಲ್ಲಿ ಕೋಪ ಪ್ರಚೋದಿತ ಹೃದಯಾಘಾತ ಸಂಭವ ಸಾಧ್ಯತೆ ಅರ್ಧಕ್ಕೂ ಕಡಿಮೆಯಾಗುತ್ತದೆ ಯಂತೆ!

ನಿಮ್ಮದು ''ದೂರ್ವಾಸಗೋತ್ರ,''ವಾಗಿದ್ದರೆ, ಈ ಕೂಡಲೆ ನಿಮ್ಮ ವೈದ್ಯರನ್ನು ಭೇಟಿ ಮಾಡಿ.

## ಅತಿರಕ್ತದೊತ್ತಡಕ್ಕೆ (ಹೈ ಬಿ.ಪಿ.)ಆಪರೇಶನ್ !

ಅತಿರಕ್ತದೊತ್ತಡ (ಹೈ.ಬಿ.ಪಿ.)ದಿಂದ ವಿಶ್ವದಲ್ಲಿ ಇಂದು ಸುಮಾರು [illegible] ಮಿಲಿಯನ್ ಜನರು ನರಳುತ್ತಿದ್ದಾರೆ ಎಂದು ಒಂದು ಅಂದಾಜು. ಇವರಲ್ಲಿ ಶೇಕಡಾ ೯೦ರಷ್ಟು ಜನರಲ್ಲಿ ಅತಿರಕ್ತ ದೊತ್ತಡ ಏಕೆ ಕಂಡು ಬರುತ್ತದೆ ? ಎಂಬುದನ್ನು ಕಂಡು ಹಿಡಿಯಲು ಸಾಧ್ಯವೇ ಇಲ್ಲ ಎಂಬ ಅಂಶ ಬಹಳ ಜನರಿಗೆ ತಿಳಿದಿಲ್ಲ!

ಇತ್ತೀಚಿನ ಸಂಶೋಧನೆಯೊಂದು ಹೊಸ ಬೆಳಕನ್ನು ಚೆಲ್ಲಿದೆ. ಜರ್ಮನಿಯ ಫ್ರೀಡ್‌ರಿಚ್‌ನಲ್ಲಿ ಅಲೆಕ್ಸಾಂಡರ್ ವಿಶ್ವ ವಿದ್ಯಾನಿಲಯದಲ್ಲಿ ಸಂಶೋಧಕರು ಜ್ವರ ಕಪಾಲವನ್ನು MRI ಪರೀಕ್ಷೆಗೆ ಒಳಪಡಿಸಿದರು. ಆಗ ಅವರ ಮಿದುಳು ಕಾಂಡದಲ್ಲಿರುವ ರಕ್ತನಾಳಗಳು ಅಸಹಜ ರೂಪದಲ್ಲಿ ತಿರುಚಿಕೊಂಡಿದ್ದವು. ಹೀಗೆ ತಿರುಚಿಕೊಂಡಿದ್ದ ಶೇಕಡಾ [illegible] ಜನರು ಅತಿರಕ್ತದೊತ್ತಡದಿಂದ ಬಳಲುತ್ತಿದ್ದರು. ಹೀಗೆ ತಿರುಚಿಕೊಂಡಿದ್ದರೂ ರಕ್ತ ಒತ್ತಡ ಸಾಮಾನ್ಯ ಮಟ್ಟದಲ್ಲಿ ಇದ್ದವರ ಸಂಖ್ಯೆ ಶೇಕಡಾ [illegible]ರಷ್ಟು ಮಾತ್ರ!

ಪಿಟ್ಸ್‌ಬರ್ಗಿನ ನರಶಾಸ್ತ್ರಜ್ಞ ಪೀಟರ್ ಜೆ ಜೆನೆಟ್ ದೀರ್ಘ ಕಾಲದಿಂದ ಮಿದುಳು ಕಾಂಡದ ರಕ್ತನಾಳಗಳ ತಿರುಚುವಿಕೆಯೇ ಅತಿ ರಕ್ತದೊತ್ತಡಕ್ಕೆ ಕಾರಣ ಎಂದು ವಾದಿಸುತ್ತಿದ್ದರು. ಶಸ್ತ್ರಚಿಕಿತ್ಸೆಯ ಮೂಲಕ ಈ ತಿರುಚುವಿಕೆಗಳನ್ನು ಸರಿಪಡಿಸಿದರು. ಅತಿರಕ್ತದೊತ್ತಡಕ್ಕೆ ಕಾರಣವೇನೆಂದು ತಿಳಿಯದ ಶೇಕಡಾ [illegible] ರೋಗಿಗಳಲ್ಲಿ ಅತಿ ರಕ್ತದೊತ್ತಡ ಮಾಯ [illegible]! ? ಇನ್ನು ಮುಂದೆ ಅತಿರಕ್ತದೊತ್ತಡಕ್ಕೆ ಆಪರೇಶನ್ [illegible]?

### ಓದುಗರಿಗೆ ಸೂಚನೆಗಳು

೧. ಜೀವನಾಡಿಯಲ್ಲಿ ಪ್ರಕಟವಾಗುವ ಲೇಖನಗಳು ಕೇವಲ ಮಾಹಿತಿಗಾಗಿ ಮಾತ್ರ. ಇವನ್ನು ಸ್ವಯಂಚಿಕಿತ್ಸೆಗೆ ಎಂದೂ ಬಳಸಿ ಕೊಳ್ಳಬೇಡಿ. ಈ ಬಗ್ಗೆ ನಿಮ್ಮ ಕುಟುಂಬದ ವೈದ್ಯರೊಂದಿಗೆ ಚರ್ಚಿಸಿ.

೨. ಲೇಖನಗಳಲ್ಲಿ ವ್ಯಕ್ತಪಡಿಸುವ ಅಭಿಪ್ರಾಯಗಳು ಸ್ವಯಂ ಲೇಖಕರವು. ಅದು ಸಂಪಾದಕರ/ ಪ್ರಕಾಶಕರ/ ಮುದ್ರಕರ ನಿಲುವೆಂದು

ತಿಳಿಯಬಾರದು.

೩. ಜೀವನಾಡಿಯಲ್ಲಿ ಪ್ರಕಟವಾಗುವ ಮಾಹಿತಿಗಳು ಸಾಧ್ಯವಾದಷ್ಟು ಮಟ್ಟಿಗೆ ನಿಖರವಾಗಿರುವಂತೆ ಎಚ್ಚರವಹಿಸುತ್ತೇವೆ. ಆದರೆ ಲೇಖನಗಳಲ್ಲಿ ಕಂಡು ಬರುವ ತಪ್ಪುಗಳಿಗೆ, ಕೊರತೆಗಳಿಗೆ, ದೋಷಗಳಿಗೆ ಸಂಪಾದಕರು/ ಪ್ರಕಾಶಕರು/ಮುದ್ರಕರು ಜವಾಬ್ದಾರರಲ್ಲ.



# ಮದುವೆ
# ಸೋಲು - ಗೆಲುವು ನಿಮ್ಮ ಕೈಯಲ್ಲಿದೆ



● ಡಾ। ಟಿ.ಎಸ್. ಸತ್ಯನಾರಾಯಣರಾವ್

ಹದಿಹರೆಯಕ್ಕೆ ಕಾಲಿಡುತ್ತಿದ್ದಂತೆ ಸಂಗಾತಿ, ಮದುವೆಯ ಬಗ್ಗೆ ಹಲವು ಅನಿಸಿಕೆಗಳು ಮೂಡುತ್ತವೆ ಎನ್ನುವುದರಲ್ಲಿ ಸಂಶಯವಿಲ್ಲ. ಯಾರಲ್ಲಿ ಮನ ಸೋಲುತ್ತೇವೆ ? ಹೇಳಲಾಗದು. ಯಾರು ತನಗೆ ಸರಿ ಯಾದ ಬಾಳಸಂಗಾತಿ ? ಎನ್ನುವುದರ ಬಗ್ಗೆ ದ್ವಂದ್ವ ಸಾಮಾನ್ಯ. ಪಾಶ್ಚಾತ್ಯ ದೇಶಗಳಲ್ಲಿ ಮದುವೆ ಎಂದರೆ ತಾವೇ ಒಪ್ಪಿ ಮುಂದುವರಿಯಬೇಕಾದುದರಿಂದ ಈ ವಿಚಾರದಲ್ಲಿ ಜಿಜ್ಞಾಸೆ, ಸಂಶೋಧನೆ ಜಾಸ್ತಿ. ಆದರೆ ನಮ್ಮ ದೇಶದಲ್ಲಿ ಪರಿಸ್ಥಿತಿಯೇ ಬೇರೆ. ಬಹಳ ಕುಟುಂಬಗಳಲ್ಲಿ ಮದುವೆಯ ಬಗ್ಗೆ ಗಂಡು ಹೆಣ್ಣಿಗೆ ಯೋಚಿಸಲು ಅವಕಾಶವೇ ಇಲ್ಲದಿರಬಹುದು. ಗಂಡು, ಹೆಣ್ಣಿಗೆ ಅನಿಸಿಕೆಗಳು ಇರುವುದಿಲ್ಲವೆಂದಲ್ಲ. ಆದರೆ ಅವುಗಳನ್ನು ಕಾರ್ಯರೂಪಕ್ಕೆ ತರಲು ಅವಕಾಶ ಗಳು ಕಡಿಮೆ. ಕಾರಣ ಮದುವೆ ಹಿರಿಯರು ನಿಶ್ಚಯಿ ಸುವ ಕಾರ್ಯವಾಗಿರುವುದು. ಹಿರಿಯರು ಸರಿಯಾಗಿ ಯೋಚಿಸುವುದಿಲ್ಲವೆಂದಲ್ಲ. ಆದರೆ ಅವರ ಭಾವನೆ, ಅನಿಸಿಕೆಗಳಿಗೂ, ಯುವಕ ಯುವತಿಯರ ಅನಿಸಿಕೆಗಳಿಗೂ ಅಜಗಜಾಂತರ ವ್ಯತ್ಯಾಸ ಸರ್ವೇಸಾಮಾನ್ಯ. ಅಂತರ ವೈವಾಹಿಕ ಜೀವನ ಹಲವು ಬಾರಿ ಮಾರಕ ವಾಗಿ ಪರಿಣಮಿಸಿದೆ ಎಂದರೆ ತಪ್ಪಾಗಲಾರದು. ಕೆಲವು ಬಾರಿ ಹುಡುಗ, ಹುಡುಗಿಯರಿಗೆ ಭಾವಿಸಂಗಾತಿ ಯನ್ನು ಮದುವೆಗೆ ಮುಂಚೆ ನೋಡುವ ಅವಕಾಶವೂ ಇಲ್ಲವಾಗಬಹುದು. ಕೆಲವೊಮ್ಮೆ ನೋಡಿದರೂ, ಶಾಸ್ತ್ರೋಕ್ತವಾಗಿ ನಡೆಯುವ ಈ ಕಾರ್ಯದಲ್ಲಿ ಗಂಡು ಹೆಣ್ಣಿಗೆ ಮಾತನಾಡುವ, ಪರಸ್ಪರ ಅರಿಯುವ ಸ್ವಾತಂತ್ರ್ಯ ಸಿಗುವುದು ಅಪರೂಪವೆನ್ನಬಹುದು. ಹಿರಿಯರು ಮದುವೆ ನಿಶ್ಚಯಿಸಲು ಗಣನೆಗೆ ತೆಗೆದು ಕೊಳ್ಳುವ



ಡಾ. ಟಿ. ಎಸ್. ಸತ್ಯನಾರಾಯಣರಾವ್
ಬಿ.ಎಸ್.ಸಿ., ಎಂ.ಬಿ.ಬಿ.ಎಸ್., ಎಂ.ಡಿ, ಡಿ.ಪಿ.ಎಂ., ಎಫ್.ಐ.ಪಿ.ಎಸ್., ಎಫ್.ಸಿ.ಎಸ್.ಇ.ಪಿ.ಐ.

★ ಪ್ರೊಫೆಸರ್ ಮತ್ತು ಮುಖ್ಯಸರು, ಮಾನಸಿಕ ಆರೋಗ್ಯ ವಿಭಾಗ
ಜೆ.ಎಸ್.ಎಸ್.ವೈದ್ಯಕೀಯ ಕಾಲೇಜ್ ಮತ್ತು ಆಸ್ಪತ್ರೆ, ಮೈಸೂರು.

★ ಸುಮನ, ವಿನಾಯಕ ನರ್ಸಿಂಗ್ ಹೋಂ,
ಬಂಡಿಗೌಡ ಲೇಔಟ್, ಮಂಡ್ಯ.
ದೂರವಾಣಿ ಸಂಖ್ಯೆ : (೦೮೨೩೨) ೭೪೬೮೦, ೭೫೬೧೨.

ಅಂಶಗಳು ಹಲವು ಇರಬಹುದಾದರೂ, ಆಸ್ತಿ, ಅಂತಸ್ತು ಮುಖ್ಯವಾಗಿರುತ್ತದೆ. ಕೆಲವೊಮ್ಮೆ ಹತ್ತಿರದ ಸಂಬಂಧದ ಮದುವೆಗಳಲ್ಲಿ ಗಂಡು ಹೆಣ್ಣಿನ ಭಾವನೆಗಳು ಗೌಣವಾಗುತ್ತವೆ. ಆಸ್ತಿ ಬೇರೆಡೆ ಹಂಚಿ ಹೋಗಬಾರದು ಎನ್ನುವುದು ಒಂದು ಕಾರಣವಾದರೆ, ಕೆಲವೊಮ್ಮೆ ಹಿರಿಯರು ತಮ್ಮವರು ತಮಗೆ ಮುಂದೆ ಸಹಾಯವಾಗಬಹುದೆಂದು, ತವರಿನ ಕೊಂಡಿ ಕಳೆದು ಕೊಳ್ಳಬಾರದೆಂದು ಬಳಗದಲ್ಲಿ ಮದುವೆ ಮಾಡುತ್ತಾರೆ. ಇಂತಹ ಮದುವೆಗಳಲ್ಲಿ ಹೊಂದಿಕೊಂಡು ಹೋಗುವರು ಸಾಧ್ಯವಾದರೂ, ಲೈಂಗಿಕವಾಗಿ ಹಲವು ತೊಂದರೆಗಳು ಸಂಸಾರದಲ್ಲಿ ಸಾಮಾನ್ಯ. ಕೆಲವು ದಿನಗಳ ಹಿಂದೆ 'ಮಾವ'ನಾಗಿದ್ದವನೂ, 'ಹಿರಿಯನೂ' ಮದುವೆ ನಡೆದ ದಿನದಿಂದ 'ಗಂಡ'ನಾಗಬೇಕಾಗು ವುದು ವೈವಾಹಿಕ ಜೀವನದಲ್ಲಿ ತೊಂದರೆ ಮೂಡಲು ಒಂದು ಕಾರಣವಾಗಬಹುದು.

ಸ್ವಾಮಿ, ನನ್ನ ವಯಸ್ಸು ೨೮ ವರ್ಷ. ನನ್ನ ಮದುವೆಯನ್ನು ನನ್ನ ಅಕ್ಕನ ಮಗಳೊಂದಿಗೆ ನಿರ್ಧರಿಸಿದ್ದಾರೆ. ನಾನು ಬಿ.ಎ. ಓದಿ ಮುಗಿಸಿದ್ದೇನೆ. ಅವಳು ಈಗ ಪಿ.ಯು.ಸಿ.ಯಲ್ಲಿ ಓದುತ್ತಿದ್ದಾಳೆ. ನೋಡಲು ಚೆನ್ನಾಗಿದ್ದಾಳೆ. ಆದರೆ ತೊಂದರೆಯೆಂದರೆ, ಅವಳ ಮನಸ್ಸನ್ನು ಅರಿಯಲು ಸಾಧ್ಯವಾಗುತ್ತಿಲ್ಲ. ಕೆಲವೊಮ್ಮೆ ಮಾತನಾಡುವಾಗ ಮದುವೆಯಾಗಲು ಒಪ್ಪಿರುವಂತೆ ಮಾತಾಡುತ್ತಾಳೆ. ಕೆಲವೊಮ್ಮೆ ನಿನ್ನನ್ನು ನೋಡಿದರೆ ನೀನು ನನ್ನ ತಂದೆಯಂತೆ ಕಾಣ್ತಿದ್ದೀಯಾ ಎನ್ನುತ್ತಾಳೆ. ಇದರ ಅರ್ಥವೇನು? ನಾನು ಮದುವೆಯಾಗಲು ಮುಂದುವರಿಯಬಹುದೇ? ಮುಂದೆ ಸಂಸಾರದಲ್ಲಿ ಏನಾದರೂ ತೊಂದರೆಯಾಗಬಹುದೇ? ದಯವಿಟ್ಟು ಉತ್ತರಿಸಿ.

ಮೇಲಿನ ಪತ್ರ ಇಬ್ಬರಲ್ಲೂ ಸಣ್ಣ ವಯಸ್ಸಿನಿಂದ ಮೂಡಿದ ಭಾವನೆಗಳನ್ನು ಬದಲಾಯಿಸಲು ಕಷ್ಟಪಡುತ್ತಿರುವ ಪರಿ ಸ್ಪಷ್ಟವಾಗುತ್ತದೆ. ಮಾವನನ್ನು ಗೌರವದಿಂದ, ಆದರದಿಂದ ನೋಡುತ್ತಿದ್ದ ಅಕ್ಕನ ಮಗಳು ಒಮ್ಮೆಲೆ ಆತನನ್ನು ಪ್ರೇಮಿ ಅಥವಾ ಪತಿ ಯಾಗಿ ಸ್ವೀಕರಿಸುವುದು ಕಷ್ಟಸಾಧ್ಯದ ಕೆಲಸ. ಇಂತಹ ಹಲವು ಸಂಸಾರಗಳಲ್ಲಿ ಮೇಲ್ನೋಟಕ್ಕೆ ಸಾಮರಸ್ಯ, ಪ್ರೀತಿ, ಪ್ರೇಮಕ್ಕೆ ತೊಂದರೆಯಿರುವಂತೆ ಕಾಣದಿ ದ್ದರೂ, ಬೂದಿಮುಚ್ಚಿದ ಕೆಂಡದಂತೆ ಒಳಗಿನ ದಳ್ಳುರಿ ಯನ್ನು ತುಂಬಾ ದಿನ ಮರೆಮಾಚುವುದು ಕಷ್ಟದ ಕೆಲಸ ಇಂತಹ ಹಲವು ಸಂಸಾರಗಳಲ್ಲಿ ಮದುವೆಯೇತರ ಸಂಬಂಧಗಳು, ಕೆಲವೊಮ್ಮೆ ಮದುವೆಯ ದುರಂತ ದಲ್ಲಿ ಪರ್ಯಾವಸನವಾಗುವುದನ್ನು ಕಾಣುತ್ತೇವೆ.

ಇಂತಹ ಸ್ಥಿತಿಯಲ್ಲಿ ಕೆಲವರಿಗಾದರೂ, ಸಂಗಾತಿ ಯನ್ನು ಆರಿಸಿಕೊಳ್ಳುವ ಹಕ್ಕು, ಸ್ವಾತಂತ್ರ್ಯ ಇರುವುದು ಪುಣ್ಯ. ಹಲವು ಜನ ಹಲವು ಅಡೆತಡೆಗಳಿದ್ದರೂ, ಬದಿ ಗೊತ್ತಿ, ಪ್ರೀತಿಸಿ ಮದುವೆಯಾಗುವುದನ್ನು ಕಾಣುತ್ತೇವೆ. ಹಾಗಿದ್ದರೆ ನೀವು ಸಂಗಾತಿಯನ್ನು ಆರಿಸಿಕೊಳ್ಳುವ ಬಗೆಯಾದರೂ ಹೇಗೆ ? ಅದು ಮುಂದೆ ಸುಖಮಯ ಜೀವನಕ್ಕೆ ಹೇಗೆ, ಎಷ್ಟು ಸಹಕಾರಿ ? ಹಿರಿಯರು ನಿಶ್ಚಯಿಸುವ ಮದುವೆ, ಪ್ರೀತಿಸಿ ಆಗುವ ವಿವಾಹಗಳಲ್ಲಿ ಯಾವುದು ಒಳ್ಳೆಯದು ? ಮುಂತಾದ ಕೆಲವು ವಿಚಾರಗಳ ಬಗ್ಗೆ ಅರಿಯೋಣ.

### ತಕ್ಷಣದ ನಿರ್ಣಯ

ನಾವು ಹಲವುಬಾರಿ ಜೀವನದಲ್ಲಿ ಈ ರೀತಿಯ ನಿರ್ಣಯಗಳನ್ನು ಮಾಡುವುದು ಸಾಮಾನ್ಯ. ಹಲವು ಜನ ಮದುವೆಯಾದ ಕೆಲವು ವರ್ಷಗಳ ನಂತರ ತಾನು ಮದುವೆಯಾದ ಹುಡುಗಿಯನ್ನು ನಿರ್ಣಯಿಸಿದ್ದು ಇದೇ ರೀತಿ ಎಂದು ಹೇಳುವುದು ನಾವೆಲ್ಲಾ ಕೇಳಿದ್ದೇವೆ ಇದು ನಿಜವೋ, ಸುಳ್ಳೊ, ಒಟ್ಟಿನಲ್ಲಿ ಈ ಭಾವನೆ ವ್ಯಕ್ತ ಪಡಿಸುವುದರಿಂದ ಮನಸ್ಸಿಗೆ ಏನೋ ಖುಷಿ ಸಿಗುತ್ತದೆ ಎನ್ನುವುದರಲ್ಲಿ ಸಂಶಯವಿಲ್ಲ. ಯಾವುದೋ ಮದುವೆಗೆ ಹೋದಾಗ, ಅದೋ ಆ ಹುಡುಗಿ ಹಸಿರು, ಸೀರೆ, ಉದ್ದ ಮೂಗಿನ, ಕಂದು ಬಣ್ಣದ, ಉದ್ದನೆಯ ಹುಡುಗಿಗೆ ಮನಸೋತಿರುವುದಾಗಿ ನೀವು ಸ್ನೇಹಿತನಿಗೆ ಹೇಳಿದ್ದೀರೆಂದುಕೊಳ್ಳೋಣ ಆದರೆ ನಿಮ್ಮ ಸ್ನೇಹಿತ ನಿಗೆ ಅದೇ ವಿಚಾರವಾಗಿ ಆ ಹುಡುಗಿಯ ಬಗ್ಗೆ ಏನೆಂದುಕೊಂಡೆ ? ಎಂದುಕೇಳಿದರೆ ಹಲವೊಮ್ಮೆ ಆ ಹುಡುಗಿಯಲ್ಲಿ ಏನೂ ಮಹಾ ನೋಡಿದ್ದೀಯಾ ಎಂದಿರಲು ಸಾಕು.

ಲೈಂಗಿಕ ಜೀವನ (ಕಿನ್ಸೆ ಆಧಾರಿತ)





ಅವನಿಗೆ ಆ ಹುಡುಗಿಯನ್ನು ನೋಡಿದಾಗ ಏನೂ ಅನ್ನಿಸದಿರಬಹುದು. ಆದರೆ ನಿಮಗೆ ಅದೇ ಹುಡುಗಿಯನ್ನು ನೋಡಿದಾಗ ಎದೆ ಹೊಡೆದು ಕೊಂಡಿದ್ದು, ಉದ್ವೇಗಗೊಂಡಿದ್ದು, ಮೈ ನಡುಗಿದ್ದೂ ನಿಜ. ಇದು ಹೇಗೆ? 'LOVE AT FIRST SIGHT' ಎನ್ನುವ ಹೇಳಿಕೆಯನ್ನು ನಾವೆಲ್ಲಾ ಕೇಳಿದ್ದೇವಲ್ಲವೇ?

ಸಾಮಾನ್ಯವಾಗಿ, ನಾವೆಲ್ಲರೂ ಯಾವುದು ಚೆಂದ? ಯಾವುದು ಸುಂದರ? ಸಂತೋಷವನ್ನುಂಟು ಮಾಡುವುದು ? ಎಂದು ಸಣ್ಣವರಿದ್ದಾಗಯೇ ಕಂಡು ಕೊಂಡಿರುತ್ತೇವೆ. ಯಾವುದು ಅಪ್ಯಾಯಮಾನವೆನಿಸುತ್ತದೆ ? ಎನ್ನುವುದು ಒಬ್ಬರಿಂದ ಒಬ್ಬರಿಗೆ ಬೇರೆಯಾ ಗಲು ನಾವು ಸಣ್ಣವರಿದ್ದಾಗ ಕಲಿತ, ಮನಸ್ಸಿನಲ್ಲಿ ಅಚ್ಚೊತ್ತಿದ್ದ ಸಾಮಾನ್ಯವಾಗಿ ಅತಿ ಸುಂದರವಾಗಿರು ವವರನ್ನು ನಾವೆಲ್ಲಾ ಪ್ರಶಂಸಿಸುತ್ತೇವೆ. ಎತ್ತರವಾಗಿರುವವರನ್ನು ಬುದ್ಧಿವಂತರಾಗಿರುವವರನ್ನು , ಸ್ನೇಹ ಪರರನ್ನು ಸುಂದರರು ಎಂದು ಜನ ಭಾವಿಸುವುದುಂಟು. ಹಾಗೆಯೇ ಹಲವೊಮ್ಮೆ ದೈಹಿಕ ಸುಂದರತೆಯನ್ನೇ ಮಾನಸಿಕ, ಬೌದ್ಧಿಕ ಸುಂದರತೆಗೆ ಸಮವೆಂದು ಕೊಳ್ಳುವುದೂ ಸಾಮಾನ್ಯ. ಹಾಗಾಗಿಯೇ ಹಲವೊಮ್ಮೆ ಮದುವೆಯ ನಂತರ ವ್ಯಕ್ತಿತ್ವದ ಪೂರ್ಣ ಪರಿಚಯ ವಾದಾಗ ಇವನನ್ನೇ, ಇವಳನ್ನೇ ಏನು ನಾನು ಪ್ರೀತಿಸಿದುದು ? ಎನಿಸಬಹುದು. ಸಣ್ಣವರಿದ್ದಾಗಲೇ ನಮ್ಮ ಮನಸ್ಸಿನಲ್ಲಿ ಸುಂದರತೆಯ ಬಗ್ಗೆ ಭಾವನೆಗಳು ಅಚ್ಚೊತ್ತಿರುತ್ತವೆ ಎಂದೆವು. ಅದು ಹೇಗೆ ಎಂದು ನೋಡೋಣ.

೧. ಆ ಹುಡುಗಿ ತೊಟ್ಟಿರುವ ಹಸಿರು ಸೀರೆ ನಿಮ್ಮ ಪ್ರೀತಿಯ ತಾಯಿಯ ಒಪ್ಪುಗೆಯ ಬಟ್ಟೆಯ ಬಣ್ಣವಿರಬಹುದು.

೨. ಆ ಹುಡುಗಿಯ ಉದ್ದ ಮೂಗು ನಿಮ್ಮ ಕಾಲೇಜಿನ ದಿನದಲ್ಲಿ ನಿಮ್ಮನ್ನು ಪುಳಕಿತಗೊಳಿಸಿದ ಒಬ್ಬ ಚೆಲುವೆಯ ಮೂಗಿನ ರೂಪಕ್ಕೆ ಹೋಲಿಕೆಯಿರಬಹುದು.

೩. ಕಂದು ಬಣ್ಣ ನಿಮ್ಮ ತಾಯಿಯ ಬಣ್ಣವಿರ ಬಹುದು. ನಿಮ್ಮ ಹಳೆಯ ಸ್ನೇಹಿತೆಯ ಬಣ್ಣವಿರ ಬಹುದು.

೪. ಉದ್ದಕ್ಕಿರುವವರು ಜಾಣರು, ಸದೃಡರು, ಸ್ನೇಹಪರರು, ಸುಂದರರು ಎಂಬುದು ನಿಮ್ಮ ಭಾವನೆಯ ಪೂರಕ ವಿರಬಹುದು.

ಈ ಅಂಶಗಳು ಸ್ತ್ರೀಯರು ಪುರುಷರನ್ನು ನೋಡಿ ದಾಗಲೂ ಸಾಧ್ಯ. ಈ ರೀತಿ ನಿಮ್ಮ ಭಾವನೆಗಳು ಗರಿಗೆದರಲು ಸಹಕಾರಿಯಾಗುತ್ತವೆ. ಆದರೇ ಅದೇ ಹೋಲಿಕೆಗಳು ನಿಮ್ಮ ಸ್ನೇಹಿತನಿಗೆ ಪೂರಕವಾಗಿಲ್ಲದಿರ ಬಹುದು. ಆದುದರಿಂದಲೇ ನಮ್ಮ ಅನುಭವಗಳು ಬಹುಮುಖ್ಯ. ಹಸಿರು ಸೀರೆ ಭಾವನೆಗಳನ್ನು ಮೂಡಿ ಸಲು ಸಹಕಾರಿಯಾಯಿತು ನಿಜ. ಆದರೆ ಅದೇ ಒಂದು ಕಾರಣದಿಂದ ಆ ಹುಡುಗಿ ಮಾನಸಿಕವಾಗಿ ಹಾಗೂ ಬೌದ್ಧಿಕವಾಗಿ ಸ್ಪಂದಿಸಬಲ್ಲಳು ಎಂದು ಹೇಳಲಾಗುವು ದಿಲ್ಲ. ಉದ್ದವಾಗಿರುವವರು ಜಾಣರಾಗಿರಬೇಕಿಲ್ಲ. ಅವರು ಸ್ನೇಹಪರರೂ ಅಲ್ಲದಿರಬಹುದು. ನಿಮ್ಮ ತಾಯಿಯ ಉದ್ದ ಮೂಗಿಗೂ ನೀವು ನೋಡಿದ ಹುಡುಗಿಯ ಉದ್ದಮೂಗಿಗೂ ಬಾಹ್ಯರೂಪದಲ್ಲಿ ಹೋಲಿಕೆ ಇದ್ದರೂ, ನಡವಳಿಕೆ ತದ್ವಿರುದ್ಧವಾಗಿರಲು ಸಾಧ್ಯ. ಕಂದು ಬಣ್ಣದ ನಿಮ್ಮ ಬಾಲ್ಯ ಸ್ನೇಹಿತೆಗೂ, ಈ ಹುಡುಗಿಗೂ ಸ್ವಭಾವದಲ್ಲಿ ಏನೂ ಹೋಲಿಕೆಯಿಲ್ಲ ದಿರಬಹುದು.

ಇದೇ ಕಾರಣದಿಂದ ತಕ್ಷಣದ ನಿರ್ಧಾರದಿಂದ ನಡೆಯುವ ವಿವಾಹಗಳಲ್ಲಿ ತೊಂದರೆ ಸಾಮಾನ್ಯ.

### ಲೈಂಗಿಕ ಆಕರ್ಷಣೆ ಪ್ರೀತಿಯ ನಕ್ಷೆ



ಜಾನ್ ಮೋನಿಯವರು ಮೊಟ್ಟಮೊದಲಿಗೆ ಇದರ ವಿವರಣೆಯನ್ನು ನೀಡಿದ್ದಾರೆ. ಅವರ ಪ್ರಕಾರ ನಾವೆಲ್ಲ ನಮ್ಮ ಮನಸ್ಸಿನ ಅಂತರಾಳದಲ್ಲಿ ಹಲವು ರೀತಿಯ ಭಾವನೆಗಳನ್ನು ಹುದುಗಿಟ್ಟುಕೊಂಡಿರು ತ್ತೇವೆ. ಆದುದರಿಂಲೇ ಹಲವು ಸಂಕೇತಗಳು ನಮಗೆ ಸಣ್ಣ ವಯಸ್ಸಿನಿಂದಲೇ ಲೈಂಗಿಕವಾಗಿ ಉದ್ರೇಕಿಸ ಬಲ್ಲವು.

## ಮಾನಸಿಕ ಆರೋಗ್ಯ

ಉದಾಹರಣೆಗೆ: ಮುಖದ ಲಕ್ಷಣ, ಬಾಯಿ, ಮೂಗು, ಕಣ್ಣು, ಕಿವಿಯ ರೂಪರೇಷೆಗಳು, ಬಣ್ಣ, ನಡೆ, ನುಡಿ, ನಗು- ಹೀಗೆ ಹಲವು ಲಕ್ಷಣಗಳು.

ಅದೇ ರೀತಿ ನಾವು ನೋಡಿದ ಕೆಲವು ಸನ್ನಿವೇಶ ಗಳು ಸಂಕೇತಗಳಾಗಿ ನಿಲ್ಲಬಹುದು. ಉದಾಹರಣೆಗೆ: ಜನರಿಗೆ ಸಹಾಯ ಮಾಡಿದ ಪೊಲೀಸ್‌ಮನ್ ಆಗಬಹುದು, ನೀವು ಬಸ್ಸು ಹತ್ತಲು ಸಹಾಯ ಮಾಡಿದ ಕಂಡಕ್ಟರ್ ಆಗಬಹುದು ಅಥವಾ ಟಿ.ವಿ. ಕಮರ್ಷಿಯಲ್‌ಗಳಲ್ಲಿ, ಸಿನಿಮಾಗಳಲ್ಲಿ ನೋಡುವ ಹೀರೋ ಆಗಬಹುದು. ಈ ರೀತಿ ಸಣ್ಣ ವಯಸ್ಸಿನಲ್ಲಿ ನಮ್ಮ ಭಾವನೆಗಳನ್ನು ಪ್ರಚೋದಿಸುವ ಯಾವುದೇ ಘಟನೆಯಿಂದ ಮುಂದೆ ಲೈಂಗಿಕ ಭಾವನೆಗಳು ಮೂಡುವುದಕ್ಕೆ ಸಹಕಾರಿಯಾಗಬಲ್ಲವು.

ಮನೋವಿಶ್ಲೇಷಣ ಪದ್ಧತಿಯವರು ಹೇಳುವಂತೆ ಹಲವು ಬಾರಿ ನಾವು ನಮ್ಮ ತಂದೆತಾಯಂದಿರನ್ನು ಸಂಗಾತಿಗಳಲ್ಲಿ ಅರಸುವುದು ಸಾಮಾನ್ಯ. ಬೆಳೆಯುತ್ತಿ ರುವ ಮಗು ಗಂಡಾದರೆ ತಾಯಿಗೂ (Oedipal complex) ಹೆಣ್ಣು ಮಗುವಾದರೆ ತಂದೆಗೂ (electra complex) ಅತಿಯಾಗಿ ಹಚ್ಚಿಕೊಳ್ಳು ವುದು ಸಾಮಾನ್ಯವೆಂದು ಅರಿತಿದ್ದೇವೆ. ಬೆಳೆಯುತ್ತಾ ಹೋದಂತೆ, ತಂದೆತಾಯಂದಿರಿಂದ ದೂರವಾಗಿ, ಸಾಮಾಜಿಕವಾಗಿ ಬೇರೆಯವರೊಡನೆ ಸ್ನೇಹವನ್ನು ಬೆಳೆಸಿಕೊಳ್ಳುವುದನ್ನು ಕಾಣುತ್ತೇವೆ. ಅದಿಲ್ಲದೆ ತಂದೆ ತಾಯಂದಿರನ್ನೇ ಅತಿಯಾಗಿ ಹಚ್ಚಿಕೊಂಡ ಹಾಗೆಯೇ ತಂದೆತಾಯಂದಿರ ಅತಿಪ್ರೀತಿ, ಮುದ್ದಿನಿಂದ ಬೆಳೆದ ಮಕ್ಕಳಲ್ಲಿ ಮುಂದೆ ವೈವಾಹಿಕ ಜೀವನದಲ್ಲಿ ತೊಂದರೆ ಗಳು ಜಾಸ್ತಿಯಾಗಬಹುದು. ನಾವು ತಂದೆತಾಯಂದಿ ರನ್ನು ಸಂಗಾತಿಗಳಲ್ಲಿ ಕಾಣಲು ಬೇರೆ ಕಾರಣಗಳೂ ಇವೆ. ಆಪ್ತ ಪರಿಸರ, ಸಲಿಗೆ, ಕ್ಷೇಮ, ಭದ್ರತೆಯ ಭಾವನೆಗಳು ಇದರಿಂದ ಸಾಧ್ಯ. ಈಗಿನ ಕೆಲವು ಸಮೀಕ್ಷೆ ಗಳ ಪ್ರಕಾರ ಈ ರೀತಿಯ ಭಾವನೆಗಳು ಸಣ್ಣ ಮಕ್ಕಳ ಲ್ಲಿಯೇ ಅಲ್ಲದೆ ಜೀವನ ಪರ್ಯಂತ ಮೂಡುವ ಸಾಧ್ಯತೆ ಯಿದೆ ಎಂದು ತಿಳಿದಿದೆ.

ಈ ಪ್ರೇಮದ ನಕ್ಷೆಯಲ್ಲಿ ಕೆಲವು ಅಂಶಗಳು ಸಮ್ಮಿಳಿತವಾದರೂ, ಇನ್ನೂ ಹಲವು ಲಕ್ಷಣಗಳು ಸಂಕೇತಗಳಾಗಿ ಅಚ್ಚುಗೊಳ್ಳದಿರಬಹುದು. ನಿಮ್ಮ ತಂದೆಯ ಉದ್ದನೆಯ ಮೂಗು, ದಪ್ಪಮೀಸೆ ಸಂಕೇತ ಗಳಾಗಿ ಮನಸ್ಸಿನಲ್ಲಿರಲುಸಾಧ್ಯ. ಆದರೆ ಉದ್ದನೆಯ ಕತ್ತು, ಕೂದಲ ನಮೂನೆ ಸಂಕೇತಗಳಾಗಿ ಉಳಿದಿಲ್ಲ ದಿರಬಹುದು. ಇದು ಸಾಧ್ಯ. ಹಾಗೆಯೇ ಸಮಯಕ್ಕೆ ತಕ್ಕಂತೆ ಬದಲಾವಣೆಯ ಸಾಧ್ಯತೆಯೂ ಉಂಟು. ಹೀಗೆ ಹಲವು ಅಂಶಗಳು ಸೇರಿರುವುದರಿಂದ ಇದು ನಕ್ಷೆಯಲ್ಲ, ಇದು ಪ್ರೀತಿಯ ಗಂಟು (Love Kits) ಎಂದು ಮೇರಿಯನ್ ಟೈಸೋ ಹೇಳಿದ್ದಾರೆ.

## ಸಂಗಾತಿಯನ್ನು ಆರಿಸುವ ಬಗೆ

ನಾವು ಆರಿಸುವ ಸಂಗಾತಿ ಸಮಾನರೂಪದವರಾ ಗಿರಬೇಕೆ ? ಇಲ್ಲವೆ ಭಿನ್ನ, ಅಸದೃಶ ಗುಣದವರಾಗಿರ ಬೇಕೆ ? ಎಂಬುದರ ಬಗ್ಗೆ ಹಲವು ಅಭಿಪ್ರಾಯಗಳಿವೆ.

### ಸಮಾನ ಗುಣಗಳು

ಒಂದು ನಿಟ್ಟಿನಲ್ಲಿ ನೋಡಿದರೆ, ನಾವು ಸಂಗಾತಿ ಗಳಲ್ಲಿ ಅರಸುವುದು ಸಮಾನತನವನ್ನು. ನೈಸರ್ಗಿಕ ನಿರ್ಣಯಗಳಿಗನುಸಾರವಾಗಿಯೇ ಸಂಗಾತಿ ದೊರೆ ಯುವುದಾದರೆ, ಸಮಾನ ಮನಸ್ಕರನ್ನರಸು ವುದು, ಸಾಮಾನ್ಯವೂ ಹೌದು. ರೂಪ, ಬುದ್ಧಿವಂತಿಕೆ, ವಯಸ್ಸು, ವಿದ್ಯೆ, ಧರ್ಮ, ನಡೆ- ನುಡಿ ಹಾಗೂ ಸಾಮಾಜಿಕ ಸ್ಥಾನಮಾನಗಳು ಬಹುಮುಖ್ಯವಾದ ಅಂಶಗಳು.

ಅಕ್ಕನ ಮಗಳನ್ನು ಇಲ್ಲವೇ, ಸೋದರಮಾವ ನನ್ನು ಮದುವೆಯಾಗುವುದು ಹಲವು ಕುಟುಂಬಗಳಲ್ಲಿ ಕಾಣುತ್ತೇವೆ. ಇಂತಹ ಮದುವೆಗಳಲ್ಲಿ ಗಂಡು, ಹೆಣ್ಣಿನ ಮಧ್ಯೆ ವಯಸ್ಸಿನ ಅಂತರ ಬಹಳ ಜಾಸ್ತಿ. ಹದಿಹರೆ ಯಕ್ಕೆ ಕಾಲಿಡುವ ವಯಸ್ಸಿನಲ್ಲಿ ಲೈಂಗಿಕ ಆಸಕ್ತಿ ಹುಡುಗರಲ್ಲಿ ಹುಡುಗಿಯರಿಗಿಂತ ಎರಡರಿಂದ ಐದುಪಟ್ಟು ಜಾಸ್ತಿ. ಎಂದು ಕಿನ್ಸಿ ತಿಳಿಸಿದ್ದಾರೆ. (ಚಿತ್ರ-೧) ಹಾಗೆಯೇ ಮೂವತ್ತೈದು ವಯಸ್ಸಿಗೆ ಇಬ್ಬರಲ್ಲೂ ಭಾವನೆಗಳು ಉತ್ಕಟ ಸ್ಥಿತಿಯನ್ನು ತಲುಪು ವುದಾಗಿಯೂ, ಹಾಗೆಯೇ ನಂತರ ವಯಸ್ಸಾದಂತೆ ಭಾವನೆಗಳು ಕೆಳಮುಖವಾಗಿ ಮುಂದುವರೆಯುತ್ತವೆ. ಆದುದರಿಂದಲೇ ಲೈಂಗಿಕವಾಗಿ ಉತ್ಕಟಸ್ಥಿತಿಯಲ್ಲಿ ಗಂಡಿದ್ದರೆ, ಕಡಿಮೆ ವಯಸ್ಸಿನ ಸಂಗಾತಿಯಿಂದ ಲೈಂಗಿಕ ಸಹಕಾರ ಕಡಿಮೆ. ಅದೇ ಹೆಂಡತಿ ಮುಂದೆ ಲೈಂಗಿಕವಾಗಿ ಪ್ರಬುದ್ಧಳಾದಾಗ ಗಂಡು ಅವಳ ಭಾವನೆ ಗಳಿಗೆ ಸಮಾನವಾಗಿ ಸ್ಪಂದಿಸಲಾರ. ಅದೇ ಹಲವು ಮದುವೆಯೇತರ ಲೈಂಗಿಕ ಚಟುವಟಿಕೆಗಳಿಗೆ ಕಾರಣ ವಾಗುವುದನ್ನು ಕಾಣಬಹುದು. ಅದೇ ರೀತಿ ಗಂಡು ಹೆಣ್ಣಿನ ಸಾಮಾಜಿಕ ಆಸ್ತಿ ಅಂತಸ್ತಿನ ವ್ಯತ್ಯಾಸ ಹಲವು ಸಿನಿಮಾಗಳ ಕಥೆಯಾಗಿರುವುದನ್ನು ನಾವು ನೋಡಿ ದ್ದೇವೆ. ಕೊನೆಗೆ ಬಡವನಾದ ಹೀರೋ ಶ್ರೀಮಂತ ಳಾದ ಹೀರೋಯಿನ್‌ಳನ್ನು ಎಲ್ಲ ಅಡೆತಡೆಗಳನ್ನು ದಾಟಿ, ಗೆದ್ದು, ಸುಖಮಯ ಜೀವನವನ್ನು ನಡೆಸುವು ದನ್ನು ನೋಡುತ್ತೇವೆ. ಆದರೆ ನಿಜ ಜೀವನದಲ್ಲಿ ಪರಿಸ್ಥಿತಿ ಹಾಗೆಯೇ ನಡೆಯಬೇಕೆಂದೇನಿಲ್ಲ. ಆಸೆ, ಆಕಾಂಕ್ಷೆ, ಆಸಕ್ತಿ, ವಿದ್ಯೆ ಮೊದಲಾದವುಗಳಲ್ಲಿ ಗಂಡು ಹೆಣ್ಣಿನಲ್ಲಿ ಸಮಾನತೆ ಬಹುಮುಖ್ಯ. ಇಲ್ಲವಾದಾಗ ಸಾಂಸಾರಿಕವಾಗಿ ಹಲವು ತೊಂದರೆಗಳು ಸಾಮಾನ್ಯ.

### ಅಸದೃಶ, ಭಿನ್ನ ಲಕ್ಷಣಗಳು

ಕೆಲವೊಮ್ಮೆ ಭಿನ್ನ ಲಕ್ಷಣಗಳು ಆಕರ್ಷಣೆಗೆ ಕಾರಣ ವಾಗಬಲ್ಲವು. ನಾವು ಕಡಿಮೆ ಮಾತಾಡುವವರಾದರೆ, ಅತಿ ಮಾತಾಡುವವರನ್ನು ಮೆಚ್ಚುವುದು ಸಾಮಾನ್ಯ. ಹಿಂಜರಿಕೆ, ಕೀಳರಿಮೆಯ ಪ್ರವೃತ್ತಿಯವರಾದರೆ ಪ್ರಬಲರನ್ನು ಅರಸುವುದು. ಈ ರೀತಿ ಭಿನ್ನ ಲಕ್ಷಣಗಳು ಕೆಲವೊಮ್ಮೆ ಪೂರಕವಾಗಿರಬಹುದು (Complementary traits). ಇದು ಸುಖಮಯ ಸಂಸಾರಕ್ಕೆ ಸಹಕಾರಿಯೂ ಹೌದು.

ನಿಮ್ಮ ಸಂಸಾರ ಸುಖಮಯವಾಗಲು ಇದಕ್ಕೆ ಸರಿಯಾದ ಉತ್ತರ ನಿಮ್ಮ ಬಳಿಯೇ ಇದೆ. ನಿಮ್ಮನ್ನು ನೀವು ಅರಿಯಲು ಪ್ರಯತ್ನಿಸಿ. ನೀವ್ಯಾರು ? ನಿಮ್ಮ ಅವಶ್ಯಕತೆಗಳೇನು ? ಎಂಬುದನ್ನು ಅರಿಯಿರಿ. ಮದು ವೆಗೆ ಒಪ್ಪಿಕೊಳ್ಳುವ ಮುನ್ನ ನಿಮ್ಮ ಸಂಗಾತಿ ನಿಮ್ಮಗೆ ಸ್ಪಂದಿಸಬಲ್ಲಳೇ/ರೇ ಎಂಬುದನ್ನು ಖಾತ್ರಿಮಾಡಿ ಕೊಳ್ಳಿ. ಕೆಲವರಲ್ಲಿ ಸಹಕರಿಸುವ ಭಾವನೆ ಇರ ಬಹುದು. ಕೆಲವರಲ್ಲಿ ಯಾಕೆ ಸಹಕರಿಸಬೇಕು? ಎನ್ನುವ ಭಾವನೆ ಇರಬಹುದು. ಈ ವ್ಯತ್ಯಾಸವನ್ನು ತೀಕ್ಷ್ಣ ವಾದ ನಿರ್ಧಾರದಿಂದ ಮಾಡುವುದು ಕಷ್ಟ. ಸಂಗಾತಿ ಯಲ್ಲಿ ಎಲ್ಲಾ ಒಳ್ಳೆಯ ಮೆಚ್ಚುವ ಗುಣಗಳನ್ನು ಬಯ ಸುವುದರಿಂದ ಪ್ರಯೋಜನವಾಗದು. ಕೆಲವೊಮ್ಮೆ ಇರುವ ಗುಣಗಳಿಗೇ ನಾವು ಹೊಂದಿಕೊಳ್ಳಬೇಕಾ ಗುತ್ತದೆ.

**ಕೆಲವು ಅಂಶಗಳು ಈ ನಿರ್ಧಾರಕ್ಕೆ ಸಹಕಾರಿಯಾಗಬಲ್ಲವು.**

೧. ನಿಮಗೆ ಸಂಸಾರ ಮುಖ್ಯವೋ, ಇಲ್ಲವೇ ಉದ್ಯೋಗ ಮುಖ್ಯವೋ, ಸಾಮಾಜಿಕವಾಗಿ ಹೆಂಗಸ ರಲ್ಲಿ ಈ ನಿರ್ಧಾರ ಬಹಳ ಮುಖ್ಯ. ಉದ್ಯೋಗದ ಬಗ್ಗೆ ಆಸಕ್ತಿಯಿರುವ ಕೆಲವು ಸ್ತ್ರೀಯರು ಮದುವೆಗೆ ಒಪ್ಪಿ ನಂತರ ಕೆಲಸ ಮಾಡದೇ ಇರಬೇಕಾದಾಗ ಚಡಪಡಿ ಸುವುದನ್ನು ಸಾಮಾನ್ಯವಾಗಿ ಕಾಣುತ್ತೇವೆ.

೨. ನೀವು ಎಷ್ಟು ಸ್ವಾತಂತ್ರ್ಯ, ಜವಾಬ್ದಾರಿಯನ್ನು ಇಷ್ಟಪಡುತ್ತೀರಿ ?

೩. ನೀವು ಬಿಡುವನ್ನು ಹೇಗೆ ಕಳೆಯಬೇಕೆನ್ನು ತ್ತೀರಿ ?

೪. ಧಾರ್ಮಿಕವಾಗಿ ಹೊಂದಾಣಿಕೆ ಸಾಧ್ಯವೇ ?

೫. ಯಾವ ರೀತಿಯ ಉದ್ಯೋಗವನ್ನು ಸಂಗಾತಿ ಯಲ್ಲಿ ಬಯಸುತ್ತೀರಿ?

೬. ನಿಮಗೆ ಸಣ್ಣ ಇಲ್ಲವೇ, ದೊಡ್ಡ ಸಂಸಾರ ಇಷ್ಟವೇ ? ಒಟ್ಟು ಕುಟುಂಬ ಸರಿ ಹೋಗಬಹುದೇ?

೭. ಜೀವನದ ಗುರಿಯೇನು ?

ಈ ವಿಚಾರಗಳು ನಿಮಗೆ ಸಹಕಾರಿಯಾಗಬಲ್ಲವು.

## ಮದುವೆಯ ಬಗ್ಗೆ ಇರುವ ಇತರ ತಪ್ಪು ನಂಬಿಕೆಗಳು.

೧. ಮದುವೆ ಯಾವಾಗಲೂ ಸಂತೋಷಕ್ಕೆ ಸೋಪಾನ. ಮದುವೆ ಇಬ್ಬರು ವ್ಯಕ್ತಿಗಳು ಹೊಂದಿ ಕೊಂಡು ಹೋಗುವ ಪದ್ಧತಿಯನ್ನು ಹೊಂದಿರು ವುದನ್ನು ನಾವು ಅರಿಯಬೇಕು.

೨. ಸಂಗಾತಿ ತನ್ನನ್ನು ಯಾವಾಗಲೂ ಪ್ರೀತಿಸ ಬೇಕು, ಗೌರವಿಸಬೇಕು.

೩. ವೈವಾಹಿಕ ಜೀವನ ನಾನು ಹೇಳಿದಂತೆ ನಡೆಯಬೇಕು.

೪. ಮದುವೆಯಾಗುವುದರಿಂದ ನನ್ನ ಅವಶ್ಯ ಕತೆಗಳು ಪೂರ್ಣಗೊಳ್ಳುತ್ತವೆ.

೫. ನಾನು ಪೂರ್ಣ ಸ್ವಾತಂತ್ರ್ಯ ಬಯಸುತ್ತೇನೆ.

೬. ಸಂಗಾತಿ ಪರಿಪೂರ್ಣವ್ಯಕ್ತಿಯಾಗಿರಬೇಕು.

೭. ಯಾವಾಗಲೂ ಏಕಾಂಗಿಯಾಗಿರಬಯಸುವು ದಿಲ್ಲ.

೮. ಯಾವಾಗಲೂ ನನ್ನ ಸಂಗಾತಿ ನನ್ನ ತೊಂದರೆಗಳನ್ನು ದೂರಮಾಡುತ್ತಾಳೆ/ತ್ತಾನೆ.

೯. ಮದುವೆಯಿಂದ ಕಷ್ಟಕಾರ್ಪಣ್ಯಗಳು ದೂರವಾಗುತ್ತವೆ.

೧೦. ಸಂಗಾತಿ ನನ್ನ ಬೇಕು ಬೇಡಗಳಿಗೆ ಯಾವಾ ಗಲೂ ಸ್ಪಂದಿಸುತ್ತಾಳೆ/ತ್ತಾನೆ.

೧೧. ಪ್ರೀತಿ, ಪ್ರೇಮದಿಂದ ಎಲ್ಲಾ ಕಷ್ಟಕಾರ್ಪಣ್ಯ ಗಳನ್ನು ಗೆಲ್ಲಬಹುದು.

೧೨. ಮಕ್ಕಳಿದ್ದರೆ ಎಲ್ಲವೂ ಸರಿಹೋಗುತ್ತದೆ.

ಮದುವೆ ಎರಡೆತ್ತಿನ ಗಾಡಿಯಂತೆ. ಇಬ್ಬರೂ ಇದನ್ನು ಸರಿದೂಗಿಸಿ ಕೊಂಡು ಹೋಗುವುದು ಬಹಳ ಮುಖ್ಯ. ಹೊಂದಾಣಿಕೆ ಇಬ್ಬರಲ್ಲೂ ಇರಬೇಕು. ಎಲ್ಲ ವನ್ನೂ ಸಂಗಾತಿಯಿಂದ ಬಯಸುವುದು ತೊಂದರೆಗೆ ಮುಖ್ಯಕಾರಣ. ದೈಹಿಕ ಆಕರ್ಷಣೆಯಷ್ಟೆ ಅಲ್ಲದೆ, ಮಾನಸಿಕ, ಬೌದ್ಧಿಕ, ನೈತಿಕ ವಿಚಾರಗಳು ಸುಖಮಯ ಜೀವನಕ್ಕೆ ಭದ್ರ ಬುನಾದಿಯನ್ನು ಒದಗಿಸಬಲ್ಲವು.

## ಮೊಡವೆಗೆ ಹೇಳಿ ಟಾಟಾ



ಮುಖದಲ್ಲಿ ಮೊಡವೆ ಇರುವವರಿಗೆ, ಚರ್ಮದಲ್ಲಿ ಸುಕ್ಕುಬಿದ್ದವರಿಗೆ ವಿಟಮಿನ್ ಸಿ ಉತ್ತಮ ಫಲದಾಯಕ ವಾದುದಾಗಿದೆ. ಈ ವಿಟಮಿನ್ ಸಿ ಈಗ ಶೇಕಡಾ ೧೦ ಎಲ್ ಆಸ್‌ಕಾರ್ಬಿಕ್ ಆಸಿಡ್ (*L- Ascorbic Acid*) ಎಂಬ ಕ್ರೀಮಾಗಿ ಮಾರ್ಕೆಟ್ಟಿಗೆ ಬಂದಿದೆ.

ಇದೇ ರೀತಿ ಸೆಲ್ಲೆಕ್ಸ್‌ಸಿ (*Cellexc*) ರೆಟಿನ್ ಎ (*Retin A*) ಆಲ್ಫಾ, ಹೈಡ್ರಾಕ್ಸಿ ಆಸಿಡ್ಸ್ (*Alpha Hydroxy Acids*) ಗಳೂ ಕಾರ್ಯೋನ್ಮುಖವಾಗಿ ಕಾಲೆಗನ್ (*Collegen*) ಎಂಬ ವಸ್ತುವನ್ನು ಹೆಚ್ಚಿಸಿ ಚರ್ಮವನ್ನು ಮೃದುವಾಗಿಸುತ್ತದೆ.

ಇವೆಲ್ಲ ಮೊಡವೆಗಳನ್ನು ನಿವಾರಿಸುತ್ತವೆ; ಚರ್ಮದ ಸುಕ್ಕುಗಳನ್ನು ಅಳಿಸುತ್ತವೆ.

## ಸೊಳ್ಳೆ ಏಡ್ಸ್ ಹರಡದು

ಏಡ್ಸ್ ಕಾಯಿಲೆಯು ರಕ್ತದ ಮೂಲಕ ಹರಡು ತ್ತದೆಂಬುದು ನಿಶ್ಚಯ.

ಹಾಗಾದರೆ ಸೊಳ್ಳೆಗಳು, ತಿಗಣೆಗಳು ಮಲೇ ರಿಯಾ, ಆನೆಕಾಲು ರೋಗದಂಥವುಗಳನ್ನು ಹರಡು ವಂತೆ ಇದನ್ನೂ ಹರಡುವ ಸಾಧ್ಯತೆಯಿಲ್ಲವೇ ?

ಆದರೆ ಏಡ್ಸ್ ರೋಗವನ್ನು ಸೊಳ್ಳೆಗಳು ಹರಡು ವುದಿಲ್ಲವೆಂಬುದು ಕೆಲವು ತಜ್ಞ ವೈದ್ಯರ ಅಭಿಪ್ರಾಯ ವಾಗಿದೆ. ತಿಗಣೆ ಕೂಡ ಏಡ್ಸ್ ಹರಡದೆಂಬುದು ತಜ್ಞರ ವಾದ.

ಒಬ್ಬ ಏಡ್ಸ್ ರೋಗಿಯಿಂದ ಪಡೆದ ಏಡ್ಸ್ ವೈರಸ್ ಒಂದು ಸೊಳ್ಳೆಯ ದೇಹದಲ್ಲಿ ಅದು ಇನ್ನೊಬ್ಬ ನನ್ನು ಕಡಿಯುವವರೆಗೆ ಬದುಕಿರಲಾರದು ಎಂಬುದೇ ಇಲ್ಲಿನ ತರ್ಕ.

ಒಂದು ವೇಳೆ ಸೊಳ್ಳೆಯಿಂದ ಈ ಕಾಯಿಲೆ ಹಬ್ಬ ತೊಡಗಿದರೆ ಜಗದ ಜನಸಂಪತ್ತೇ ನಾಶ .

## ನೂತನ ಬ್ಯಾಂಕ್

ಪ್ರಾರಂಭದಲ್ಲಿ ಬ್ಯಾಂಕ್ ಎಂಬ ಪದವನ್ನು ಕೇವಲ ಹಣದ ಲೇವಾದೇವಿಯಲ್ಲಿ ಮಾಡಲು ಪ್ರಾರಂಭಿಸಿದೆವು. ನಂತರ ಇದೇ ಪದವನ್ನು 'ರಕ್ತ'ಕ್ಕೆ ಜೋಡಿಸಿ 'ರಕ್ತ ಬ್ಯಾಂಕ್' (Blood Bank) ಹುಟ್ಟಿಕೊಂಡವು. ವಿಜ್ಞಾನಿಗಳಿಗೆ ಕೃತಕವಾಗಿ ಮಾನವ ರಕ್ತವನ್ನು ಇನ್ನೂ ತಯಾರಿಸಲು ಸಾಧ್ಯವಾಗಿಲ್ಲ. ಆದರೆ ರಕ್ತದ ಅವಶ್ಯಕತೆ ಆಸ್ಪತ್ರೆಗಳಲ್ಲಿ ಅತಿ ಆದಾಗ, ಈ ವಿಚಾರ ಹೊಳೆದು ರಕ್ತದ ಬ್ಯಾಂಕ್ ಪ್ರಾರಂಭವಾದವು. ಇದಾದ ನಂತರ ನೇತ್ರ ಬ್ಯಾಂಕ್ (Eye Bank) ಪ್ರಾರಂಭವಾದವು. ನೇತ್ರ ಬ್ಯಾಂಕಿನಲ್ಲಿ ಓರ್ವ ವ್ಯಕ್ತಿಯ ಮರಣದ ನಂತರ ನೇತ್ರಗಳು ದಾನವಾಗಿ ಬಂದು, ಅವುಗಳನ್ನು ಸಂಗ್ರಹಿಸಿ ಇಡುವ ಸ್ಥಳಕ್ಕೆ "ನೇತ್ರಬ್ಯಾಂಕ್" ಎಂದು ಹೆಸರು. ನೇತ್ರ ಬ್ಯಾಂಕಿನಲ್ಲಿ ಅಷ್ಟು ಗೊಂದಲಗಳಿಲ್ಲ. ರಕ್ತ ಬ್ಯಾಂಕಿನಲ್ಲಿ ಗೊಂದಲಗಳಿವೆ. ಅಲ್ಲಿ ವ್ಯಾಪಾರ ಪ್ರಾರಂಭವಾಗಿದೆ. ಅದರಲ್ಲಿ ರಕ್ತ ಮಾರುವವರು, ರಕ್ತ ಕೊಳ್ಳುವವರು ಸೇರಿದ್ದಾರೆ. ಇದನ್ನು ತಡೆಗಟ್ಟಲು ಈಗ ರಕ್ತದಾನಿಗಳ ಪಡೆಗಳೇ ಹುಟ್ಟಿವೆ.. ಕಾರಣ ರಕ್ತ ಮಾರುವವರಿಗೆ ಅವಕಾಶ ಇಲ್ಲವೆಂದು ಹೇಳಿದರೂ, ಪರದೆಯ ಹಿಂದೆ ನಡೆದ ವ್ಯಾಪಾರವನ್ನು ಸಂಪೂರ್ಣವಾಗಿ ನಿಲ್ಲಿಸಲು ಸಾಧ್ಯವಾಗಲಿಕ್ಕಿಲ್ಲ. "ವೀರ್ಯ ಬ್ಯಾಂಕ್" ಸಹ (Sperm Bank) ಹಲವಾರು ಕೇಂದ್ರಗಳಲ್ಲಿ ಹುಟ್ಟಿಕೊಂಡಿವೆ. ವ್ಯಕ್ತಿಯ ವೀರ್ಯವನ್ನು ಇಂದು ಕೃತಕ ಗರ್ಭದಾರಣೆಯಲ್ಲಿ ಬಳಸಲಾಗುತ್ತಿದೆ. ವೈದ್ಯವಿಜ್ಞಾನದಲ್ಲಿ ಇದೂ ಒಂದು ಹೆಮ್ಮೆಯ ಪ್ರಗತಿ ಎಂದೇ ಹೇಳಬೇಕು. ಅನೇಕ ದಂಪತಿಗಳು ಇದರ ಲಾಭ ಪಡೆದಿದ್ದಾರೆ.

ಕೆಲವು ಮುಂದುವರೆದ ದೇಶಗಳಲ್ಲಿ "ಅಸ್ತಿಮಜ್ಜೆ ಬ್ಯಾಂಕ್" (Bone Marrow Bank) ಪ್ರಾರಂಭ ವಾಗಿವೆ. ನಮ್ಮ ದೇಶದಲ್ಲಿ ಅಸ್ತಿಮಜ್ಜೆ ಪೂರಣೆ (Marrow Transplant) ಪ್ರಾರಂಭವಾಗಿದ್ದರೂ, ಸಹ 'ಅಸ್ತಿಮಜ್ಜೆ ಬ್ಯಾಂಕ್' ಪ್ರಾರಂಭವಾಗಿಲ್ಲ. ಇದಕ್ಕಿಂತಲೂ ಮುಂದೆ ಹೋದ ಕೆಲವು ಆಸ್ಪತ್ರೆಗಳು 'ಅಸ್ತಿ ಬ್ಯಾಂಕ್' (Bone Bank) ಪ್ರಾರಂಭಿಸಿವೆ.

ಮಹಾರಾಷ್ಟ್ರದ ದಿವಂಗತ ಸೋಹನಿ ಎಂಬ ಮಹನೀಯರ ಪ್ರಯತ್ನದಿಂದ ಮಹಾರಾಷ್ಟ್ರದಲ್ಲಿ "ದೇಹ ದಾನ ಸಂಸ್ಥೆ"ಗಳು ತಲೆ ಎತ್ತಿವೆ. ಓರ್ವ ವ್ಯಕ್ತಿ ತನ್ನ ದೇಹವನ್ನು ಮರಣದ ನಂತರ ವೈದ್ಯಕೀಯ ಕಾಲೇಜುಗಳಿಗೆ ಇಲ್ಲವೆ ಸಂಶೋಧನಾ ಕೇಂದ್ರಗಳಿಗೆ ದಾನವಾಗಿ ಕೊಡಬಹುದು.




ಮಹಾರಾಷ್ಟ್ರದ ಚಳವಳಿಯನ್ನು ಅನುಸರಿಸಿ ಕರ್ನಾಟಕ, ಪಶ್ಚಿಮ ಬಂಗಾಲ, ಗುಜರಾತ್‌ಗಳಲ್ಲೂ ಇಂಥ ಸಂಸ್ಥೆಗಳು ಹುಟ್ಟಿವೆ. ಕರ್ನಾಟಕದ ವಿಜಾಪುರದ ಒಂದು ವೈದ್ಯಕೀಯ ಕಾಲೇಜಿನಲ್ಲಿ, ಮೈಸೂರಿನ ಜೆ.ಎಸ್.ಎಸ್.

**ಹಣದ ಲೇವಾದೇವಿ ಬ್ಯಾಂಕ್, ರಕ್ತ ಬ್ಯಾಂಕ್, ನೇತ್ರ ಬ್ಯಾಂಕ್, ಅಸ್ತಿ ಬ್ಯಾಂಕ್, ವೀರ್ಯ ಬ್ಯಾಂಕ್‌ನಂತೆ ಇತ್ತೀಚೆಗೆ ನಡೆಯುತ್ತಿರುವ ಸಂಶೋಧನೆಗಳು 'ಭ್ರೂಣ ಬ್ಯಾಂಕ್' ಉದಯವಾಗುವಂಥ ವಾತಾವರಣವನ್ನು ನಿರ್ಮಿಸುತ್ತಲಿವೆ. ರಕ್ತ ಮಾರಿದ ಹಾಗೆ, ಮೂತ್ರ ಪಿಂಡ ಮಾರಿದ ಹಾಗೆ, ಭ್ರೂಣವನ್ನು ಮಾರಬಹುದು. ಆದರಿಲ್ಲಿ ಸ್ತ್ರೀಯನ್ನು ಭ್ರೂಣ ಸೃಷ್ಟಿಸಬಲ್ಲ ಯಂತ್ರದಂತೆ ಬಳಸುವುದು ನಡೆದು ಅನೇಕ ಕೆಡುಕಿಗೆ ನಾಂದಿ ಹಾಡಬಹುದು. ಆದರೆ ಸಾಕಷ್ಟು ಒಳಿತನ್ನು ಉಂಟು ಮಾಡುವ ಇದನ್ನು ಸಮಾಜವು ದೂಷಿಸಬೇಕೆ ಅಥವಾ ಪುರಸ್ಕರಿಸಬೇಕೆ?**

● ಸ.ಜ. ನಾಗಲೋಟಿಮಠ

ಕಾಲೇಜಿನಲ್ಲಿ ಹಾಗೂ ಹುಬ್ಬಳ್ಳಿಯ ಕಿಮ್ಸ್ ಸಂಸ್ಥೆಯಲ್ಲಿ ಇದರ ಸಂಘಟನೆ ಗಳು ಪ್ರಾರಂಭವಾಗಿವೆ. ಈ ಸಂಘಟನೆಗಳಿಗೆ ನಾವು ಬ್ಯಾಂಕ್ ಎಂದು ಕರೆಯದೇ ಹೋದರೂ, ಅವುಗಳ ಕಾರ್ಯ ಬ್ಯಾಂಕಿನ ಕಾರ್ಯವನ್ನು ಹೋಲುತ್ತದೆ.

ಇತ್ತೀಚೆಗೆ ನಡೆಯುತ್ತಿರುವ ಸಂಶೋಧನೆಗಳು 'ಭ್ರೂಣ ಬ್ಯಾಂಕ್' ಉದಯವಾಗುವಂಥ ವಾತಾವರಣವನ್ನು ನಿರ್ಮಿಸುತ್ತಲಿವೆ.

ಭ್ರೂಣದಲ್ಲಿರುವ ಜೀವಕಣಗಳು ತಮ್ಮನ್ನು ಇನ್ನೂ ಗುರುತಿಸಿಕೊಂಡಿರುವುದಿಲ್ಲ. ಅವುಗಳನ್ನು ಬೇರೆಯವರಿಗೆ ಕಸಿಮಾಡಿದರೆ ಈ ಜೀವಕಣಗಳು ಅವರ ದೇಹದಲ್ಲಿ ನಿರಾತಂಕವಾಗಿ ಬೆಳೆಯುತ್ತವೆ, ಹಾಗೂ ಕಾರ್ಯಮಾಡಲೂ ಸಹ ಪ್ರಾರಂಭಿಸುತ್ತವೆ. ಉದಾಹರಣೆಗೆ ಪಾರ್ಕಿನಸನ್ ರೋಗವನ್ನು ಗುಣ ಪಡಿಸಲು ಈಗ ಭ್ರೂಣದ ಮಿದುಳು, ಜೀವಕಣ ಕಸಿ ಮಾಡುತ್ತಲಿರುವರು. ಮಧುಮೇಹವನ್ನು ನಿಯಂತ್ರಿಸಲು ಮೇದೋಜೀರಕ (Pancreas) ಭ್ರೂಣಕಣ ಗಳ ಕಸಿ ಪ್ರಾರಂಭವಾಗಿದೆ. ಸಂಜಾತ ರಕ್ತದೋಷಗಳನ್ನು ಗುಣಪಡಿಸಲು, ಭ್ರೂಣದ ಅಸ್ತಿಮಜ್ಜೆಯ ಕಸಿ ಪ್ರಾರಂಭವಾಗುತ್ತಲಿದೆ. ಹೀಗೆ ಹತ್ತು ಹಲವಾರು ಪ್ರಯತ್ನಗಳು ಸಾಗಿವೆ. ಇದೆಲ್ಲವನ್ನು ನೋಡಿದರೆ 'ಭ್ರೂಣ ಬ್ಯಾಂಕ್' ಮೊಳಕೆ ಒಡೆಯುತ್ತಿದೆ ಅನ್ನಿಸದೇ ಇರದು.

ಬ್ಯಾಂಕಿನಲ್ಲಿಡಲು ಭ್ರೂಣಗಳನ್ನು

**ಕೊಡುವವರಾರು ?**

ಭ್ರೂಣಗಳನ್ನು ಹುಡುಕುವ ತಾಪತ್ರಯವೇ ಇಲ್ಲ. ಗರ್ಭಪಾತಗಳನ್ನು ಕಾಯ್ದೆ ಬದ್ಧವಾಗಿ ಮಾಡಿರುವುದರಿಂದ ಇಂದು ದೇಶಾದ್ಯಂತ ವೈದ್ಯಕೀಯ ಗರ್ಭ ಪಾತಗಳು ನಡೆದಿವೆ. ಲಕ್ಷಗಟ್ಟಲೇ ಗರ್ಭಪಾತಗಳು ಪ್ರತಿವರ್ಷ ನಡೆಯುತ್ತವೆ. ಇವುಗಳನ್ನು ಸರಿಯಾದ ಸೂಕ್ತ ವೈಜ್ಞಾನಿಕ ಕ್ರಮದಲ್ಲಿ ಸಂಗ್ರಹಿಸಿದರೆ ಸಾಕು ಅದೇ ಭ್ರೂಣಬ್ಯಾಂಕ್ ಆಗಬಲ್ಲದು. ಸಂಗ್ರಹಿಸಿದ ಭ್ರೂಣಗಳ ಜೀವಕಣಗಳನ್ನು ಉಪಯೋಗಿಸಿ ಹಲವಾರುಗುಣವಾಗದೇ ಇರುವ ರೋಗಗಳನ್ನು ಗುಣ ಪಡಿಸಲು ಸಾಧ್ಯ.

ಇಂದು ಗರ್ಭಪಾತವನ್ನು ಕುರುಡು ವಿಧಾನ ದಂತೆ ನಡೆಸುತ್ತಾರೆ. ಇಂದಿನ ಗರ್ಭಪಾತದಲ್ಲಿ ಭ್ರೂಣಕ್ಕೆ ಯಾವ ಗಾಯಗಳಾಗದೇ ಬರುವುದು ಕಷ್ಟ. ಸಾಮಾನ್ಯವಾಗಿ ಅದು ತುಂಡು ತುಂಡಾಗಿ ಹೊರಬರುತ್ತದೆ. ಕಾರಣ ಅದನ್ನು ಕಸದಂತೆ ಪರಿಗಣಿಸಿ ಆಸ್ಪತ್ರೆಗಳಲ್ಲಿ ಸುಟ್ಟು ಬೂದಿ ಮಾಡಬಹುದು ಇಲ್ಲವೇ, ನೆಲದಲ್ಲಿ ಹುಗಿದು ಗೊಬ್ಬರ ಮಾಡಬಹುದು. ಗರ್ಭಪಾತದ ವಿಧಾನಗಳನ್ನು ಸುಧಾರಿಸಿದರೆ ಭ್ರೂಣವು ಘಾಸಿ ಗೊಳ್ಳದೇ, ಗಾಯಗೊಳ್ಳದೇ ಸಿಗುವ ಸಾಧ್ಯತೆ ಸಾಕಷ್ಟು ಇದೆ.

**ವೈದ್ಯಕೀಯ ಸಂಶೋಧನೆಗಳು**

ಫಿನ್‌ಲ್ಯಾಂಡ್ ಹಾಗೂ ಅಮೆರಿಕೆಯ ವೈದ್ಯ ವಿಜ್ಞಾನಿಗಳು ೧೯೭೩ರಲ್ಲಿ ಒಂದು ಪ್ರಯತ್ನ ಪ್ರಾರಂಭಿಸಿದರು. ಗರ್ಭಪಾತದಲ್ಲಿ ದೊರೆತ ಸಜೀವ ಭ್ರೂಣಗಳನ್ನು ಸಂಗ್ರಹಿಸಿ ಅವುಗಳ ಮೆದುಳನ್ನು ದ್ರಾವಣದಲ್ಲಿಟ್ಟು , ಎಷ್ಟು ದಿನ ಬದುಕಿ ಉಳಿಯುತ್ತದೆ ? ಎಂಬುದನ್ನು ಪತ್ತೆ ಹಚ್ಚಲು ಪ್ರಯತ್ನಿಸಿದರು. ಇನ್ನೊಂದು ಸಂಶೋಧನಾ ಕೇಂದ್ರದಲ್ಲಿ ಸಂಪೂರ್ಣ ಭ್ರೂಣಗಳನ್ನು ದ್ರಾವಣದಲ್ಲಿಟ್ಟು, ಅವುಗಳ ಉಸಿರಾಟ ಹೇಗೆ? ಎಂಬುದನ್ನು ತಿಳಿಯಲು ಸಾಹಸ ಮಾಡಿದರು. ಇಂಥ ಪ್ರಯತ್ನಗಳು ಪ್ರಾರಂಭ ಆಗು 'ಷ್ಟರಲ್ಲಿ ಕೆಲವು ಜನರು ಕೋರ್ಟ್ ಕಟ್ಟೆ ಹತ್ತಿ ''ವೈದ್ಯ ವಿಜ್ಞಾನಿಗಳು ಭ್ರೂಣಗಳ ತಲೆಗಳನ್ನು ಕತ್ತರಿಸುತ್ತಿದ್ದಾರೆ'' ಇದು ಅಮಾನುಷ, ಹೇಯ ಕೃತ್ಯ ಎಂದು ಗುಲ್ಲೆಬ್ಬಿಸಿದರು. ಅಮೆರಿಕೆಯ ಸರಕಾರವು ಇವರನ್ನು ಶಾಂತಗೊಳಿಸಲು, ನಡೆದ ಸಂಶೋಧನೆಗಳನ್ನೆಲ್ಲ ಸ್ಥಗಿತಗೊಳಿಸಿತು. ಸಂಶೋಧನೆ ಮುಂದುವರೆದದ್ದೇ ಆಗಿದ್ದರೆ, ಇಷ್ಟರಲ್ಲಿ ಹಲವಾರು ಅದ್ಭುತಗಳು ಗೋಚರಿಸಬಹುದಿತ್ತು. ಈಗ ಮತ್ತೆ ಇಂಥ ಪ್ರಯೋಗಗಳಿಗೆ ಅನುವು ಸಿಕ್ಕಿದೆ. ವಿಜ್ಞಾನಿಗಳು ಸಂತೋಷದಿಂದ ಸಂಶೋಧನೆ ಪ್ರಾರಂಭಿಸಿದ್ದಾರೆ.

**ವ್ಯಾಪಾರಿ ಮನೋಭಾವ**

ವ್ಯಾಪಾರಿ ಮನೋಭಾವ ಉಳಿದೆಲ್ಲ ಕಡೆ ಸ್ವಾಗತಿ ಸಲ್ಪಡಬಹುದು. ಒಂದು ಸಲ ಅದು ಮನುಷ್ಯರಿಗೆ ಸಂಬಂಧಿಸಿದರೆ ಗೊಂದಲ ಏಳುವುದು ಸಹಜ. ಭ್ರೂಣಬ್ಯಾಂಕ್ ಒಳ್ಳೆಯದು. ಅದರಲ್ಲಿ ವ್ಯಾಪಾರ ಎಂಥದು ಎನ್ನುತ್ತೀರಾ ? ಅದು ಸಾಧ್ಯ.

ಭ್ರೂಣಗಳನ್ನು ಯಾಕೆ ಮಾರಬಾರದು ? ಎಂಬುದು, ಆ ಪ್ರಶ್ನೆ. ರಕ್ತ ಮಾರಿದ ಹಾಗೆ, ಮೂತ್ರ ಪಿಂಡ ಮಾರಿದ ಹಾಗೆ, ಭ್ರೂಣವನ್ನು ಮಾರಬಹುದು. ಶ್ರೀಮಂತ ದೇಶಗಳು ಬಡ ದೇಶಗಳಿಂದ ಭ್ರೂಣಗಳನ್ನು ಹಣಕೊಟ್ಟು ಆಮದು ಮಾಡಿಕೊಳ್ಳಬಹುದು ಇದನ್ನು ಸಮಾಜವು ದೂಷಿಸಬೇಕೆ ಅಥವಾ ಪುರಸ್ಕರಿಸಬೇಕೆ ?

ಒಂದು ಪಕ್ಷ ಇಂಥ ಬ್ಯಾಂಕ್ ಬಂದರೆ, ಶ್ರೀಮಂತ ವೃದ್ಧರು ತಮ್ಮ ಜೋಲುಬಿದ್ದ ಗಲ್ಲಗಳನ್ನು ದುಂಡಗೆ ಮಿಂಚುವಂತೆ ಮಾಡಿಸಿಕೊಳ್ಳಬಹುದು.

ಶಕ್ತಿಹೀನ ಜಠರ ಚುರುಕಾಗಿ, ಪಚನಶಕ್ತಿ ವೃದ್ಧಿಸುವುದು,. ಜೊಪ್ಪೆ ಸ್ತನಗಳು ಮಾಟಗೊಳ್ಳಬಹುದು, ಇದರಿಂದ ಜೈವಿಕ ತಾಂತ್ರಿಕ ಸಂಸ್ಥೆಗಳೇ ತಲೆಯೆತ್ತ ಬಹುದು. ಭ್ರೂಣಗಳಿಂದ ಪಡೆದ ಕಚ್ಚಾಸಾಮಗ್ರಿಗಳು (ಜೀವಕೋಶಗಳು) ಇಂಥ ಸಂಸ್ಥೆಗಳಲ್ಲಿ ಬೇಕಾದ ಅಂಗಾಂಶಗಳ ರೂಪ ಪಡೆದು ಮಾರಾಟಕ್ಕೆ ಸಿಗಬಹುದು. ಇವು ಅಮೂಲ್ಯ ವಸ್ತುಗಳಾಗುವುದರಲ್ಲಿ ಸಂದೇಹವಿಲ್ಲ. ಇದರಿಂದ ಭ್ರೂಣದ ವ್ಯವಹಾರವನ್ನು ಕುದುರಿಸಿದಂತೆ ಆಗುವುದಿಲ್ಲವೆ ? ಮಾನವ ಅಂಗಾಂಶಗಳ ಕೂಸುಗಳೇ ಉದಯಿಸಬಹುದು.

ಪಾಪ-ಪುಣ್ಯ, ಮಾನವತೆಗಳನ್ನು ಪ್ರತಿಪಾದಿಸುವ ವರು ಇದನ್ನು ಒಪ್ಪಲು ಸಾಧ್ಯವಿಲ್ಲ. ಓರ್ವ ಸ್ತ್ರೀಯನ್ನು ಭ್ರೂಣ ಸೃಷ್ಟಿಸಬಲ್ಲ ಯಂತ್ರದಂತೆ ಬಳಸುವುದು ಅಕ್ಷಮ್ಯ.

ತಂದೆಯ ರೋಗವನ್ನು ಗುಣಪಡಿಸುವಲ್ಲಿ ಭ್ರೂಣದ ಜೀವಕಣಗಳು ಉಪಯುಕ್ತವೆಂದರೆ ಮಗಳು ತನಗೆ ಬೇಡವಾದ ಭ್ರೂಣವನ್ನು ದಾನವಾಗಿ ಕೊಡಲು ಮುಂದೆ ಬರಬಹುದು. ಯಾಕೆ ? ಕೆಲವರು ಭ್ರೂಣ ದಾನಕ್ಕೋಸ್ಕರವೇ ಗರ್ಭಧರಿಸಲೂ ಬಹುದು. ಇದೆಲ್ಲ ನೈತಿಕ ನೆಲೆಗಟ್ಟಿನ ಮೇಲೆ ನಿಂತ ಕನಸಿನ ಸೌಧ ವಾಯಿತು. ಆದರೆ ಅನೈತಿಕತೆ ಮೂಡಿದರೆ ಏನಾದೀತು ? ಸ್ತ್ರೀಯನ್ನು ಒಂದು ಸಾಧನದಂತೆ ಬಳಸಲೂ ಸಾಧ್ಯ ಎಂಬ ಹೆದರಿಕೆ ಇದೆ.

ಪ್ರತಿಯೊಂದು ಆವಿಷ್ಕಾರದಿಂದ ಕೆಲವು ಒಳ್ಳೆಯ ಲಾಭಗಳಾದರೆ, ಕೆಲವು ಹಾನಿಗಳನ್ನು ಮಾನವರು ನಿರ್ಮಿಸುತ್ತಾರೆ. ಏನೆ ಆಗಲಿ ಭ್ರೂಣ ಕಸಿ ಸಂಶೋಧನೆಗೆ ಎಲ್ಲ ದೇಶಗಳೂ ಪ್ರೋತ್ಸಾಹಿಸಬೇಕೆಂದು ವಿಜ್ಞಾನಿಗಳ ಕೂಗು. ಇದರಿಂದ ಹಲವಾರು ಸಂಜಾತ ತೊಂದರೆಗಳಿಂದ ಬಳಲುತ್ತಿರುವ ರೋಗಿಗಳಿಗೆ ಮುಕ್ತಿ ಸಿಕ್ಕೀತು. ವೃದ್ಧರಲ್ಲಾದ ಸವಕಳಿ ಅಂಗಾಂಶದ ಬದಲು ಹೊಸ ಅಂಗಾಂಶಗಳು ಕಾರ್ಯ ಮಾಡಬಹುದು. ಇನ್ನೂ ಅನೇಕ ಲಾಭಗಳು ದೊರೆತು ಮಾನವ ಕಲ್ಯಾಣ ಆಗುವುದು ಸತ್ಯ.

## ವೈದ್ಯರನ್ನು ಕೇಳದೇ ಪ್ಯಾರಸೆಟಮಾಲ್ ತೆಗೆದುಕೊಂಡೀರೆ ಜೋಕೆ

ಯಾವುದೇ ಸಾಮಾನ್ಯ ನೋವು, ಜ್ವರದಂಥ ಕಾಯಿಲೆಗೆ ಆರಂಭಿಕವಾಗಿ ಕೊಡುವ ಔಷಧಿ, ಪ್ಯಾರಸೆಟಮಾಲ್ .ಮಾತ್ರೆಯಾಗಿಯೇ ನೀಡುತ್ತಾರಾದರೂ, ಕುಡಿಯುವ ಮದ್ದಾಗಿಯೂ ಕೊಡುವುದಿದೆ. ತುಂಬ ರಕ್ಷಣಾತ್ಮಕವಾದ, ತೊಂದರೆ ತಾರದ ಮದ್ದೆಂದೇ ಇದನ್ನು ಪರಿಗಣಿಸಿ ನಂಬಲಾಗಿದೆ.

ಆದರೆ ಅದು ಇನ್ನು ನಂಬಲರ್ಹವಾದ ಹೇಳಿಕೆ ಯಲ್ಲ. 'ನ್ಯೂ ಇಂಗ್ಲೆಂಡ್ ಜರ್ನಲ್ ಆಫ್ ಮೆಡಿಸಿನ್' ಇತ್ತೀಚಿನ ಸಂಶೋಧನಾತ್ಮಕ ಬರೆಹದಂತೆ ಪ್ಯಾರಸೆಟಮಾಲನ್ನು ಹೆಚ್ಚಿನ ಪ್ರಮಾಣದಲ್ಲಿ ತೆಗೆದುಕೊಳ್ಳುವು ದರಿಂದ ಮೂತ್ರಪಿಂಡಗಳ ತೊಂದರೆಯುಂಟಾಗುತ್ತದೆ.

ಅತಿಯಾಗಿ ಸೇವಿಸಿದಾಗ ಪ್ಯಾರಸೆಟಮಾಲ್ ಪಿತ್ತಜನಕಾಂಗವನ್ನು ಸಹ ಬಾಧಿಸುತ್ತದೆಂಬುದು ತೀರಾ ಇತ್ತೀಚಿನ ಸಂಶೋಧನಾ ಫಲಿತಾಂಶವಾಗಿದೆ.

ತಲೆನೋವು, ಸಾಮಾನ್ಯ ಜ್ವರ ಬಂದರೆ ವೈದ್ಯರನ್ನು ಕೇಳದೆಯೇ ಪ್ಯಾರಸೆಟಮಾಲ್ ತೆಗೆದುಕೊಳ್ಳುವವರಿದ್ದಾರೆ. ಅವರಿಗಿದು ಎಚ್ಚರಿಕೆಯ ಗಂಟೆ.

# ಹೃದಯ ಶಸ್ತ್ರತಜ್ಞನ ಹಂದಿ ಹಗರಣ

೧೩ನೆಯ ಡಿಸೆಂಬರ್, ೯೬:

ಅಸ್ಸಾಮಿನ ರಾಜಧಾನಿ ಗುವಾಹಟಿಯಿಂದ ಸುಮಾರು ೨೭ ಕಿ.ಮೀ. ದೂರದಲ್ಲಿದೆ ಜಗದಾಳ್ ಎಂಬ ಹಳ್ಳಿ, ಇಲ್ಲಿದೆ ''ಡಾ। ಧನಿರಾಂ ಬರೂವ ಹೃದ್ರೋಗ ಚಿಕಿತ್ಸೆ ಮತ್ತು ಸಂಶೋಧನಾ ಕೇಂದ್ರ.'' ಇದರ ಮುಖ್ಯಸ್ಥನೇ ಡಾ। ಬರೂವ.

ಇವನು ಸುದ್ದಿ ಮಾಧ್ಯಮಗಳಿಗೆ ಕರೆ ಕೊಟ್ಟನು. ಹಂದಿಯ ಹೃದಯವನ್ನು ಮನುಷ್ಯನಿಗೆ ಬದಲಿ ಜೋಡಿಸುವ ಐತಿಹಾಸಿಕ ಶಸ್ತ್ರ ಚಿಕಿತ್ಸೆಯನ್ನು ಮಾಡಲಿರುವುದಾಗಿ, ಇದರಲ್ಲಿ ಹಾಂಗ್‌ಕಾಂಗಿನ ಪ್ರಿನ್ಸ್ ವೇಲ್ಸ್ ಆಸ್ಪತ್ರೆಯ ಡಾ। ಜೊನಾಥನ್ ಕೆ.ಎಸ್.ಹೋ ಮತ್ತು ಹೈದರಾಬಾದಿನ ಮೆಡಿಸಿಟಾ ಆಸ್ಪತ್ರೆಯ ಡಾ। ಸಿ.ಜೆ. ಜೇಮ್ಸ್‌ರವರು ಸಹಕಾರ ನೀಡಲಿರುವುದಾಗಿಯೂ, ಇಂತಹ ಮಹಾನ್ ಸಾಧನೆಯನ್ನು ಪ್ರಕಟಿಸುವ ಸುವರ್ಣಾವಕಾಶ ಒದಗಿಸಿ ಕೊಡುವುದಾಗಿಯೂ ಪತ್ರಿಕೆಗಳಿಗೆಲ್ಲ ಆಹ್ವಾನ ನೀಡಿದನು.

ಇವನ ಆಹ್ವಾನಕ್ಕೆ ಓಗೊಟ್ಟು ಒಂದು ಇಂಗ್ಲಿಷ್ ಪತ್ರಿಕೆ ಹಾಗೂ ಒಂದು ಅಸ್ಸಾಮಿ ಪತ್ರಿಕೆಯ ವರದಿಗಾರರು ಅಲ್ಲಿಗೆ ಬಂದರು. ಉಳಿದ ಸುದ್ದಿ ಮಾಧ್ಯಮಗಳು ಗಮನ ನೀಡಲಿಲ್ಲ.

ಡಿಸೆಂಬರ್ ೧೫, ೧೯೯೬

ಅಸ್ಸಾಮಿನ ಗೋಲ್ಘಾಟ್ ಜಿಲ್ಲೆಯ ಸಿಯಾಲ್ ಖೈತಿಯ ೩೨ ವರ್ಷ ವಯಸ್ಸಿನ ಪೂರ್ಣೋ ಸೈಕಿಯ ಎಂಬ ಹೃದ್ರೋಗಿಯ ರೋಗಗ್ರಸ್ತ ಹೃದಯವನ್ನು ತೆಗೆದು ಹಾಕಿ, ಅದರ ಸ್ಥಳದಲ್ಲಿ ಒಂದು ನಾಟಿ ಹಂದಿಯ ಹೃದಯವನ್ನು ಬದಲಿ ಜೋಡಿಸುವ ಶಸ್ತ್ರಚಿಕಿತ್ಸೆಯನ್ನು ಮಾಡಿ ಮುಗಿಸಿದನು.

ಡಿಸೆಂಬರ್ ೧೫, ೧೯೯೭

ಈ ಸುದ್ದಿಯನ್ನು ಎರಡು ಪತ್ರಿಕೆಗಳು ಪ್ರಕಟಿಸಿದವು. ನಂತರ ಒಂದು ಸುದ್ದಿ ಸಂಸ್ಥೆಯು ಈ ಮಾಹಿತಿಯನ್ನು ತನ್ನ ವಿಶಾಲ ಜಾಲದಲ್ಲಿ ಹರಡಿತು. ಸುದ್ದಿ ಮಿಂಚಿನ ವೇಗದಲ್ಲಿ ರಾಷ್ಟ್ರೀಯ ಹಾಗೂ ಅಂತಾ ರಾಷ್ಟ್ರೀಯ ಪತ್ರಿಕೆಗಳನ್ನು ತಲುಪಿತು. ಡಾ। ಬರೂವ ಹಂದಿ ಹೃದಯವನ್ನು ಜೋಡಿಸುತ್ತಿರುವ ಚಿತ್ರಗಳು ಪತ್ರಿಕೆಗಳಲ್ಲಿ ಹಾಗೂ ಟಿ.ವಿ.ಗಳಲ್ಲಿ ಪ್ರಸಾರವಾದವು.

ಪವಾಡ ಸದೃಶವಾದ ಈ ಸುದ್ದಿಯನ್ನು ಕೇಳಿ ಜನ ಸಾಮಾನ್ಯರು ಬೆರಗುಗೊಂಡರೆ ಇಡೀ



**ಈ ದೇಶಕ್ಕೇನಾಗಿದೆ ?**
**ಈ ದೇಶದವರಿಗೇನಾಗಿದೆ ?**
**ಅಂದು ರಾಮರ್ ಪಿಳ್ಳೆ ! ಇಂದು ಡಾ।ಧನಿರಾಂ ಬರೂವ ! !**
**ಮೂಲಿಕೆಗಳಿಂದ ಪೆಟ್ರೋಲ್ ತಯಾರಿಸ ಬಹುದೆಂದು, ರಾಷ್ಟ್ರೀಯ ಮಟ್ಟದಲ್ಲಿ ಸುದ್ದಿಯನ್ನು ಮಾಡಿ, ತಮಿಳುನಾಡು ಸರ್ಕಾರದಿಂದ ಇನ್ನಿಲ್ಲದ ಸವಲತ್ತುಗಳನ್ನು ಗಳಿಸಿ, ಠುಸ್ಸೆಂದು ಆ ಸದ್ದು ಅಡ ಗುವಷ್ಟರಲ್ಲಿಯೇ ಅಂತಾರಾಷ್ಟ್ರೀಯ ಮಟ್ಟದಲ್ಲಿ ತನ್ನ ಹೆ(ಕೆ)ಸರನ್ನು ಕುಖ್ಯಾತಗೊಳಿಸಬೇಕೆ ಈ ಧನಿರಾಂ ಬರೂವ ! ಹಂದಿಯ ಹೃದಯವನ್ನು ಮನುಷ್ಯನಿಗೆ ಯಶಸ್ವಿಯಾಗಿ ಬದಲಿ ಜೋಡಿಸಿದ ಬುರುಡೆಯನ್ನು ಬಿಡಬೇಕೆ ಈ ಭಡವ ?**

ವೈದ್ಯಕೀಯ ಜಗತ್ತು ಮೆಟ್ಟಿ ಬಿದ್ದಿತು! ಆಶ್ಚರ್ಯದೊಡನೆ ಅನುಮಾನದ ಹೊಗೆ ಯೆದ್ದಿತು.

ಈ ಪವಾಡ ನಡೆದದ್ದು ಅಸ್ಸಾಂನಲ್ಲಿನ ಒಂದು ಹಳ್ಳಿಯಿರುವ ಆಸ್ಪತ್ರೆಯೊಂದರಲ್ಲಿ!....ಕೇವಲ ಅಸ್ಸಾಂ ಮಾತ್ರವಲ್ಲ, ಇಡೀ ಈಶಾನ್ಯ ರಾಜ್ಯಗಳಲ್ಲಿ ಜನ ಸಾಮಾನ್ಯರ ದೈನಂದಿನ ಚಿಕಿತ್ಸಾ ತಪಾಸಣೆಗಳಿಗೆ ಅಗತ್ಯವಾದ ಮೂಲ ಭೂತ ಸೌಕರ್ಯಗಳೇ ಇಲ್ಲದ ಸ್ಥಳದಲ್ಲಿ !

ದೈನಂದಿನ ತಪಾಸಣೆಗಳಿಗೂ ದೂರದ ಕಲ್ಕತ್ತಕ್ಕೆ ಹೋಗಬೇಕು. ವಾಸ್ತವ ಹೀಗಿರುವಾಗ... ಹಂದಿಯ ಹೃದಯವನ್ನು ಬದಲಿ ಜೋಡಿಸುವಂತಹ ಅದ್ವಿತೀಯ ಅಸಾಮಾನ್ಯ ಶಸ್ತ್ರಚಿಕಿತ್ಸೆಯೊಂದು ಅಲ್ಲಿ ನಡೆಯಿತೆಂದರೆ....

''ದಾಲ್ ಮೆ ಕುಚ್ ಕಾಲಾಹೈ'' ಎಂದು ಅಪನಂಬಿಕೆಯನ್ನು ವ್ಯಕ್ತಪಡಿಸಲಾರಂಭಿಸಿತು ವೈದ್ಯಕೀಯ ಜಗತ್ತು.

**ಡಿಸೆಂಬರ್ ೧೮,೧೯೯೬:**

ಡಾ। ಬರೂವಾರವರ ಆಹ್ವಾನವನ್ನು ಡಿಸೆಂಬರ್ ೧೩ರಂದು ಗಂಭೀರವಾಗಿ ಪರಿಗಣಿಸದ ಎಲ್ಲ ಪತ್ರಿಕೆಗಳು, ವಿದ್ಯುನ್ಮಾನ ಮಾಧ್ಯಮಗಳು ಬರೂವರವರ ಸಂಶೋಧನಾ ಕೇಂದ್ರದ ಮುಂದೆ ಸಾಲುಗಟ್ಟಿದವು.

ಅಸ್ಸಾಮಿನ ರಾಜ್ಯಸಭೆಯಲ್ಲಿ ಭಾರೀ ಕೋಲಾಹಲ ಎದ್ದಿತು. ಸತ್ಯಸಂಗತಿಯು ಅಧಿಕೃತವಾಗಿ ಹೊರ ಬರಲೆಂದು ಒತ್ತಾಯ ಆರಂಭವಾಯಿತು. ಪ್ರಫುಲ್ಲ ಮಹಾಂತೋರವರ ಸರ್ಕಾರದಲ್ಲಿ ಆರೋಗ್ಯಮಂತ್ರಿ ಹಾಗೂ ಸ್ವಯಂ ವೈದ್ಯರಾಗಿರುವ ಡಾ। ಕಮಲ ಕಾಲೀಟ ಅವರು ವಿಚಾರಣಾತಂಡವನ್ನು ರೂಪಿಸಿದರು.

ಈ ವಿಚಾರಣಾ ತಂಡದಲ್ಲಿ ಕಾಮರೂಪ ಜಿಲ್ಲೆಯ ಆರೋಗ್ಯ ಸೇವೆಗಳ ಸಹ ನಿರ್ದೇಶಕರಾಗಿರುವ ಡಾ।ಆರ್.ಸಿ. ವರ್ಮ ಹಾಗೂ ಗುವಾಹಟಿ ಮೆಡಿಕಲ್ ಕಾಲೇಜಿನ ಇಬ್ಬರು ಹೃದ್ರೋಗ ತಜ್ಞರು ಇದ್ದರು. ಇವರು ಸತ್ಯಶೋಧನೆ ನಡೆಸಲು ಬರೂವಾರವರ ಸಂಶೋಧನಾ ಕೇಂದ್ರಕ್ಕೆ ಬರುತ್ತಿದ್ದಂತೆ ಅವರನ್ನು ಶಸ್ತ್ರಧಾರಿ ಕಾವಲುಗಾರರು ತಡೆದರು. ಕೇಂದ್ರದೊಳಗೆ ಹೋಗಲು ತಂಡಕ್ಕೆ ಅನುಮತಿಯನ್ನು ಕೊಡಲಿಲ್ಲ.

**ಡಿಸೆಂಬರ್ ೧೯,೧೯೯೬:**

ಮರುದಿವಸ ವಿಚಾರಣಾ ತಂಡವು ನ್ಯಾಯಾಧೀಶರೊಬ್ಬರನ್ನು, ಶಸ್ತ್ರಸಜ್ಜಿತ ಪೊಲೀಸರನ್ನು ವಾರಂಟಿನ ಜೊತೆಗೆ ಕರೆದೊಯ್ಯಿತು. ಡಾ। ಬರೂವ ಬೇರೆ ದಾರಿಯಿಲ್ಲದೆ ವಿಚಾರಣಾ ತಂಡವನ್ನು ಎದುರಿಸಲೇ ಬೇಕಾಯಿತು.

ಡಾ। ಬರೂವ ವಿಚಾರಣಾ ತಂಡದ ಅಧಿಕೃತತೆಯನ್ನೇ ಪ್ರಶ್ನಿಸಿದನು.



ಡಾ। ಬರೂವಾರ

''ನನ್ನನ್ನು, ನನ್ನ ಶಸ್ತ್ರಕ್ರಿಯಾ ಚಿಕಿತ್ಸೆಯನ್ನು ಪ್ರಶ್ನಿಸುವ ಅಧಿಕಾರ, ಅರ್ಹತೆ ನಿಮಗಿಲ್ಲ'' ಎಂದು ವಾದಿಸಿದನು.

ಅಂದೇ ಸಂಗತಿಯನ್ನು ವಿಷದಗೊಳಿಸುವ ಒಂದು ಪತ್ರಿಕಾ ವರದಿಯನ್ನು, ನಡೆದ ಬಿಡುಗಡೆ ಮಾಡಿದನು. ''ತಾನು ಬದಲಿ ಜೋಡಣೆಯಲ್ಲಿ ಹಂದಿಯ ಹೃದಯವನ್ನು ಇಡಿಯಾಗಿ ಬಳಸಿಲ್ಲ; ರೋಗಿಯ ಹೃದಯ ತಡಿಕೆಯಲ್ಲಿ ಜನ್ಮದತ್ತವಾಗಿದ್ದ ಎರಡು ರಂಧ್ರಗಳನ್ನು ಹಂದಿಯ ಹೃದಯ ಹೊರಪೊರೆ ಯನ್ನು (PERI CARDIVM) ಬಳಸಿ ಮುಚ್ಚಿದ್ದೇನೆ ; ಅಷ್ಟೇ ಎಂದನು.''

**ಡಿಸೆಂಬರ್ ೨೩,೧೯೯೬:**

ವಿಚಾರಣಾ ತಂಡವು ತನ್ನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿತು. ಸರ್ಕಾರದ ಪರವಾಗಿ ಆರೋಗ್ಯ ಮಂತ್ರಿ ಡಾ। ಕಾಲೀಟರವರು ''ಡಾ। ಬರೂವ ಹಂದಿಯ ಹೃದಯವನ್ನು ಮನುಷ್ಯನಿಗೆ ಬದಲಿ ಜೋಡಿಸಿಲ್ಲ, ಇದೊಂದು ವಂಚನೆಯ ಪ್ರಸಂಗ ; ಮಾಧ್ಯಮಗಳಲ್ಲಿ ಕೇವಲ ಪ್ರಚಾರವನ್ನು ಬಯಸಿ ಹೀಗೆ ಮಾಡಿದ್ದಾನೆ'' ಎಂದು ರಾಜ್ಯಸಭೆಯಲ್ಲಿ ಪ್ರಕಟಿಸಿದರು. ಹಾಗೂ 'ತಪ್ಪು ಮಾಹಿತಿ'ಯನ್ನು ಹರಡಿದ ಸುದ್ದಿ ಮಾಧ್ಯಮದ ಮೇಲೆ ಕಾನೂನಿನ ಕ್ರಮ ಕೈಗೊಳ್ಳುವುದಾಗಿ ಹೇಳಿಕೆಯನ್ನಿತ್ತರು. ಸುದ್ದಿ ಮಾಧ್ಯಮವು ''ಡಾ। ಬರೂವರವರ ಬರಹರೂಪದ ಹೇಳಿಕೆಯನ್ನಾಧರಿಸಿ ಸುದ್ದಿಯನ್ನು ರೂಪಿಸಿರುವುದಾಗಿಯೂ, ಆ ಬರಹ ತನ್ನಲ್ಲಿರುವುದಾಗಿಯೂ'' ಸಮರ್ಥಿಸಿಕೊಂಡಿತು.

**ಜನವರಿ ೨, ೧೯೯೭**

ಡಾ। ಬರೂವ ಮತ್ತೊಂದು ವರದಿಯನ್ನು ಪತ್ರಿಕೆಗಳಿಗೆ ಬಿಡುಗಡೆ ಮಾಡಿದನು. ಅದರಲ್ಲಿ ''ಡಿಸೆಂಬರ್ ೩೧ರ ರಾತ್ರಿ ತಾವು ಶಸ್ತ್ರಚಿಕಿತ್ಸೆಯನ್ನು ಆರಂಭಿಸಿ, ಜನವರಿ ೧ ರಂದು ಮುಗಿಸಿದೆ. ಈ ಶಸ್ತ್ರ ಚಿಕಿತ್ಸೆಯಲ್ಲಿ ಪೂರ್ಣೋ ಸೈಕಿಯನಿಗೆ ಕೇವಲ ಹಂದಿಯ ಹೃದಯವನ್ನು ಮಾತ್ರವಲ್ಲ, ಹಂದಿಯ ಶ್ವಾಸಕೋಶಗಳನ್ನು ಹಾಗೂ ಹಂದಿಯ ಮೂತ್ರಪಿಂಡ ಗಳನ್ನೂ ಬದಲಿ ಜೋಡಿಸಿದೆ. ಅಲ್ಲದೆ ಶಸ್ತ್ರಚಿಕಿತ್ಸೆ ಯನ್ನು ನಡೆಸುವಾಗ ರಕ್ತದ ಕೊರತೆ ತಲೆದೋರಿತು. ಆಗ ಹಂದಿಯ ರಕ್ತವನ್ನೇ, ಸುಮಾರು ೬೧/೨ ಲೀಟರಿ ನಷ್ಟು ಬಳಸಿ ಶಸ್ತ್ರಚಿಕಿತ್ಸೆಯನ್ನು ಪೂರೈಸಿದೆ'' ಎಂದು ತನ್ನ ಸಾಹಸದ ವಿವರಗಳನ್ನು ನೀಡಿದ್ದನು.

ಇಷ್ಟು ಮಾತ್ರವಲ್ಲದೆ, ಸ್ವಯಂ ತಾನೇ ಬರೆದು ಸಹಿ ಮಾಡಿದ ಹೇಳಿಕೆಯೊಂದನ್ನೂ ಬಿಡುಗಡೆ ಮಾಡಿದನು.

''ಡಿಸೆಂಬರ್ ೩೦ರಂದು ಪೂರ್ಣೋ ಸೈಕಿಯನ ಆರೋಗ್ಯ ಹಠಾತ್ತಾಗಿ ಕುಗ್ಗಲಾರಂಭಿಸಿತು. ಆತನ ಮೂತ್ರಪಿಂಡಗಳು ವಿಫಲವಾಗಲಾರಂಭಿಸಿದವು, ಅವನ ಶ್ವಾಸಕೋಶಗಳಲ್ಲಿ ರಕ್ತಸಂಚಯ (CONGESTION) ಅಧಿಕವಾಯಿತು. ಹೃದಯ ತೀವ್ರ ಸೋಂಕಿಗೆ ತುತ್ತಾಗಿತ್ತು. ಹಾಗಾಗಿ ನಾನು ಇಂತಹ ಅಪಾಯಕಾರೀ ಶಸ್ತ್ರ ಚಿಕಿತ್ಸೆಯನ್ನು ನಡೆಸುವ ದಿಟ್ಟ ನಿರ್ಧಾರವನ್ನು ಕೈಗೊಳ್ಳಬೇಕಾಯಿತು'' ಎಂದು ವಿವರಿಸಿದ್ದನು.



ಡಾ। ಬರೂವಾನ ಬಲಿ ಪಶು ಪೂರ್ಣೋ ಸೈಕಿಯಾ

ಹಗರಣ

# ಕುರಿ ಹಳ್ಳಕ್ಕೆ ಬಿದ್ದರೆ ಆಳಿಗೊಂದು ಕಲ್ಲೆ ?

ಮಾನವನ ಅಂಗಾಂಗಗಳು ಜನ್ಮತಃ ಕ್ರಿಯಾಹೀನವಾಗಿರಬಹುದು ; ರೋಗಗಳ ಕಾರಣ ತನ್ನ ಸಾಮರ್ಥ್ಯವನ್ನು ಕಳೆದುಕೊಳ್ಳಬಹುದು. ಅಂತಹ ಸಂದರ್ಭಗಳಲ್ಲಿ ಅಂಗಾಂಗ ಮರು ಜೋಡಣೆ ಜೀವದಾನವನ್ನು ಕೊಡುತ್ತದೆ.

ಒಂದು ಭಾಗವನ್ನು ತೆಗೆದು ಮತ್ತೊಂದೆಡೆಗೆ ನಾಟುವ ಪ್ರಕ್ರಿಯೆಯನ್ನು 'ಕಸಿ' (ಟಜನಿಛಾ) ಎಂದು ಕರೆಯುತ್ತೇವೆ. ಇದರಲ್ಲಿ ಹಲವು ವಿಧಗಳಿವೆ.

೧. ಸ್ವಯಂ ಕಸಿ : ಒಬ್ಬ ವ್ಯಕ್ತಿಯ ಒಂದು ಭಾಗವನ್ನು ಛೇದಿಸಿ, ಅವನ ದೇಹದಲ್ಲಿ ಮತ್ತೊಂದೆಡೆಗೆ ನಾಟಿಸುವುದು. ಉದಾ : ಸುಟ್ಟ ಗಾಯವಾದಾಗ, ಗಾಯ ಬೇಗ ವಾಸಿಯಾಗಲೆಂದು, ಚರ್ಮವನ್ನು ಅವನ ದೇಹದ ಇತರ ಭಾಗದಿಂದ ತೆಗೆದು ಸುಟ್ಟ ಗಾಯದ ಮೇಲೆ ಕಸಿ ಮಾಡುವಿಕೆ.

೨. ಸಮಕಸಿ : ಇದು ಅವಳಿ ಮಕ್ಕಳಲ್ಲಿ ನಡೆಯುವ ಕಸಿ.

೩. ಸ್ವಪ್ರಭೇದ ಕಸಿ : ತಮಿಳುನಾಡಿನ ವಳ್ಳಿವಾಕ್ಕಂನಲ್ಲಿರುವ ಅಣ್ಣಾತೆಯ ಮೂತ್ರ ಪಿಂಡವನ್ನು, ಸೌದಿ ಯಲ್ಲಿರುವ ಶೇಖರನಿಗೆ ಕಸಿ ಮಾಡುವಿಕೆ. ಅವಳಿ ಮಕ್ಕಳಲ್ಲದ ಭಿನ್ನ ವ್ಯಕ್ತಿಗಳ ನಡುವೆ ನಡೆಯುವ ಕಸಿ.

೪. ಅನ್ಯಪ್ರಭೇದ ಕಸಿ : ಮನುಷ್ಯ ಒಂದು ಪ್ರಭೇದ. ಮನುಷ್ಯನಲ್ಲದ, ಆದರೆ ಮನುಷ್ಯನಿಗೆ ಸನಿಹ ವಾದ ಪ್ರಭೇದಗಳಿಂದ ಅಂಗಾಂಗಳನ್ನು ಪಡೆದು ಮಾಡುವ ಕಸಿ : ಉದಾ : ಚಿಂಪಾಂಜಿಯ ಹೃದಯವನ್ನು ಮನುಷ್ಯನಿಗೆ ಜೋಡಿಸುವುದು.

ಅನ್ಯಪ್ರಭೇದ ಕಸಿಗಳಲ್ಲಿ ಎರಡು ಉಪ ವಿಭಾಗಗಳಿವೆ.

ಪರಕಸಿ (YENOGRAFT) ಸಂಪೂರ್ಣ ಭಿನ್ನವಾಗಿರುವ ಎರಡು ಜೀವಿಗಳ ನಡುವೆ ನಡೆಯುವ ಕಸಿ. ಆನೆಯ ರುಂಡವನ್ನು ಮನುಷ್ಯನ ಮುಂಡಕ್ಕೆ ಸೇರಿಸಿ ಗಜಾನನನ್ನು ರೂಪಿಸಿದಂತೆ. ಡಾ। ಬರೂವ ತಂಡ ನಡೆಸಿದ ಕಸಿಯೂ ಇದೇ ವರ್ಗಕ್ಕೆ ಬರುತ್ತದೆ.

ಪ್ರಾಣಿಕಸಿ (Zoo GRAFT) ವಿಕಾಸದಲ್ಲಿ ಮನುಷ್ಯನಿಗಿಂತ ತೀರಾ ಕೆಳಮಟ್ಟದಲ್ಲಿರುವ ಪ್ರಾಣಿಯ ಅಂಗವನ್ನು ಕಸಿಯಲ್ಲಿ ಬಳಸುವಿಕೆ.

ಇಷ್ಟು ವೈವಿಧ್ಯಮಯ ಕಸಿಗಳಲ್ಲಿ ಸ್ವಯಂಕಸಿ ಹಾಗೂ ಸಮಕಸಿಗಳು ಸಂಪೂರ್ಣ ಯಶಸ್ವಿಯಾಗು ತ್ತವೆ. ಸ್ವಪ್ರಭೇದ ಕಸಿಗಳು ಇತ್ತೀಚಿನ ದಿನಗಳಲ್ಲಿ ಯಶಸ್ವಿಯಾಗುತ್ತಿವೆ. ಆದರೆ ಕಸಿಗೆ ಅಂಗಾಂಗಳ ಕೊರತೆ ಅಧಿಕವಾಗಿದೆ. ಆ ಕಾರಣದಿಂದಲೇ ''ಬೆಂಗಳೂರಿನ ಕಿಡ್ನಿ ಅಪಹರಣ ಪ್ರಕರಣ'' ವಿಶ್ವ ಕುಖ್ಯಾತವಾಯಿತು.

ಅನ್ಯ ಪ್ರಭೇದ ಕಸಿಗಳು ಯಶಸ್ವಿವಾಗಿಲ್ಲ. ಆದರೆ ಅಂತಹ ಪ್ರಯತ್ನಗಳು ಸಾಕಷ್ಟು ನಡೆದು ವಿಫಲವಾಗಿವೆ. ಬಹುಶಃ ಹಂದಿಯ ಹೃದಯ ಕವಾಟವನ್ನು ಮಾತ್ರ ಸ್ವಲ್ಪ ಮಟ್ಟಿಗೆ ಯಶಸ್ವಿಯಾಗಿ ಮನುಷ್ಯರಿಗೆ ಜೋಡಿಸಬಹುದು. ಉಳಿದ ಪ್ರಯೋಗಗಳೆಲ್ಲ ಫಲಕಾರಿಯಾಗಿಲ್ಲ.

೧೯೮೮ರಲ್ಲಿ ಹಂದಿಯ ಮೂತ್ರಪಿಂಡವನ್ನು ಮನುಷ್ಯರಿಗೆ ಜೋಡಿಸುವ ಪ್ರಯೋಗ ನಡೆಯಿತು. ೧೯೮೪ರಲ್ಲಿ ಅಮೆರಿಕದ ವೈದ್ಯರು ಮಗುವೊಂದಕ್ಕೆ ಕೋತಿಯ ಹೃದಯವನ್ನು ಜೋಡಿಸಿದರು. ನಮ್ಮ ಪುರಾಣದಲ್ಲಿ ಮಾತ್ರ ಸರ್ಜನ್ ಪರಮೇಶ್ವರನು ನಡೆಸಿದ ''ಗಜಾನನ ಶೀರ್ಷ ಮರು ಜೋಡಣೆ'' ಯಶಸ್ವಿಯಾಗಿದೆ. ಇದನ್ನು ಹುಲು ಮಾನವರು ಸಾಧಿ ಸುವ ಕಾಲ ಹತ್ತಿರದಲ್ಲೆಲ್ಲೂ ಕಾಣುತ್ತಿಲ್ಲ.

ಆದರೆ....

ಜೆನಿಟಿಕ್ ಇಂಜಿನಿಯರಿಂಗ್ ಶರವೇಗದಲ್ಲಿ ಅಭಿವೃದ್ಧಿ ಗೊಳ್ಳುತ್ತಿರುವುದರಿಂದ ಮಾನವನ ಸೂಕ್ತ ವಂಶವಾಹಿಗಳನ್ನು ಹಂದಿಗಳ ವಂಶವಾಹಿಗಳಲ್ಲಿ

---

''ರೋಗಿಯ ಸಮೀಪ ಬಂಧುಗಳಿಂದ, ಇಂತಹ ಗಂಭೀರ ಶಸ್ತ್ರಚಿಕಿತ್ಸೆಯನ್ನು ನಡೆಸಲು ನಾನು ಅನುಮತಿಯನ್ನು ಪೂರ್ವಭಾವಿಯಾಗಿಯೇ ಪಡೆದೆ. ಸೈಕಿಯನ ಜೀವವನ್ನು ಉಳಿಸಲು ನಾನು ಡಿಸೆಂಬರ್ ೩೧ರ ರಾತ್ರಿ ೧೦.೧೦ಕ್ಕೆ ಶಸ್ತ್ರಚಿಕಿತ್ಸೆಯನ್ನು ಆರಂಭಿಸಿದೆ. ಪೂರ್ಣೋ ಸೈಕಿಯನ ರಕ್ತಗುಂಪು 'O' ಆಗಿತ್ತು. ಹಾಗಾಗಿ ನಾನು 'O' ಗುಂಪಿನ ಹಂದಿಯ ಹೃದಯ ಹಾಗೂ ಶ್ವಾಸಕೋಶಗಳನ್ನು ಬಳಸಿದೆ. ಶಸ್ತ್ರಚಿಕಿತ್ಸೆಯು ಜನವರಿ ೧ರ ಬೆಳಿಗ್ಗೆ ೫ ಗಂಟೆಯವರೆಗೆ ನಡೆಯಿತು. ಸೈಕಿಯನ ದೇಹವು ಹಂದಿಯ ಹೃದಯ, ಶ್ವಾಸಕೋಶ ಹಾಗೂ

---

## ಹಂದಿ ಹೃದಯ ಏಕೆ ನಾಟಲಿಲ್ಲ ?

ಈ ದೇಶವನ್ನು ಕಾಯಲು ಒಂದು ಮಿಲಿಟರಿ ಪಡೆಯಿದೆ. ಹಾಗೆಯೇ ಈ ದೇಹವನ್ನು ಕಾಯಲೂ ಒಂದು ಮಿಲಿಟರಿ ಪಡೆಯು ನಮ್ಮ ದೇಹದಲ್ಲಿದೆ. ಅವೇ ಬಿಳಿಯ ರಕ್ತ ಕಣಗಳು.

ನಮ್ಮ ಸೇನೆಯಲ್ಲಿ ಭೂದಳ, ವಾಯುದಳ, ನೌಕಾ ದಳಗಳು ಇರುವಂತೆ, ಒಂದೊಂದು ದಳದಲ್ಲೂ ಅನೇಕ ವಿಭಾಗಗಳು, ಉಪವಿಭಾಗಗಳೂ ಇರುವಂತೆ ಮಾನವ ದೇಹದ ಮಿಲಿಟರಿ ಪಡೆಯಲ್ಲಿಯೂ ಅನೇಕ ವಿಭಾಗಗಳಿವೆ.

ಭಾರತ ದೇಶಕ್ಕೆ ಸೇರಿದ ನಾವೆಲ್ಲರು, ನಮ್ಮನ್ನು ನಾವು ಭಾರತೀಯರೆಂದು ಗುರುತಿಸಿಕೊಳ್ಳಲು ಒಂದೊಂದು ಪಾಸ್ ಪೋರ್ಟನ್ನು ಹೊಂದಿರುತ್ತೇವೆ. ಇದರಲ್ಲಿ ನಮ್ಮ ವೈಯಕ್ತಿಕ ವಿವರಗಳು, ವಿಳಾಸ, ಉದ್ಯೋಗ, ಇತ್ಯಾದಿ ವಿವರಗಳೆಲ್ಲ ಇರುತ್ತವೆ. ಯಾವುದೇ ಪಾಸ್‌ಪೋರ್ಟ್ ತನಿಖಾಧಿಕಾರಿಗೆ ನಮ್ಮ ಪಾಸ್ ಪೋರ್ಟ್‌ನ್ನು ತೋರಿಸಿದರೆ, ಅದರ ಸಾಚಾತನವನ್ನು ಖಚಿತಪಡಿಸಿಕೊಂಡು ನಮ್ಮನ್ನು ಬಿಟ್ಟು ಬಿಡುತ್ತಾರೆ.

ನಮ್ಮ ದೇಹದಲ್ಲಿರುವ ಪ್ರತಿಯೊಂದು ಜೀವ ಕೋಶವೂ ಒಂದೊಂದು ''ಪಾಸ್‌ಪೋರ್ಟ''ನ್ನು ಹೊಂದಿರುತ್ತವೆ. ಇಂತಹ ಪಾಸ್‌ಪೋರ್ಟ್ ವ್ಯವಸ್ಥೆ ಇದೆ ಎಂಬ ಮಾಹಿತಿಯನ್ನು ಮೊದಲ ಬಾರಿಗೆ ನಾವು ಬಿಳಿಯ ರಕ್ತಕಣಗಳ ಮೇಲೆ ಪತ್ತೆ ಹಚ್ಚಿದೆವು. ಹಾಗಾಗಿ ಈ ಪಾಸ್‌ಪೋರ್ಟನ್ನು HLA( HUMAN LEVCO CYTE, ANTIGEN) ಎಂದು ಕರೆದೆವು. ಇದನ್ನು ಕನ್ನಡದಲ್ಲಿ 'ಮಾನವ ಬಿಳಿರಕ್ತಕಣ ಪ್ರತಿಜನಕ' ಎಂದು ಹೆಸರಿಸಬಹುದು.

ನಮ್ಮ ದೇಹದ ಎಲ್ಲ ಜೀವಕೋಶಗಳ ಪಾಸ್ ಪೋರ್ಟ್‌ಗಳನ್ನು ತನಿಖೆ ಮಾಡುವ ಅಧಿಕಾರವನ್ನು ಹೊಂದಿರುವ ಕೆಲವು ಪಾಸ್‌ಪೋರ್ಟ್ ಅಧಿಕಾರಿಗಳು, ನಮ್ಮ ದೇಹದ ಎಲ್ಲೆಡೆ ಗಸ್ತು ಹೊಡೆಯುತ್ತಿರುತ್ತಾರೆ. ಎದುರಿಗೆ ಸಿಕ್ಕ ಎಲ್ಲರನ್ನು ''ಎಲ್ಲಿ ನಿನ್ನ ಪಾಸ್ ಪೋರ್ಟನ್ನು ತೋರಿಸು ಎಂದು ಕೇಳುತ್ತಾರೆ. ಪಾಸ್ ಪೋರ್ಟ್ ಸರಿಯಾಗಿದ್ದರೆ, ಇವನು ನಮ್ಮವನೆ'' ಎಂದು ಭಾವಿಸಿ ಮುಂದೆ ಹೋಗಲು ಬಿಡುತ್ತಾರೆ. ಪಾಸ್‌ಪೋರ್ಟ್ ಭಿನ್ನವಾಗಿದ್ದರೆ, ಆ ಕಣವನ್ನು ಶತ್ರುವೆಂದು ಪರಿಗಣಿಸಿ ಅಲ್ಲೇ ನುಂಗಿ ನೀರು ಕುಡಿಯುತ್ತಾರೆ.

ನಮ್ಮ ದೇಹದಲ್ಲಿ ೨೩ ಜೊತೆ ಕ್ರೋಮೋಸೋಮುಗಳಿವೆ. ಇವುಗಳಲ್ಲಿ ೬ನೆಯ ಜೊತೆ ಕ್ರೋಮೋ ಸೋಮುಗಳು HLA ವ್ಯೂಹದ ಸ್ವರೂಪ

ಬೆರೆಸಿ, ಬದಲಿ ಜೋಡಣೆಗೆ ಸೂಕ್ತವಾದ ಅಂಗಗಳನ್ನು ಹೊಂದಿರುವ ಹಂದಿಯನ್ನು ಸೃಜಿಸುವ ''ವಿಶ್ವಾಮಿತ್ರ ಸೃಷ್ಟಿ'' ಇಂದು ನನಸಾಗಿದೆ. ಆದರೆ ಅಂತಹ ವಿಶೇಷ ತಳಿಯ ಹಂದಿಗಳನ್ನು ವ್ಯಾಪಾರೀ ಮಟ್ಟದಲ್ಲಿ ಸೃಜಿಸಲು ಅನೇಕ ಅಡ್ಡಿ ಆತಂಕಗಳಿವೆ.

ಅಂತಹುದರಲ್ಲಿ ನಮ್ಮ ಬರೂವ ನಾಟಿ ಹಂದಿಯ ಅಂಗಾಂಗಗಳನ್ನೇ ಬಳಸಿ ಶಸ್ತ್ರಚಿಕಿತ್ಸೆಯನ್ನು ನಡೆಸಿಬಿಡ ಬೇಕೆ! ?.......

ಕುರಿ ಹಳ್ಳಕ್ಕೆ ಬಿದ್ದರೆ ಆಳಿಗೊಂದು ಕಲ್ಲಂತೆ! ಬರೂವ ತನ್ನ ಪ್ರಯೋಗದಲ್ಲಿ ವಿಫಲನಾದ ಮಾತ್ರಕ್ಕೆ ನಾವೆಲ್ಲ ಆತನನ್ನು ತೆಗಳಬೇಕೆ? ಖಂಡಿತ ತೆಗಳ ಬೇಕಿಲ್ಲ.

★ ಭಾರತದಲ್ಲಿ ಸ್ವಪ್ರಭೇದಕ್ಕೆ ಅಗತ್ಯವಾಗುವಷ್ಟು ಅಂಗಾಂಗಗಳು ದೊರೆಯುತ್ತಿಲ್ಲ.

★ ಶವದಿಂದ ಅಂಗಾಂಗಗಳನ್ನು ತೆಗೆದು ಬದಲಿ ಜೋಡಿಸುವ ಕಾನೂನೇನೋ ಇದೆ. ಆದರೆ ಅದು ಜನಪ್ರಿಯವಾಗಿಲ್ಲ. ಅದು ಜಾರಿಗೆ ಬರಲು ನೂರಾರು ತೊಂದರೆಗಳಿವೆ.

★ ಅನ್ಯ ಪ್ರಭೇದ ಕಸಿಯೇನೂ ವೈದ್ಯಕೀಯಕ್ಕೆ ಹೊಸದಲ್ಲ. ಅನೇಕ ಕಡೆ ನಡೆದಿವೆ. ನಡೆಯುತ್ತಿವೆ. ಹಾಗಾಗಿ ಡಾ। ಬರೂವ ಸಹ ಅನ್ಯ ಪ್ರಭೇದ ಕಸಿ ನಡೆಸಿ ದರೆ ಅದನ್ನು ನಾವು ತಡೆಯಬೇಕಿಲ್ಲ. !

ಆದರೆ ಡಾ । ಧನಿರಾಂಬರೂವ ಅನ್ಯಪ್ರಭೇದ ಕಸಿಯನ್ನು ನಡೆಸಲು ಅನುಸರಿಸಿದ ಮಾರ್ಗ ಮಾತ್ರ ಎಳ್ಳಷ್ಟೂ ಸರಿಯಿಲ್ಲ.

★ ಜಗತ್ತಿನ ಇತರ ದೇಶಗಳಲ್ಲಿ ಅನ್ಯಪ್ರಭೇದ ಕಸಿಗಳು ಪ್ರತಿಭಟನೆಯ ನಡುವೆ ನಡೆದಿದೆ. ಅವು ಯಾವುವೂ ಸಫಲವಾಗಿಲ್ಲ.

★ ಅಂತಹ ಶಸ್ತ್ರಚಿಕಿತ್ಸೆ ನಡೆಸಲು ಅಗತ್ಯವಾದ ಸಲಕರಣೆ ಗಳು ಡಾ। ಬರೂವರವರ ಸಂಶೋಧನ ಕೇಂದ್ರದಲ್ಲಿ ಇರ ಲಿಲ್ಲ. ಒಂದು ಆಸ್ಪತ್ರೆಯಲ್ಲಿ ಮೂಲ ಭೂತವಾಗಿ ಇರಬೇಕಾದ ರಕ್ತನಿಧಿ, ಪ್ರಯೋಗಾಲಯ, ಈ ಕ್ಷೇತ್ರಗಳ ತಜ್ಞರು ಯಾರೂ ಇರಲಿಲ್ಲ.

★ ಅಂತಾರಾಷ್ಟ್ರೀಯ ಮಟ್ಟದಲ್ಲಿ ಮಾನ್ಯತೆ ಹೊಂದಿರುವ, ಮನುಷ್ಯರನ್ನು ಪ್ರಯೋಗದಲ್ಲಿ ಬಳಸಲು ಮಾರ್ಗದರ್ಶನವನ್ನು ನೀಡುವ ಹೆಲ್ಸಿಂಕಿ ಘೋಷಣೆ - ೧೯೭೫ನ್ನು ಸ್ಪಷ್ಟವಾಗಿ ಬರೂವ ಉಲ್ಲಂಘಿಸಿದ್ದಾರೆ. - ಹಾಗಾಗಿ ಡಾ।ಬರೂವ ವೈದ್ಯಕೀಯ ಸಂಹಿತೆಗೆ ವಿರುದ್ಧವಾಗಿ ನಡೆದುಕೊಂಡಿದ್ದಾರೆ.

★ ಆಫ್ರಿಕದ ಹಸಿರು ಕಪಿಗಳ ರಕ್ತವನ್ನು ಹಸಿಹಸಿಯಾಗಿ ಕುಡಿಯುವುದರಿಂದ ಪ್ರಾಣಿ ಮೂಲವಾಗಿದ್ದ HIV ಮನುಷ್ಯರನ್ನು ಪ್ರವೇಶಿಸಿ 'ಏಡ್ಸ್' ಉಂಟು ಮಾಡಿದೆ ಎಂಬ ವಾದವೊಂದಿದೆ. ಹಾಗೆಯೇ ಹಂದಿ ಗಳಿಗೆ ಸಹಜವಾಗಿರುವ ವೈರಸ್ಸು, ಇಂತಹ ಪ್ರಯೋಗಗಳಿಂದ ಮನುಷ್ಯರ ದೇಹವನ್ನು ಪ್ರವೇಶಿಸಿ ಹೊಸ ಹೊಸ ರೋಗಗಳಿಗೆ ಕಾರಣವಾಗಬಹುದು.

★ ಇಂತಹ ಅನ್ಯಪ್ರಭೇದ ಕಸಿಗಳಲ್ಲಿ ಪ್ರಾಣಿ ಗಳನ್ನು ಬಲಿಕೊಡುವ ಮನುಷ್ಯನ ಸ್ವಾರ್ಥವನ್ನು ಪ್ರಾಣಿದಯಾ ಸಂಘದವರು ಪ್ರಶ್ನಿಸುತ್ತಾರೆ.

★ ಎಲ್ಲಕ್ಕಿಂತ ಮಿಗಿಲಾಗಿ, ಇಂತಹ ಪ್ರಯೋಗ ಗಳಿಗೆ ''ತಿಳಿಹೇಳಿದ ಒಪ್ಪಿಗೆ'' (INFORMED CONSENT) ಯನ್ನು ರೋಗಿ ಹಾಗೂ ರೋಗಿಯ ಸಮೀಪ ಬಂಧುಗಳು ನೀಡಬೇಕು. ಅಂತಹ ಒಪ್ಪಿಗೆಯನ್ನು ತಾನು ಪಡೆದಿರುವುದಾಗಿ ಬರೂವ ಹೇಳಿಕೊಂಡಿದ್ದರೂ ಅದರಲ್ಲಿ ಹುರುಳಿಲ್ಲ ವೆನಿಸುತ್ತದೆ.

★ ಇವೆಲ್ಲಕ್ಕಿಂತ ಮಿಗಿಲಾಗಿ, ಈತನೊಬ್ಬ ಪ್ರಚಾರಪ್ರಿಯ ಮನುಷ್ಯ ಎಂಬುದಕ್ಕೆ ಈಗಾಗಲೆ ಜ್ವಲಂತ ಉದಾಹರಣೆಯಿದೆ. ಅಲ್ಲದೆ ತಾನು ಚಾಫ ಎಂಬುದಕ್ಕೆ ಅಗತ್ಯವಾದ ಪ್ರಮಾಣಪತ್ರವನ್ನೇ ಈತ ಹೊಂದಿಲ್ಲ.

ವಿಷಯ ಹೀಗಿರುವಾಗ, ಇಂತಹ ವೈದ್ಯನನ್ನು ಟೀಕಿಸುವುದರಲ್ಲಿ ಖಂಡಿತ ತಪ್ಪಿಲ್ಲ ಅಲ್ಲವೆ?

---

ಮೂತ್ರಪಿಂಡಗಳನ್ನು ತಿರಸ್ಕರಿಸಿಲ್ಲ, ತಿರಸ್ಕರಿಸದಂತೆ ಹಂದಿಯ ಅಂಗಾಂಗಗಳನ್ನು ನನ್ನದೇ ಆದ ಪರಿಶುದ್ಧ ಜೀವ, ರಾಸಾಯನಿಕವೊಂದರಿಂದ ಸಂಸ್ಕರಿಸಿರುವೆ'' ಎಂದು ತನ್ನ ಹೇಳಿಕೆಯಲ್ಲಿ ವಿವರಿಸಿದ್ದನು.

ಡಾ । ಧನಿರಾಂ ಬರೂವರವರ ಈ ''ವಿದ್ವತ್ಪೂರ್ಣ'' ವೈಜ್ಞಾನಿಕ ವಿವರಣೆಯನ್ನು ಓದಿದ ಗುವಾಹಟಿ ಮೆಡಿಕಲ್ ಕಾಲೇಜಿನ ಮಾಜಿ ಪ್ರಾಂಶುಪಾಲರು ಹಾಗೂ ಹೃದ್ರೋಗತಜ್ಞರು ಆಗಿರುವ ಒಬ್ಬ ವೈದ್ಯರು. ಈತ ರಾಮನ್ ಪಿಳ್ಳೆಯ ಜಾತಿಯವನು. ಚಾಫು ಮಾಡಿದವನ ಭಾಷೆಯೇ ಅದು ?ಥೆ! ಇಂತಹವರಿಂದ ಭಾರತೀಯ

---

ವನ್ನು ನಿರ್ಣಯಿಸುತ್ತವೆ. ಈ ಕ್ರೋಮೋಸೋಮಿನ ೭ ವಂಶವಾಹಿಗಳು ೭ ಪ್ರತಿಜನಕಗಳನ್ನು ರೂಪಿಸು ತ್ತವೆ. ಅವನ್ನು HLA-A, HLA-B, HLA-C(ಪ್ರಥಮ ದರ್ಜೆ ಪ್ರತಿಜನಕಗಳು) HLA-D, HLA-DP, HLA-DR, HLA-DQ ಎಂದು ಗುರುತಿಸುತ್ತೇವೆ.

HLA ವ್ಯೂಹವು ಬಹುರೂಪ ಧಾರಣ ಸಾಮರ್ಥ್ಯವನ್ನು ಹೊಂದಿದೆ. ಉದಾಹರಣೆಗೆHLA-A ಎಂಬುದು ಸುಮಾರು ೨೩ ರೂಪಗಳಲ್ಲಿ ರಬಹುದು. ಇವನ್ನು ನಾವು HLA-A1,HLA-A2, HLA-A3 ಎಂದು ಗುರುತಿಸುತ್ತೇವೆ. ಹೀಗೆ ಉಳಿದ ಪ್ರತಿಜನಕ ಗಳಲ್ಲೂ ಬಹುರೂಪಗಳಿವೆ.

ಈ HLA ವ್ಯೂಹವೇ, ಪ್ರತಿಯೊಂದು ಜೀವಿಯ ಎಲ್ಲ ಜೀವಕೋಶಗಳ ಪಾಸ್‌ಪೋರ್ಟನ್ನು ರೂಪಿಸುತ್ತವೆ.

ಬದಲಿ ಅಂಗವನ್ನು ಪಡೆಯುವವನು ಗ್ರಾಹಿ. ಬದಲಿ ಅಂಗವನ್ನು ಕೊಡುವವನು ದಾನಿ.

ಸ್ವಯಂ ಕಸಿಯಲ್ಲಿ ಗ್ರಾಹಿ ಮತ್ತುದಾನಿ ಒಬ್ಬನೆ. ಹಾಗಾಗಿ ಕಸಿಯು ಊರ್ಜಿತವಾಗುತ್ತದೆ. ಸಮಕಸಿಯಲ್ಲಿ ಗ್ರಾಹಿ ಮತ್ತು ದಾನಿಯು ಅವಳಿ ಮಕ್ಕಳಾದುದರಿಂದ, ಅವರ ಪಾಸ್‌ಪೋರ್ಟ್ ಸಹ ಒಂದೇ ಆಗಿರುತ್ತದೆ. ಹಾಗಾಗಿ ಕಸಿಯು ಊರ್ಜಿತ ವಾಗುತ್ತದೆ.

ಸ್ವಪ್ರಭೇದ ಕಸಿಯಲ್ಲಿ ದಾನಿ ಬೇರೆ. ಗ್ರಾಹಿ ಬೇರೆ. ಹಾಗಾಗಿ ಅವರ ಪಾಸ್‌ಪೋರ್ಟ್ ಸಹ ಭಿನ್ನ ಭಿನ್ನ. ಹಾಗಾಗಿ ದಾನಿಯ ಅಂಗವನ್ನು ''ಶತ್ರು'' ಎಂದು ಪರಿಗಣಿಸಿ, ಗ್ರಾಹಿಯ ಮಿಲಿಟರಿ ಪಡೆಯು ಬದಲಿ ಜೋಡಣೆಯ ಅಂಗವನ್ನು ನಾಶಪಡಿಸುತ್ತದೆ. ಆಗ ಕಸಿಯು ಊರ್ಜಿತವಾಗುವುದಿಲ್ಲ. ಹಾಗಾಗಿ ಈ ಕಸಿ ತಿರಸ್ಕಾರವನ್ನು ತಡೆಗಟ್ಟಲೆಂದು ವೈದ್ಯರು ವಿಶೇಷ ವಾದ ಔಷಧಗಳನ್ನು ಬಳಸುತ್ತಾರೆ.

ಅನ್ಯ ಪ್ರಭೇದ ಕಸಿಗಳಲ್ಲಿ ಭಿನ್ನ ಭಿನ್ನ ಪ್ರಾಣಿಗಳು ಭಾಗವಹಿಸುವುದರಿಂದ ಅವುಗಳ ಪಾಸ್‌ಪೋರ್ಟ್‌ಗಳು ಒಂದಕ್ಕೊಂದು ಸ್ವಲ್ಪ ಮಾತ್ರವೂ ತಾಳೆಯಾಗುವುದಿಲ್ಲ. ಪೂರ್ಣೋರ್ಸೈಕಿಯನ ಮಿಲಿಟರಿ ಪಡೆಯು, ಹಂದಿಯ ಹೃದಯದಲ್ಲಿರುವ ಜೀವಕೋಶಗಳನ್ನು ಪರಕೀಯ ಎಂದು ಕ್ಷಣ ಮಾತ್ರದಲ್ಲೇ ಗುರುತಿಸಿ ಅದನ್ನು ಧ್ವಂಸ ಮಾಡುತ್ತದೆ. ಹಾಗಾಗಿ ಹಂದಿಯ ಹೃದಯ ಸೈಕಿಯನಲ್ಲಿ ನಾಟಲು ಸಾಧ್ಯವೇ ಇಲ್ಲ. ಈ ಕಸಿ ತಿರಸ್ಕಾರವನ್ನು ಔಷಧಗಳಿಂದ ತಡೆಗಟ್ಟಲೂ ಸಾಧ್ಯವಿಲ್ಲ.

ನಿಜ ವಿಷಯ ಹೀಗಿರುವಾಗ, ತಾನು ಕಸಿ ತಿರಸ್ಕಾರವನ್ನು ತಡೆಗಟ್ಟಬಲ್ಲ ''ಅದ್ಭುತ ಜೀವರಾಸಾಯನಿಕವನ್ನು'' ಸೃಷ್ಟಿಸಿರುವುದಾಗಿ ಬೊಗಳೆ ಬಿಟ್ಟು ಮಂಕು ಬೂದಿಯನ್ನು ಎರಚಲು ಪ್ರಯತ್ನಿಸಬೇಕೆ ಈ ಬರೂವ?

## ಜೈಲಿನಲ್ಲಿ ತ್ರಿಮೂರ್ತಿಗಳು ?

ಡಾ। ಬರೂವ, ಡಾ।ಹೊ ಮತ್ತು ಡಾ। ಜೇಮ್ಸ್ ಈ ಲೇಖನವನ್ನು ಬರೆಯುತ್ತಿರುವ ಕಾಲಕ್ಕೆ ಗುವಾ ಹಟಿಯ ಸೆಂಟ್ರಲ್ ಜೈಲಿನಲ್ಲಿದ್ದು, ಜಾಮೀನಿನ ಬಿಡುಗಡೆಯಾಗಿದ್ದಾರೆ. ಪೊಲೀಸರು ಇವರನ್ನು ಭಾರತೀಯ ದಂಡ ಸಂಹಿತೆ ಸೆಕ್ಷನ್ ೩೦೪ ಮತ್ತು ಮಾನವ ಅಂಗಾಂಗಗಳ ಬದಲಿ ಜೋಡಣೆಯ ಕಾನೂನಿನ ಸೆಕ್ಷನ್ ೧೮ರ ಅನ್ವಯ ಬಂಧಿಸಿದ್ದರು.

**ಈ ಸೆಕ್ಷನ್‌ಗಳು ಏನನ್ನು ಹೇಳುತ್ತವೆ ?**

IPC Section 304 :

Punishment for culpable homicide not amounting to Murder :

Who ever Commits Culpable homicide not amounting to murder, shall be punished with imprisonment for life, or imprisonment of either description for a term which may extend to ten years, and shall also liable to fine if the act by which the death is caused is done with the intention of caus death, or of causing such bodily injury as is likely to cause death, or with imprisonment of either description for a term which many extend to ten years or with fine or with both, if the act is done with the knwoledge that it is likely to cause death but without any intention to cause death or to cause such bodily injury as is likely to cause death.

ಒಬ್ಬ ಮನುಷ್ಯನನ್ನು ಸಾಯಿಸಬೇಕೆಂಬ ಉದ್ದೇಶ ವಿಲ್ಲದೆ, ಆದರೆ ಅಪಾದನೀಯ ನರಹತ್ಯೆಗೆ ಸಮನಾ ಗುವ ಕೃತ್ಯಗಳಿಗೆ ಸಂಬಂಧ ಪಟ್ಟಂತೆ ಶಿಕ್ಷೆಯನ್ನು ಈ ಕಾನೂನು ಸೂಚಿಸುತ್ತದೆ.

ಇಂತಹವರಿಗೆ ಜೀವಾವಧಿ ಶಿಕ್ಷೆ / ಹತ್ತು ವರ್ಷಗಳ ಶಿಕ್ಷೆ, ದಂಡ ಅಥವಾ ಎರಡನ್ನೂ ಕೊಡಬಹುದು ಎನ್ನುತ್ತದೆ. ಈ ಕಾಯಿದೆ.

TheTransplantaion of Human organs Act-1994

Section 18 :

Punishment for removal of Human organ without authority :

(1) Any person renders his services to or at any hospital and who, for purposes of transplantation, conducts, associates with, or helps in any manner in, the removal of any human organ without authority, shall be punishable with imprisonment for a term which may extend to five years and with fine which may extand to ten thousand rupees.

(2) Where any person Convicted under sub section (1) is a registered medical practitioner, his name shall be reported by the appropriate authority, to the specific shall medical counicl, for taking necessary action inculding the removal of his name from the register of the council, for a period of two years for the first offence and permanently for the subsequent offence.

ಮಾನವ ಅಂಗಾಂಗಗಳ ೧೯೯೪ರ ಕಾಯಿದೆ ಯಂತೆ ಸೆಕ್ಷನ್ ೧೮ರಲ್ಲಿ ವಿವರಿಸಲಾಗಿದ್ದು, ಪರವಾನಗಿಯಿಲ್ಲದೆ ಮಾನವ ಅಂಗಾಂಗಗಳನ್ನು ಹೊರತೆಗೆ ಯುವುದಕ್ಕೆಸಂಬಂಧ ಪಟ್ಟಂತೆ ಶಿಕ್ಷೆಯನ್ನು ವಿವರಿಸುತ್ತದೆ. ಇಂತಹವರಿಗೆ ಶಿಕ್ಷೆ ೫ ವರ್ಷಗಳವರೆಗೂ ಆಗಬಹುದು. ರೂ. ೧೦,೦೦೦ ರೂ. ವರೆಗೂ ದಂಡ ವಿಧಿಸಬಹುದು. ಈ ಕಾನೂನಿನ ಅನ್ವಯ ಶಿಕ್ಷೆಗೊಳ ಗಾಗುವ ವೈದ್ಯರು ರಾಜ್ಯ ವೈದ್ಯಕೀಯ ಮಂಡಳಿಯಲ್ಲಿ ತಮ್ಮ ನೊಂದಾವಣೆಯನ್ನು ಕಳೆದುಕೊಳ್ಳಬಹುದು. ಮೊದಲ ಅಪರಾಧಕ್ಕೆ ನೊಂದಾವಣೆ ೨ ವರ್ಷಗಳ ವರೆಗೆ ಸ್ಥಗಿತವಾದರೆ, ನಂತರದ ಅಪರಾಧಕ್ಕೆ ಆ ವೈದ್ಯ ಜೀವಮಾನಾದ್ಯಂತ ನೊಂದಾವಣೆಯನ್ನು ಕಳೆದು ಕೊಳ್ಳುತ್ತಾನೆ. ತ್ರಿಮೂರ್ತಿ ವೈದ್ಯರು ತಮ್ಮ ನೊಂದಾವಣೆ ಕಳೆದುಕೊಂಡು ಜೀವಾವಧಿ ಶಿಕ್ಷೆಗೆ ಒಳಗಾಗುವ ಸಂಭವ ಹೆಚ್ಚಿದೆ.

ವಿಜ್ಞಾನಕ್ಕೂ, ಭಾರತೀಯ ವಿಜ್ಞಾನಿ ಗಳಿಗೂ ಕೆಟ್ಟ ಹೆಸರು ಬರುತ್ತದೆ. ಎಂದು ನೇರವಾಗಿ ಟೀಕಿಸಿದನು.

**ಜನವರಿ ೭, ೧೯೯೭:**

ಡಾ। ಬರೂವ ಮಗದೊಂದು ಪತ್ರಿಕಾ ಹೇಳಿಕೆಯನ್ನು ಬಿಡುಗಡೆ ಮಾಡಿದರು. ಈ ಹೇಳಿಕೆಯಲ್ಲಿರುವ ವಿಷಯವನ್ನು ವೈದ್ಯರು ಈಗಾಗಲೆ ನಿರೀಕ್ಷಿಸಿದ್ದರು.

''ಪೂರ್ಣೋರ್ ಸೈಕಿಯ ಇಂದು ಬೆಳಿಗ್ಗೆ ೩.೪೦ಕ್ಕೆ ತೀವ್ರ ಸೋಂಕಿನ ಕಾರಣ ಮರಣ ಹೊಂದಿದನು. ಅವನ ಮಾಂಸದಲ್ಲಿ, ಯಕೃತ್ತು ಹಾಗೂ ಪಿತ್ತಕೋಶಗಳು ಸೋಂಕಿಗೆ ಒಳಗಾಗಿದ್ದವು. ಈ ಸೋಂಕು ದೇಹದ ಇತರ ಅಂಗಗಳಿಗೆಲ್ಲ ಹರಡಿತ್ತು. ಹಾಗಾಗಿ ಸಾವು ಸಂಭವಿಸಿತು'' ಎಂಬ ಮಾಹಿತಿ ಅದರಲ್ಲಿತ್ತು

**ಜನವರಿ ೯,೧೯೯೭ :**

ಪೂರ್ಣೋರ್ ಸೈಕಿಯನ ಬಂಧುಗಳು, ಸಂಶೋಧನಾ ಕೇಂದ್ರಕ್ಕೆಬಂದರು. ಶವಸಂಸ್ಕಾರಕ್ಕೆಂದು ಬಂದ ಅವರಿಗೆ ಏನೋ 'ಭಾನಗಡಿ' ನಡೆದಿರುವ ಸುಳಿವು ಹತ್ತಿತ್ತು. ಪೂರ್ಣೋರ್‌ವಿನ ಅಣ್ಣ ರತ್ನೇಶ್ವರ ಸೈಕಿಯನ ಮಾತಿನ ಪ್ರಕಾರ, ಡಾ । ಬರೂವ ಡಿಸೆಂಬರ್ ೧೪ ರಿಂದ ಪೂರ್ಣೋರ್‌ನನ್ನು ನೋಡಲು ಯಾರಿಗೂ ಅನುಮತಿಯನ್ನು ನೀಡಿರಲಿಲ್ಲವಂತೆ.

ಡಾ । ಬರೂವ ಸಂಬಂಧಿಕರಿಗೆ ಶವವನ್ನು ಕೂಡಲೆ ಒಪ್ಪಿಸಲಿಲ್ಲ. ''ಶವವನ್ನು ಮರಣೋತ್ತರ ಶವ ಪರೀಕ್ಷೆಗೆ (POST MORTEM) ಒಳಪಡಿಸುವುದಿಲ್ಲ'' ಎಂಬ ಮುಚ್ಚಳಿಕೆಯನ್ನು ಬರೆದು ನಂತರ ತೆಗೆದುಕೊಂಡು ಹೋಗಿ ಎಂದು ಹೇಳಿದನಂತೆ, ಅಲ್ಲದೆ ತಾನು ನೀಡಿದ ಚಿಕಿತ್ಸೆಯ ವೆಚ್ಚ ೪ ಲಕ್ಷ ರೂಪಾಯಿಗಳನ್ನು ಮೊದಲು ಕಟ್ಟಲು ಹೇಳಿದನಂತೆ ಹೀಗೆನ್ನುತ್ತಾರೆ ರತ್ನೇಶ್ವರ ಸೈಕಿಯ.

**ನೆರವು :**

ಪೂರ್ಣೋರ್ ಸೈಕಿಯನ ದೇಹವನ್ನೂ ನೋಡಗೊಡದೆ, ಹಣ ಹಾಗೂ ಮುಚ್ಚಳಿಕೆಗಾಗಿ ಪೀಡಿಸುತ್ತಿದ್ದ ಬರೂವಾನ ಹಠದಿಂದ ಬೇಸತ್ತ ರತ್ನೇಶ್ವರ ಕೂಡಲೆ 'ಶಾಂತಿ ಸಾಧನ ಆಶ್ರಮ' ಎಂಬ ಸಂಸ್ಥೆಯ ಮಹಾ ಕಾರ್ಯದರ್ಶಿ ಹಾಗೂ ಸಾಮಾಜಿಕ ಕಾರ್ಯಕರ್ತರೊಬ್ಬರ ಮೊರೆ ಹೋದರು. ಆತನ ನೆರವಿನಿಂದ ಕಾಮರೂಪ ಜಿಲ್ಲೆಯ ಉಪಕಮಿಶನರ್‌ರಿಗೆ ದೂರನ್ನು ನೀಡಿ ಸೇಕಿಯನ ದೇಹವನ್ನು ವಶಪಡಿಸಿಕೊಂಡು ಶವ ಪರೀಕ್ಷೆಯನ್ನು ನಡೆಸುವಂತೆ ಪ್ರಾರ್ಥಿಸಿದರು. ಹಾಗೆಯೇ ಕ್ಷೈತ್ರಿಯ ಪೊಲೀಸ್ ಠಾಣೆಗೆ ಸೈಕಿಯನ ಅಸಹಜ ಮರಣದ ಬಗ್ಗೆದೂರನ್ನು ನೀಡಿ ಸತ್ಯಾ ಸತ್ಯವನ್ನು ಬಯಲಿಗೆಳೆಯಲು ಶವ ಪರೀಕ್ಷೆ ನಡೆಸು ವಂತೆ ಕೇಳಿದರು.

**ಎಫ್.ಐ.ಆರ್.**

ವಿಚಾರಣಾ ತಂಡದ ಡಾ। ವರ್ಮ ಮತ್ತೊಂದು ಎಫ್.ಐ.ಆರ್‌ನ್ನು ಸಲ್ಲಿಸಿದರು. ಕೂಡಲೆ ನ್ಯಾಯಧೀಶ ರನ್ನು ಒಳಗೊಂಡ ಒಂದು ಪೊಲೀ,ಸ್ ತಂಡವು ಬರೂವ ಸಂಶೋಧನಾ ಕೇಂದ್ರಕ್ಕೆ ಧಾವಿಸಿತು. ಪೂರ್ಣೋರ್ ಸೈಕಿಯನ ದೇಹವನ್ನು ವಶಪಡಿಸಿಕೊಂಡಿತು.

ಡಾ। ಬರೂವ, ಡಾ। ಹೋ ಮತ್ತು ಡಾ।



# ಹಂದಿ ವೈದ್ಯನ ಅದ್ಭುತ ರೈಲು !

ಡಾ। ಧನಿರಾಂಬರೂವ, ಇದೇ ಮೊದಲ ಸಲವೇನಲ್ಲ. ಈ ರೀತಿ ವೈದ್ಯರಂಗಕ್ಕೆ, ಸಾರ್ವಜನಿಕರಿಗೆ ಹಾಗೂ ಇಡೀ ದೇಶಕ್ಕೆ ಮಂಕುಬೂದಿಯನ್ನೆರಚುತ್ತಿ ರುವುದು. ೧೯೮೪ರಷ್ಟು ಹಿಂದೆಯೇ ಈತ ಕೃತಕ ಕವಾಟಗಳನ್ನು ಸೃಜಿಸಿರುವುದಾಗಿ ರಾಷ್ಟ್ರೀಯ, ಅಂತಾ ರಾಷ್ಟ್ರೀಯ ಮಟ್ಟದಲ್ಲಿ ಸುದ್ದಿ ಮಾಡಿ ಸದ್ದಿಲ್ಲದೆ ಕರಗಿ ಹೋಗಿದ್ದಾನೆ!

ಈತನ ಭಂಡತನದ ಮಾತನ್ನು ಕೇಳಿ "I made the First Artificial heart valve in my kitchen" (ನಾನು ಹೃದಯದ ಪ್ರಥಮ ಕೃತಕ ಕವಾಟವನ್ನು ನನ್ನ ಅಡುಗೆ ಮನೆಯಲ್ಲಿಸಿದ್ಧಗೊಳಿಸಿದೆ!) ಎಂದು ಹೇಳಿದ ಈತನು, ಭಾರತದ ಪ್ರಖ್ಯಾತ ಹೃದ್ರೋಗ ಆಸ್ಪತ್ರೆ ಹಾಗೂ ಸಂಶೋಧನಾ ಸಂಸ್ಥೆಯಾದ ಚಿತ್ರ ತಿರುನಾಳ್‌ನಲ್ಲಿ ಸೃಜಿಸಲಾಗುತ್ತಿದ್ದ ಕೃತಕ ಕವಾಟವನ್ನು ಅವಹೇಳನ ಮಾಡಿ ನಕ್ಕಿದ್ದಾನೆ. ಇದನ್ನು ಮುಂದೆ ಓದಿ.....

ಅಂದು ನನ್ನಂತಹ ವೈದ್ಯನಿಗೆ ಈ ಬರೂವ ರಾಷ್ಟ್ರೀಯ ಪ್ರಮುಖ ನಿಯತಕಾಲಿಕಗಳಲ್ಲಿ ನೀಡಿದ್ದ ಸಂದರ್ಶನವನ್ನು ಓದಿ ಅತೀವ ಹೆಮ್ಮೆಯೆನಿಸಿತ್ತು. ಇಂತಹವರಿಗೆ ಸೂಕ್ತ ಮನ್ನಣೆ ಇಲ್ಲವಲ್ಲ ಎಂದು ಖೇದಗೊಂಡಿತ್ತು. ಈಗ ಇಂತಹವರೂ ಇದ್ದಾರಲ್ಲ ಎಂದು ಜಿಗುಪ್ಸೆಯಾಗುತ್ತಿದೆ.

"ಸೈನ್ಸ್ ಟುಡೆ" ಯಲ್ಲಿ ಪ್ರಕಟವಾದ ಈತನ ವಿಸ್ತೃತ ಸಂದರ್ಶನದ ಪ್ರಮುಖ ಭಾಗ ಗಳನ್ನು ಇಲ್ಲಿ ನೀಡುತ್ತಿದ್ದೇನೆ.

ಹೆಸರು : ಡಾ। ಧನಿರಾಂ ಬರೂವ.

ಜನನ : ಜಗಿಯಲ್‌ಗಾಂವ್, ನಾಗಂವ್ ಜಿಲ್ಲೆ, ಅಸ್ಸಾಂ.

ಎಂ.ಬಿ.ಬಿ.ಎಸ್. ಶಿಕ್ಷಣ : ಅಸ್ಸಾಂ ಮೆಡಿಕಲ್ ಕಾಲೇಜು, ದಿಬ್ರೂಗಡ.

೧೯೭೪ : ಜನರಲ್ ಸರ್ಜರಿಯಲ್ಲಿ ಉನ್ನತ ಶಿಕ್ಷಣ. ಡಬ್ಲಿನ್ : ಐರ್ಲೆಂಡ್.

೧೯೮೧ : ಹೃದಯ ಶಸ್ತ್ರಕ್ರಿಯೆಯಲ್ಲಿ ತರಬೇತಿ : ಕರೋಲಿನ್ಸ್ಕ ಹಾರ್ಟ್ ಇನ್‌ಸ್ಟಿಟ್ಯೂಟ್, ಸ್ಟಾಕ್ ಹೋಂ, ಸ್ವೀಡನ್.

೧೯೮೨ : ಚಿಸಫು ಗ್ಲಾಸ್ಗೊ ರಾಯಲ್ ವಿಕ್ಟೋರಿಯ ಆಸ್ಪತ್ರೆ ಬೆಲ್‌ಫಾಸ್ಟ್.

೧೯೮೭ : ಪ್ರಥಮ ಕೃತಕ ಕವಾಟದ ಅಳವಡಿಕೆ. ಜೆ.ಜೆ. ಆಸ್ಪತ್ರೆ, ಮುಂಬಯಿ.

೧೯೮೮: ಕೃತಕ ಕವಾಟಗಳನ್ನು ನಿರ್ಮಿಸುವ ಕೇಂದ್ರ "ಸಂತಾಕ್ರೂಜ್ ಎಲೆಕ್ಟ್ರಾನಿಕ್ ಎಕ್ಸ್‌ಪೋರ್ಟ್ ಪ್ರೋಸೆಸಿಂಗ್ ಜೋನ್" (ಘ್ಟ್ಖಜ) ಸ್ಥಾಪನೆ ಅಂಧೇರಿ (ಪೂರ್ವ) ಮುಂಬಯಿ.

ಇಷ್ಟೆಲ್ಲ ತನ್ನ ಪ್ರವರವನ್ನು ಬರೆಸಿಕೊಂಡಿರುವ ಡಾ। ಬರೂವ, ಹಂದಿ ಹಗರಣದ ನಂತರ "ಎಲ್ಲಿ ನಿನ್ನ ಚಾಘಪದವಿ? ಎಂದು ಪ್ರಶ್ನಿಸಿದರೆ "ಅದು ಕಳೆದು ಹೋಗಿದೆ" ಎಂದು ಉತ್ತರಿಸಿದನಂತೆ!

ಪ್ರ: ಕೃತಕ ಕವಾಟಗಳನ್ನು ನಿರ್ಮಿಸುವ ಬಗೆಗೆ ನೀವು ಯಾವಾಗ ಆಲೋಚಿಸಿದಿರಿ?

ಬರೂವ : ನಾನು ಸ್ವೀಡನ್ನಿನ ಕರೋಲಿನ್ಸ್ಕ ಹಾರ್ಟ್ ಇನ್‌ಸ್ಟಿಟ್ಯೂಟಿನಲ್ಲಿ ಹೃದಯ ಶಸ್ತ್ರಜ್ಞನಾಗಿ ತರಬೇತಿ ಪಡೆಯುತ್ತಿರುವಾಗ, ಕೃತಕ ಕವಾಟಗಳನ್ನು ನಿರ್ಮಿಸುವ ಬಗ್ಗೆ ಮೊದಲಬಾರಿಗೆ ಯೋಚಿಸಿದೆ. ದೋಷಪೂರಿತ ಹೃದಯ ಕವಾಟಗಳನ್ನು ಸರಿಪಡಿಸುವುದರ ಬಗ್ಗೆ ಪೂರ್ವ ದೇಶದವರು ಏನನ್ನೂ ಮಾಡುತ್ತಿಲ್ಲವಲ್ಲ ಎಂದು ನನಗೆ ಆಶ್ಚರ್ಯವಾಗಿತ್ತು. ಒಂದು ದಿವಸ ನಾನೇ ಕೃತಕ ಕವಾಟಗಳನ್ನು ನಿರ್ಮಿಸು ತ್ತೇನೆ ಎಂದು ನಿಶ್ಚಯ ಮಾಡಿದೆ. ನಂತರ ನಾನು ಗ್ಲಾಸ್ಗೋವಿಗೆ ಬಂದೆ. ಅಲ್ಲಿ ನನ್ನ ಬಾಸ್ ಜೊತೆಗೆ ಮಾತನಾಡಿದೆ. ಕೃತಕ ಕವಾಟಗಳನ್ನು ನಿರ್ಮಿಸುವುದು ಕಷ್ಟ ; ಅದಕ್ಕೆ ಅಪಾರ

---

ಜೇಮ್ಸ್ ರವರನ್ನು ಬಂಧಿಸಿ, ಗುವಾಹಟಿಯ ಮುಖ್ಯನ್ಯಾಯಾಧೀಶರ ಮುಂದೆ ಹಾಜರು ಪಡಿಸಿತು. ಅವರು ಈ ತ್ರಿಮೂರ್ತಿಗಳನ್ನು ಜನವರಿ ೨೪ರವರೆಗೆ ಪೊಲೀಸರ ಕಸ್ಟಡಿಯಲ್ಲಿರುವಂತೆ ಆಜ್ಞೆಯನ್ನು ನೀಡಿದರು.

**ಸತ್ತ ನಂತರ?**

ಪೂರ್ಣೋರ್ಸೈಕಿಯನ ಶವ ಪರೀಕ್ಷೆ ನಡೆಯಿತು. ಶವ ಪರೀಕ್ಷೆಯ ಪ್ರಾಥಮಿಕ ವರದಿಯು, "ಸಾವು ಸಂಭವಿಸಿ ಕನಿಷ್ಠ ಒಂದು ವಾರವಾದರೂ ಆಗಿರ ಬೇಕು" ಎಂದು ಹೇಳಿದೆ.

ಶವ ಪರೀಕ್ಷೆಯನ್ನು ಗುವಾಹಟಿಯ ಮೆಡಿಕಲ್ ಕಾಲೇಜಿನಲ್ಲಿಯೇ ನಡೆಸಲಾಯಿತು. ಐವರು ವೈದ್ಯರು, ಪ್ರಾಣಿವೈದ್ಯರ ನೆರವಿನಿಂದ ಶವಪರೀಕ್ಷೆಯನ್ನು ನಡೆಸಿದರು. ಪೂರ್ಣೋರ್ಸೈಕಿಯು ಸತ್ತ ನಂತರ ಹಂದಿಯ ಅಂಗಾಂಗಳನ್ನು ಬದಲಿ ಜೋಡಿಸಿರಬಹುದು ಎಂಬ ಸಂಶಯವನ್ನು ವ್ಯಕ್ತಪಡಿಸಿದ್ದಾರೆ ಈ ವೈದ್ಯರು.

ಹಗರಣ

ವೆಚ್ಚವಾಗುತ್ತದೆ ಅಲ್ಲದೆ ಅದರ ನಿರ್ಮಾಣದಲ್ಲಿ ಅನೇಕರ ನೆರವನ್ನು ಪಡೆಯಬೇಕಾಗು ತ್ತದೆ, ಹಾಗಾಗಿ ಅದನ್ನು ತಯಾರಿಸುವುದು ಸಾಧ್ಯವಿಲ್ಲ ಎಂದರು.

ನಾನು ಮತ್ತೇನು ಮಾಡಲಿ ? ನನ್ನ ಹೆಂಡತಿಯೊ ಡನೆ ಚರ್ಚಿಸಿದೆ. ಇದಕ್ಕೇಕೆ ಚಿಂತಿಸುತ್ತೀರಿ ? ಮನೆ ಯೊಳಗೆ ಸಂಶೋಧನೆಯನ್ನು ಆರಂಭಿಸಬಹುದಲ್ಲ ಎಂದಳು.

ನನಗೆ ಗ್ಲಾಸ್ಗೋವಿನಲ್ಲಿದ್ದ ಸ್ಟ್ರಾಥ್‌ಕ್ಲೈಡ್ ವಿಶ್ವ ವಿದ್ಯಾನಿಲಯದ ಅನೇಕ ಪ್ರೊಫೆಸರ್‌ಗಳ ಪರಿಚಯ ವಿತ್ತು. ನನ್ನ ಕೃತಕ ಕವಾಟ ನಿರ್ಮಾಣಕ್ಕೆ ಅಗತ್ಯವಾಗಿ ಬೇಕಾಗಿದ್ದ ಮೆಟಲರ್ಜಿ, ಮೆಕ್ಯಾನಿಕಲ್ ಇಂಜನಿಯ ರಿಂಗ್, ಪಾಲಿಮರ್‌ಸೈನ್ಸ್, ಇತ್ಯಾದಿಗಳ ಜ್ಞಾನವನ್ನು ಪಡೆಯಲು ಸಂಬಂಧ ಪಟ್ಟ ಪ್ರೊಫೆಸರ್‌ಗಳ ಉಪನ್ಯಾಸಗಳಿಗೆ ಹಾಜರಾದೆ. ಅವರ ಸಂಶೋಧನಾಲ ಗಳಲ್ಲಿ ಕೆಲಸ ಮಾಡಿ, ಅನುಭವ ಗಳಿಸಿದೆ.

ನಿಜಕ್ಕೂ ಇದೆಲ್ಲ ನನಗೆ ಕಷ್ಟವಾಗಿತ್ತು. ದಿನವಿಡೀ ಆಸ್ಪತ್ರೆಯಲ್ಲಿ ದುಡಿಯಬೇಕಾಗಿತ್ತು. ನಂತರ ಸಂಜೆ ಉಪನ್ಯಾಸಗಳಿಗೆ ಹಾಜರಾಗಬೇಕಾಗುತಿತ್ತು, ಪ್ರಯೋ ಗಾಲಯದಲ್ಲಿ ಸಂಶೋಧನೆ ನಡೆಸಬೇಕಾಗುತಿತ್ತು. ನನಗೆ ತುಂಬಾ ಕಷ್ಟವಾಗುತಿತ್ತು, ಆದರೂ ಸಾಧಿಸಿದೆ.

ನನ್ನ ಮನೆಯಲ್ಲಿಯೇ ಒಂದು ಪ್ರತ್ಯೇಕ ಪುಟ್ಟ ಕೋಣೆಯನ್ನು ಸಂಶೋಧನೆಗೆಂದೇ ಸಜ್ಜುಗೊಳಿಸಿದೆ. ಅಲ್ಲಿ ನಾನು ಅನೇಕ ಲೋಹಗಳನ್ನು ಪಾಲಿಮರ್ ಗಳನ್ನು ಪರೀಕ್ಷಿಸಿದೆ (ವಿಶ್ವವಿದ್ಯಾಲಯದ ವೆಚ್ಚದಲ್ಲಿ) ನನ್ನ ಕಿಸೆಯಿಂದಲೂ ಸಾಕಷ್ಟು ಖರ್ಚು ಮಾಡಿದೆ.

೧೯೮೪ರಲ್ಲಿ ಕೃತಕ ಕವಾಟವನ್ನು ರಚಿಸಬಹುದೆಂಬ ಆತ್ಮವಿಶ್ವಾಸ ನನಗೆ ಬಂದಿತು. ಹಾಗಾಗಿ ೧೯೮೪ ಮಾರ್ಚ್ ತಿಂಗಳಿನಲ್ಲಿ ನಾನು ಪ್ರಧಾನಿ ಶ್ರೀಮತಿ ಇಂದಿರಾಗಾಂಧಿಯವರಿಗೆ ಪತ್ರ ಬರೆದೆ. ಆಕೆ ಬಂದು ತನ್ನನ್ನು ನೋಡುವಂತೆ ನನಗೆ ಪತ್ರ ಬರೆದರು. ಹಾಗಾಗಿ ನಾನು ಏಪ್ರಿಲ್ ೧೯,೧೯೮೪ರಂದು ಆಕೆಯನ್ನು ಸಕುಟುಂಬ ಪರಿವಾರ ಸಮೇತ ಭೇಟಿ ಮಾಡಿದೆ.

ಮರುದಿನ ಆಕೆ ನನ್ನನ್ನು ತನ್ನ ಮನೆಗೆ ಕರೆದರು. ಅಲ್ಲಿ ಕೃತಕ ಕವಾಟಗಳನ್ನು ನಿರ್ಮಿಸುವ ನನ್ನ ಬಯಕೆ ಯನ್ನು ವ್ಯಕ್ತಪಡಿಸಿದೆ. ನಿನಗೇನು ಸವಲತ್ತು ಬೇಕು ಎಂದರು. ನಾನು ಸ್ವಲ್ಪ ಆರ್ಥಿಕ ನೆರವು ಬೇಕು, ಹಾಗೆಯೇ ಕಾರ್ಖಾನೆ ಸ್ಥಾಪನೆಗೆ ಅಗತ್ಯವಾದ ವಿಧಿ ವಿಧಾನಗಳು ತ್ವರಿತವಾಗಿ ಮುಗಿಯಲು ನೆರವಾಗ ಬೇಕು ಎಂದೆ. ಆಗವರು ತಮ್ಮ ವಿಶೇಷ ಕಾರ್ಯದರ್ಶಿ ಹಾಗೂ ತಾಂತ್ರಿಕ ಅಭಿವೃದ್ಧಿ ವಿಭಾಗದ ಡೈರೆಕ್ಟರ್ ಜನರಲ್ ಆಗಿದ್ದ ಗೋಪಿ ಅರೋರ ಅವರನ್ನು ಕರೆಸಿ ನನ್ನ ಅಗತ್ಯಗಳನ್ನು ಪೂರೈಸುವಂತೆ ಆಣತಿಯನ್ನಿತ್ತರು.

ಈ ವೇಳೆಗೆ (೧೯೮೫) ಅಬೂಧಾಬಿಯ ಆರೋಗ್ಯ ಸಚಿವಾಲಯದಿಂದ ನನಗೆ ಕರೆ ಬಂತು. ತೆರೆದ ಹೃದಯ ಶಸ್ತ್ರಚಿಕಿತ್ಸೆಗಳನ್ನು ನಡೆಸಲು ಅಗತ್ಯ ವಾದ ಆಸ್ಪತ್ರೆಯೊಂದನ್ನು ತೆರೆಯಲು ನೆರವಾಗುವಂತೆ ಕೇಳಿಕೊಂಡರು. ಇದನ್ನು ನಾನು ಒಪ್ಪಲೇ ಬೇಕಾ ಗಿತ್ತು. ಏಕೆಂದರೆ ಕೃತಕ ಕವಾಟದ ಸಂಶೋಧನೆಗೆಂದು ನನ್ನಲ್ಲಿದ್ದ ಉಳಿತಾಯವನ್ನೆಲ್ಲ ಖರ್ಚು ಮಾಡಿಬಿಟ್ಟಿದ್ದೆ. ಹಾಗಾಗಿ ಈ ಕರೆ ಬಹು ಆಕರ್ಷಕವಾಗಿ ಕಂಡಿತು ನನಗೆ.

ಅಬುದಾಬಿಯಲ್ಲಿ ನನ್ನ ಸಂಶೋಧನೆಯನ್ನು ಮುಂದುವರೆಸಲು ಅಗತ್ಯವಾದ ಪ್ರಯೋಗಾಲಯದ, ಪ್ರಯೋಗ ಪ್ರಾಣಿಗಳ ಸರಬರಾಜು ಇತ್ಯಾದಿಗಳನ್ನೆಲ್ಲ ಪೂರೈಸುವುದಾಗಿ ಮಾತನ್ನಿತ್ತರು.

ಆದರೆ ಆ ವೇಳೆಗಾಗಲೆ ನಾನು ನನ್ನ ಅಡುಗೆ ಮನೆ ಯಲ್ಲಿ ಕೃತಕ ಕವಾಟವನ್ನು ಯಶಸ್ವಿಯಾಗಿ ರೂಪಿಸಿದ್ದೆ. ನಂತರ ನಾನು ಯಾಂತ್ರಿಕ ಕವಾಟವನ್ನು ರಚಿಸಿದೆ. ಅದುವರೆಗೂ ಯಾರೂ ಉಪಯೋಗಿಸದ ಝಿರ್ಕೋನಿಯಂ ಬಳಸಿ.....

ಪ್ರಶ್ನೆ : ನಿಮ್ಮ ಕವಾಟದ ತಾಂತ್ರಿಕ ವಿವರಗಳನ್ನು ನೀಡುವ ಮೊದಲು ಈ ಕ್ಷೇತ್ರದಲ್ಲಿ ನಡೆದಿರುವ ಅಭಿವೃದ್ಧಿಗಳನ್ನು ತಿಳಿಸುತ್ತೀರಾ ?

ಬರೂವ: ೬೦ ರ ದಶಕದಲ್ಲಿ ಕೃತಕ ಕವಾಟಗಳ ಬಳಕೆ ಆರಂಭವಾಯಿತು. ಅಮೆರಿಕದ ಒರೆಗಾನ್ ನಲ್ಲಿರುವ ಆಲ್ಬರ್ಟ್ ಸ್ಟಾರ್ ಎಂಬ ಹೃದಯಶಸ್ತ್ರಜ್ಞ ಕೃತಕ ಕವಾಟಗಳನ್ನು ಅಳವಡಿಸಲಾರಂಭಿಸಿದನು. ಈ ಕವಾಟಗಳನ್ನು ಇಂದು ನಾವು ಶಿಲಾಯುಗದ ಕವಾಟ ಗಳು ಎಂದು ಕರೆಯುತ್ತೇವೆ ! ಇದೊಂದು 'ಬಾಲ್ ವಾಲ್ವ್' ಆಗಿತ್ತು. ಪ್ರತಿಸಲ ರಕ್ತಪ್ರವೇಶಿಸುವಾಗ ಮೇಲೆ ಹೋಗುತಿತ್ತು, ನಂತರ ಕೆಳಗೆ ಬರುತಿತ್ತು. ಇದರ ಬಳಕೆಯಿಂದ ಅನೇಕ ತೊಡಕುಗಳು ಉದ್ಭವಿಸಿ ದವು. ಶೇಕಡಾ ೩೦-೪೦ ರೋಗಿಗಳು ಸತ್ತರು. ಆದರೆ ಬೇರೆ ದಾರಿಯೇ ಇರಲಿಲ್ಲ.

೧೯೭೧ರಲ್ಲಿ ವೈಕಿಂಗ್ ಜೋರ್ಕ್ (ಪ್ರ್ಸ್ವಟ ಈಭಸ) ಎಂಬುವವರು ಕರೋಲಿನ್ಸ್ಕ ಇನ್‌ಸ್ಟಿಟ್ಯೂಟಿನಲ್ಲಿ ಏಕಬಿಲ್ಲೆ ಯಾಂತ್ರಿಕ ಕವಾಟವನ್ನು (ಫ್ಲುಟ್ಟ್‌ಬಟಫ್ ಡ್ರೈರ್ಫ್ರೈ) ರೂಪಿಸಿದರು. ಇವರೆಷ್ಟೇ ಗುಣಮಟ್ಟ ಕಾದಿರಿಸಿದರೂ, ಕೆಲವೇ ವರ್ಷಗಳಲ್ಲಿ ವಿಫಲವಾಗ ಲಾರಂಭಿಸಿತು.

ಪ್ರಶ್ನೆ : ಜೋರ್ಕ್ ಕವಾಟದಲ್ಲಿದ್ದ ದೋಷ ಗಳೇನು ?

ಬರೂವ : ಅವರ ಕವಾಟವು ಕೆಲವು ವರ್ಷಗಳಲ್ಲಿ ಮುರಿದು ಹೋಗುತಿತ್ತು. ಅಲ್ಲದೆ ಕವಾಟಗಳನ್ನು ಪರೀಕ್ಷಿಸಲು ಅಗತ್ಯವಾದ ಸೂಕ್ಷ್ಮ ಯಂತ್ರಗಳು ಇಂದು ದೊರೆಯುತ್ತಿವೆ. ಅಂದು ಇರಲಿಲ್ಲ...ಹಾಗಾಗಿ ನಾವು ಜೋರ್ಕನ್ನು ಹಳಿಯಬೇಕಾಗಿಲ್ಲ.

ನಂತರ, ಈಗ ಬ್ರಿಟನ್ನಿನಲ್ಲಿ ವಾಸಿಸುವ ರೊಮೇನಿ ಯದ ಮೇರಿಯರ್ ಲೊನೆಸ್ಕು ಕುದುರೆಯ ಹೃದಯ ಪೊರೆಯಿಂದ ಕೃತಕ ಕವಾಟ ರಚಿಸಿದ. ಅದೂ ಸಹ ಕ್ಯಾಲ್ಸೀಕರಣದಿಂದ ಘನೀಭೂತವಾಗಿ ವಿಫಲವಾ ಯಿತು. ಅವನಿಗೆ ಕ್ಯಾಲ್ಸೀಕರಣವನ್ನು ತಡೆಗಟ್ಟುವ ವಿಧಾನ ತಿಳಿದಿರಲಿಲ್ಲ. ಹಾಗಾಗಿ ಈಗ್ಗೆ ೩ ವರ್ಷಗಳ ಹಿಂದೆ ಮಾರುಕಟ್ಟೆಯಿಂದ ಎಲ್ಲ ಕೃತಕ ಕವಾಟಗಳನ್ನು ಹಿಂತೆಗೆದುಕೊಳ್ಳಲಾಯಿತು. ಇದರಿಂದ ಹೃದಯಾ ಘಾತಕ್ಕೆ ಒಳಗಾದ ಲೊನೆಸ್ಕೋ, ಈವತ್ತು ಜೀವಚ್ಛವ ವಾಗಿದ್ದಾನೆ.....

ನಾಲ್ಕನೆಯ ಮನುಷ್ಯ ಫ್ರಾನ್ಸಿನ ಅಲೆನ್ ಕಾರ್ಪೆಂ ಟರ್ ! ಇವನು ಹಂದಿಯ ಹೃದಯ ಕವಾಟವನ್ನು ಬಳಸಿ, ಮಾನವ ಕವಾಟವನ್ನು ರೂಪಿಸಿದ. ಈ ಕವಾ ಟವೂ ಕ್ಯಾಲ್ಸೀಕರಣಕ್ಕೆ ತುತ್ತಾಗುತಿತ್ತು. ಹಾಗಾಗಿ ಸೂಕ್ತ ಕೃತಕ ಕವಾಟವನ್ನು ರಚಿಸಲು ನಾನು ನಿರ್ಧರಿಸಿದೆ.

ಜಗತ್ತಿನಲ್ಲಿ ನನ್ನದು ಐದನೆಯ ಕೃತಕ ಕವಾಟ. ಅದನ್ನು ಒಂಬತ್ತು. ವರ್ಷದ ರೋಗಿಗೆ ಅಳವಡಿಸಿದೆ. ಇದನ್ನು ಅಮೆರಿಕದವರು ನಂಬಲೇ ಇಲ್ಲ! ನನ್ನ ಕವಾಟಕ್ಕೆ ರಕ್ತಹೆಪ್ಪುರೋಧಕಗಳು (ಪ್ರಿ 'ಬೆಟ್ರ್ಫ್ರೈಫ) ಬೇಕಿಲ್ಲ. ನನ್ನ ಕವಾಟದ ವಿಶಿಷ್ಟ ರಚನೆಯು ಕೆಂಪು ರಕ್ತಕಣಗಳನ್ನು ನಾಶಪಡಿಸುವುದಿಲ್ಲ. ಇದನ್ನೂ ಅಮೆರಿಕನ್ನರು ನಂಬಲಿಲ್ಲ.

ಕಳೆದ ಕೆಲವು ತಿಂಗಳಿನಿಂದ ನಾನು ಭಾರತದಲ್ಲಿ ಇದ್ದೇನೆ. ಈ ಅವಧಿಯಲ್ಲಿ ಎರಡು ಎಲೆಗಳ ಜೈವಿಕ ಕವಾಟವನ್ನು (ಈಟರ್ಬ ದಟರ್ ಈರ್ಬ್ಬಟರ್ಫ್ರೈ) ಸೃಜಿಸಿದ್ದೇನೆ. ಇಂತಹದು ಇಡೀ ಪ್ರಪಂಚದಲ್ಲಿ ಎಲ್ಲೂ ದೊರೆಯುವುದಿಲ್ಲ. ಇಂತಹ ಕವಾಟವನ್ನು ಸೃಜಿಸುವ ಸಾಧ್ಯತೆಯ ಬಗ್ಗೆ ಯಾರು ಯೋಚಿಸಿಯೂ ಇರುವುದಿಲ್ಲ.

ಏಕೆಂದರೆ ಇದರ ತಾಂತ್ರಿಕ ರಚನೆ ಅಷ್ಟು ಕಠಿಣವಾಗಿದೆ. ಆದರೆ, ನಾನದನ್ನು ಸಾಧಿಸಿದ್ದೇನೆ.

ಪ್ರಶ್ನೆ : ನಮ್ಮ ದೇಹವು ಝಿರ್ಕೋನಿಯಂ ಅನ್ನು ಒಪ್ಪುತ್ತದೆ ; ತಿರಸ್ಕರಿಸುವುದಿಲ್ಲ ಎಂದಿರಲ್ಲ...ಹಾಗಿದ್ದ ಮೇಲೆ ಅದನ್ನು ಇತರ ಕೃತಕ ಅಂಗಾಂಗಗಳಲ್ಲಿ ಬಳಸ ಬಹುದೆ? ಉದಾ : ಕೃತಕ ಕೀಲು ?......

ಬರೂವ: ಖಂಡಿತ ಬಳಸಬಹುದು. ಆದರೆ ಅದಕ್ಕೆ ಅಗತ್ಯವಾದಷ್ಟು ಲೋಹ ಸಿಗಬೇಕಷ್ಟೆ. ಏಕೆಂದರೆ ಝಿರ್ಕೋನಿಯಂ ಬಹಳ ಮುಖ್ಯವಾದ ಲೋಹ......ಇದನ್ನು ನಮ್ಮ ಸೈನ್ಯದಲ್ಲಿ ಬಹುಪಾಲು ಉಪಯೋಗಿಸುತ್ತಾರೆ.

ಪ್ರಶ್ನೆ : ಅಂದರೆ ನೀವು ನಿರ್ಮಿಸುವ ಪ್ರತಿಯೊಂದು ಕವಾಟದ ಗುಣಮಟ್ಟವನ್ನು ನಿರ್ಧರಿಸಬೇಕು ಎಂದಾಯಿತು. ಇದನ್ನು ಹೇಗೆ ಮಾಡುತ್ತೀರಿ?

ಬರೂವ : ನಾನು ನನ್ನ ಜೈವಿಕ ಕವಾಟಗಳ ಗುಣ ಮಟ್ಟವನ್ನು ಮುಂಬಯಿಯ ದೇವನಾರ್ ಹತ್ತಿರ ವಿರುವ ಕಸಾಯಿಖಾನೆಯಲ್ಲಿ ಆರಂಭಿಸುತ್ತೇನೆ....

ನಾನು ಪ್ರಾಣಿಯನ್ನು ವಧಿಸಿದ ೨೦ ನಿಮಿಷಗಳ ಒಳಗೆ ಅದರ ಹೃದಯಪೊರೆಯನ್ನು ಬೇರ್ಪಡಿಸು ತ್ತೇನೆ. ಅದು ಇಪ್ಪತ್ತೇ ನಿಮಿಷಗಳಾಗಿರಬೇಕು. ಇಲ್ಲದಿ ದ್ದರೆ ಕವಾಟದ ಗುಣಮಟ್ಟ ಹಾಳಾಗುತ್ತದೆ.

ನಂತರ ಪೊರೆಯನ್ನು ಪ್ರತಿಜೈವಿಕ ದ್ರಾವಣದಲ್ಲಿ ಡುತ್ತೇನೆ.

ನಂತರ ಶಿಲೀಂದ್ರರೋಧಕ ದ್ರಾವಣದಲ್ಲಿಡು ತ್ತೇನೆ. ಆಗ ಉಷ್ಣತೆ ೪°, ಇರುವಂತೆ ಎಚ್ಚರ ವಹಿಸುತ್ತೇನೆ. ನಂತರ ಅದನ್ನು ನನ್ನ ಪ್ರಯೋಗಾಲ ಯಕ್ಕೆ ಸಾಗಿಸಿ ಶುಚಿಗೊಳಿಸುತ್ತೇನೆ...ನಂತರ ಹೃದಯದ ಪೊರೆಯಲ್ಲಿರುವ ಕ್ಯಾಲ್ಸಿಯಂ, ಮೆಗ್ನೀಸಿ ಯಂ ಹಾಗೂ ಇತರ ಧಾತುಗಳನ್ನು ರಾಸಾಯನಿಕ ವಾಗಿ ನಿವಾರಿಸುತ್ತೇನೆ. ಹಾಗೆಯೇ ಅದನ್ನು ನಮ್ಮ ದೇಹವು ತಿರಸ್ಕರಿಸದಿರಲು ಸೂಕ್ತ ರಾಸಾಯನಿಕ ಗಳಿಂದ ಸಂಸ್ಕರಿಸುತ್ತೇನೆ.

ನಂತರ ಕವಾಟವನ್ನು ರೂಪಿಸುತ್ತೇನೆ. ಅದನ್ನು ಯಂತ್ರದ ನೆರವಿನಿಂದ ಪುನಿಹ ಮಾಡುತ್ತೇನೆ. ಆಮೇಲೆ ಕವಾಟವನ್ನು ಎಲೆಕ್ಟ್ರಾನ್ ಮೈಕ್ರೋಸ್ಕೋಪಿನ ಅಡಿಯಲ್ಲಿ ಪರೀಕ್ಷಿಸುತ್ತೇನೆ. ಪುನಃ ಕವಾಟವನ್ನು ಪ್ರತಿ ಕ್ಯಾಲ್ಸೀಕರಣ ದ್ರಾವಣದಲ್ಲಿ ಸಂಸ್ಕರಿಸುತ್ತೇನೆ. ನಂತರ ಮತ್ತೆ ಕವಾಟವನ್ನು ಯಂತ್ರದೊಳಗೆ ಹಾಕಿ ಅದರ ದೃಢತೆಯನ್ನು ಅಂದರೆ ಮಾನವ ದೇಹದಲ್ಲಿ ಎಷ್ಟು ಕಾಲ ಬಾಳಬಹುದು ಎಂಬುದನ್ನು ಪರೀಕ್ಷಿಸುತ್ತೇನೆ.

ಪ್ರಶ್ನೆ : ಇಷ್ಟೊಂದು ಗುಣಮಟ್ಟ ತಪಾಸಣೆಗಳ ಗುಣಮಟ್ಟವನ್ನು ಹೊರಗಿನ ಯಾವುದಾದರೂ ಸಂಸ್ಥೆಗಳು ಪರೀಕ್ಷಿಸುತ್ತವೆಯೆ ?

ಬರೂವ : ಇಲ್ಲ, ಹೊರಗಿನ ಯಾವ ಸಂಸ್ಥೆಯೂ ಭಾಗವಹಿಸುವುದಿಲ್ಲ.

ಪ್ರಶ್ನೆ : ಸರ್ಕಾರದ ಸಂಸ್ಥೆಗಳೂ ಸಹ ?

ಬರೂವ: ಇಲ್ಲ, ನಾನು ಯಾವುದೇ ಸರ್ಕಾರಿ ಸಂಸ್ಥೆಯನ್ನು ಇದರೊಳಗೆ ಭಾಗವಹಿಸಲು ಇಚ್ಛಿಸುವು ದಿಲ್ಲ. ಏಕೆಂದರೆ ಅವರು ಎಲ್ಲವನ್ನು ಗೊಂದಲಗೊಳಿ ಸುತ್ತಾರೆ. ಆದರೆ...ಕಾಮನ್‌ವೆಲ್ತ್ ಸೆಕ್ರೆಟೇರಿಯಟ್ ಇದರಲ್ಲಿ ಭಾಗವಹಿಸುತ್ತದೆ. ಅಂದರೆ ಅವರು ನನ್ನನ್ನೇನೂ ಪರಿವೀಕ್ಷಿಸುವುದಿಲ್ಲ. ಅಗತ್ಯ ಗುಣಮಟ್ಟ ನಿಯಂತ್ರಣ ಸಲಕರಣೆಗಳನ್ನು ಒದಗಿಸುತ್ತಾರೆ.

ಪ್ರಶ್ನೆ : ಕೃತಕ ಕವಾಟಗಳು ಯಾವಾಗಲೂ ಯಶಸ್ವಿಯಾಗುತ್ತವೆಯೆ ?

ಬರೂವ: (ಯೋಚಿಸಿ) ನೀವು ಕಷ್ಟದ ಪ್ರಶ್ನೆ ಕೇಳುತ್ತಿದ್ದೀರಿ. ಒಂದೇ ಶಬ್ದದಲ್ಲಿ ಉತ್ತರಿಸಬೇಕಾದರೆ, ಹೌದು ಯಶಸ್ವಿಯಾಗುತ್ತವೆ. ಆದರೆ ನೀವು ಯಾವ ಕವಾಟವನ್ನು ಬಳಸುತ್ತಿದ್ದೀರಿ ಎಂಬುದನ್ನು ಅದು ಆದರಿಸಿರುತ್ತದೆ.

ಕವಾಟಗಳು ಯಾವಾಗಲೂ ಯಶಸ್ವಿಯಾಗುತ್ತವೆ. ನಿಜ...ಇಲ್ಲದಿದ್ದರೆ ನಾನು ವ್ಯಾಪಾರೀ ಮಟ್ಟದಲ್ಲಿ ಕೃತಕ ಕವಾಟಗಳನ್ನು ನಿರ್ಮಿಸುವ ಸಾಹಸಕ್ಕೆ ಇಳಿಯುತ್ತಿದ್ದೇನೆ ? ಅಷ್ಟು ಧೈರ್ಯ ನನಗೆ ಬರುತ್ತಲೇ ಇರಲಿಲ್ಲ.

ಪ್ರಶ್ನೆ : ನಿಮ್ಮ ಕವಾಟ ಎಷ್ಟು ವರ್ಷ ಬಾಳಬಹುದು!

ಬರೂವ: ನನ್ನ ಪ್ರಯೋಗಾಲಯದ ಪರೀಕ್ಷೆಗಳಿಂದ, ನನ್ನ ಯಾಂತ್ರಿಕ ಕವಾಟವು ಕನಿಷ್ಟ ೨೫-೩೦ ವರ್ಷಗಳಾದರೂ ಬಾಳಬಹುದೆಂದು ತಿಳಿದು ಬಂದಿದೆ. ಇನ್ನು ಜೈವಿಕ ಕವಾಟಗಳು...ಇದರ ಬಗ್ಗೆ ಅಧ್ಯಯನಗಳು ಇನ್ನೂ ನಡೆಯುತ್ತಿವೆ. ಇವೂ ಸಹ ಕನಿಷ್ಠ ೨೦ ವರ್ಷ ಬಾಳಬಹುದೆಂದು ನಿರೀಕ್ಷೆಯಿದೆ.

ಪ್ರಶ್ನೆ : ಈ ಅವಧಿಗೆ ಗ್ಯಾರಂಟಿಯನ್ನು ಕೊಡುತ್ತೀರ...

ಬರೂವ : ಖಂಡಿತ...ಇಲ್ಲದಿದ್ದರೆ ನಾನು ತೊಂದರೆಗೆ ಸಿಕ್ಕಿಹಾಕಿಕೊಳ್ಳುತ್ತೇನಲ್ಲವೆ ?....

ನೋಡಿ ರೋಗಿಗಳು ಸಾಯುತ್ತಾರೆ. ಆದರೆ ಅದಕ್ಕೆ ಕವಾಟ ಕಾರಣವಾಗೋಲ್ಲ. ರೋಗಿ ಸಾಯು ವುದಕ್ಕೆ ರೋಗದ ಹಂತ, ಹೃದಯದ ಆರೋಗ್ಯದ ಮಟ್ಟ, ಶಸ್ತ್ರಚಿಕಿತ್ಸಾ ನಂತರ ಆರೈಕೆ, ಶಸ್ತ್ರವೈದ್ಯನ ಸಾಮರ್ಥ್ಯ ಇತ್ಯಾದಿ ಅಂಶಗಳನ್ನೆಲ್ಲ ಆದರಿಸಿರುತ್ತದೆ...

ಪ್ರಶ್ನೆ : ಈಗ ಸಧ್ಯಕ್ಕೆ ನಾವು ಕವಾಟಗಳನ್ನು ವಿದೇಶ ಗಳಿಂದ ತರಿಸಿಕೊಳ್ಳುತ್ತಿದ್ದೇವೆ. ಇವಕ್ಕೂ ನಿಮ್ಮ ಕವಾ ಟಕ್ಕೂ ಇರುವ ವ್ಯತ್ಯಾಸಗಳೇನು ?

ಬರೂವ : ಮುಖ್ಯ ವ್ಯತ್ಯಾಸಗಳೆಂದರೆ, ನನ್ನ ಕವಾಟಗಳುಕ್ಯಾಲ್ಸೀಕರಣಕ್ಕೆ ಒಳಗಾಗುವುದಿಲ್ಲ. ನಶಿಸು ವುದಿಲ್ಲ. ದೀರ್ಘ ಬಾಳುತ್ತವೆ. ಶಸ್ತ್ರಚಿಕಿತ್ಸೆಯ ನಂತರ ಯಾವುದೇ ಔಷಧ ಸೇವನೆ ಅನಗತ್ಯ.

ಪ್ರಶ್ನೆ : ನಿಮ್ಮ ಕವಾಟಗಳ ಬೆಲೆಯೆಷ್ಟು?

ಬರೂವ : ಅಮೆರಿಕದ ಕವಾಟಗಳ ಬೆಲೆ ೨೦,೦೦೦-೩೦,೦೦೦ ಆಗುತ್ತದೆ. ನನ್ನದು ೧೦-೧೨,೦೦೦ಗಳಾಗಬಹುದು.

ಪ್ರಶ್ನೆ : ನಿಮ್ಮ ಕೇಂದ್ರದಲ್ಲಿ ಈಗ ಎಷ್ಟು ಕವಾಟ ಗಳನ್ನು ನಿರ್ಮಿಸುತ್ತಿದ್ದೀರಿ ? ನಿಮ್ಮ ಅಂತಿಮಗುರಿ ಎಷ್ಟು ?

ಬರೂವ : ಈಗ ದಿನಕ್ಕೆ ೨೦ ಜೈವಿಕ ಕವಾಟಗಳನ್ನು ನಿರ್ಮಿಸುತ್ತಿದ್ದೇನೆ. ಇನ್ನೂ ೪-೫ ತಿಂಗಳಲ್ಲಿ ದಿನಕ್ಕೆ ೫೦ ಕವಾಟಗಳನ್ನು ಸಿದ್ಧಪಡಿಸಬಹುದು. ದಿನಕ್ಕೆ ೧೫೦ ಕವಾಟಗಳನ್ನು ನಿರ್ಮಿಸುವುದು ನನ್ನ ಅಂತಿಮ ಗುರಿ.

ಪ್ರಶ್ನೆ : ಕೇರಳದ ಶ್ರೀ ಚಿತ್ರಾತಿರುನಾಳ್ ಇನ್‌ಸ್ಟಿಟ್ಯೂಟ್ ಫಾರ್ ಮೆಡಿಕಲ್ ಸೈನ್ಸ್ ಅಂಡ್ ಟೆಕ್ನಾಲಜಿ ಯವರು ಒಂದು ಟಿಲ್ಟಿಂಗ್ ವಾಲ್ವ್ ತಯಾರಿಸುತ್ತಿ ರುವುದಾಗಿ ಭಾರತ ಸರ್ಕಾರದ ಪ್ರೆಸ್ ಇನ್‌ಫರ್ಮೇ ಶನ್ ಬ್ಯೂರೋ ಹೇಳಿದೆ...ಇದಕ್ಕೂ ನಿಮ್ಮ ಕವಾ ಟಕ್ಕೂ ಇರುವ ವ್ಯತ್ಯಾಸವೇನು ?

ಬರೂವ: ಈ ಕವಾಟದ ಬಗ್ಗೆ ನಾನು ೧೯೭೫ ರಿಂದ ಕೇಳುತ್ತಿದ್ದೇನೆ. ಅದರ ಬಗ್ಗೆ ನಾನೇನೂ ಹೇಳು ವುದು ಇಲ್ಲ...ಒಂದು ಕವಾಟ ನಿರ್ಮಿಸಲು ೧೫ ವರ್ಷ ಬೇಕಾಗಿಲ್ಲ. ಅಲ್ಲದೆ...ಅವರ ಬಳಿ ನನ್ನಲ್ಲಿರುವಂತ ಪರೀಕ್ಷಾ ಯಂತ್ರಗಳಿಲ್ಲ. ಹಾಗಾಗಿ ಅವರ ಕವಾಟದ ಬಗ್ಗೆ ಎಚ್ಚರಿಕೆಯಿಂದಿರುವುದು ಉತ್ತಮ.

ಪ್ರಶ್ನೆ : ಕೃತಕ ಕವಾಟಗಳಲ್ಲದೆ, ನಿಮ್ಮ ಆಸಕ್ತಿಯ ವಿಷಯಗಳು ಬೇರೆ ಇವೆಯೆ ?

ಬರೂವ : ನಾನು ಕೃತಕ ಶ್ವಾಸಕೋಶವನ್ನು

ರೂಪಿಸಿದ್ದೇನೆ, ಅದರ ಉತ್ಪಾದನೆಯನ್ನೂ ಇಷ್ಟರಲ್ಲೇ ಆರಂಭಿಸಲಿದ್ದೇನೆ...

ಪ್ರಶ್ನೆ : ಇದು ಯಾರಿಗೆ ಬೇಕಾಗಬಹುದು ?

ಬರೂವ : ಎಲ್ಲ ಹೃದಯ ರೋಗಿಗಳೂ ಇದನ್ನು ಬಳಸಬಹುದು. ಇದನ್ನು ಎದೆಗೂಡಿನಲ್ಲಿ ಇಡೋ ದಿಲ್ಲ. ತೆರೆದ ಹೃದಯ ಶಸ್ತ್ರಚಿಕಿತ್ಸೆಗಳಲ್ಲಿ ಉಪಯೋಗಿ ಸುತ್ತೇನೆ.

ಪ್ರಶ್ನೆ : ಅಂದರೆ ಸಧ್ಯಕ್ಕೆ ಬಳಕೆಯಲ್ಲಿರುವ ''ಹಾರ್ಟ್‌ಲಂಗ್ ಮೇಶೀನನ್ನು'' ಬದಲಿ ಮಾಡಲೆಂದೆ ?

ಬರೂವ : ಇಲ್ಲ ಇಲ್ಲ.... ಇದೊಂದು 'ಮೆಂಬ್ರೇನ್ ಆಕ್ಸಿಜನೇಟ್' ತೆರೆದ ಹೃದಯ ಶಸ್ತ್ರಚಿಕಿತ್ಸೆಯಲ್ಲಿ ಬಳಸಬಹುದು. ಇದಲ್ಲದೆ ಪೇಸ್ ಮೇಕರ್‌ಗಳನ್ನೂ ರೂಪಿಸಿದ್ದೇನೆ. ಜೊತೆಗೆ ೧೧ ತರಹದ ಜೈವಿಕ ಕವಾಟಗಳನ್ನು ರೂಪಿಸಿದ್ದೇನೆ...

ಓದುಗರೆ...ವೈದ್ಯಕೀಯ ಕ್ಷೇತ್ರದ ಕನಿಷ್ಠ ಜ್ಞಾನ ಇರುವವರಿಗೆಲ್ಲ ತಿಳಿಯುತ್ತದೆ ಈ ಸಂದರ್ಶನವನ್ನು ಒಮ್ಮೆ ಓದಿದರೆ...ಇವನೆಂತಹ ರೈಲು ಬಿಡುತ್ತಿದ್ದಾ ನೆಂದು !

ಇಂತಹ ಶಸ್ತ್ರತಜ್ಞರು ಇನ್ನೂ ಸಕ್ರಿಯವಾಗಿದ್ದಾರೆ. ಇದಕ್ಕೆ ಕಾರಣ ಹಲ್ಲುಗಳೇ ಇಲ್ಲದಿರುವ ನಮ್ಮ ಭಾರತೀಯ ವೈದ್ಯಕೀಯ ಮಂಡಳಿ. ಹಾಗೂ ನೂತನ ಶಸ್ತ್ರಚಿಕಿತ್ಸಾ ಪ್ರಯೋಗವನ್ನು ನಡೆಸಲು ಇರಬೇಕಾದ ವಿಧಿವಿಧಾನಗಳ ಕೊರತೆ.

ಒಂದು ಹೊಸ ಔಷಧವನ್ನು ಮಾರುಕಟ್ಟೆಗೆ ತರಬೇಕಾದರೆ, ಅದಕ್ಕೆ ಹಲವಾರು ರೀತಿನೀತಿಗಳಿವೆ. ಇವು ಕೆಲವೊಮ್ಮೆ ವರ್ಷಗಳನ್ನೇ ತೆಗೆದುಕೊಳ್ಳ ಬಹುದು. ಆದರೆ ನೂತನ ಶಸ್ತ್ರಚಿಕಿತ್ಸೆಗಳನ್ನು ನಡೆಸಲು ಇಂತಹ ಕಟ್ಟು ಪಾಡುಗಳು ಇಲ್ಲವೇ ಇಲ್ಲ. ಒಬ್ಬ ಶಸ್ತ್ರವೈದ್ಯ ತನಗೆ ಸರಿಕಂಡು ಬಂದ ಪ್ರಯೋಗವನ್ನು ತಾನು ಧೈರ್ಯದಿಂದ ಮಾಡಬಹುದು. ಬಹುಶಃ ಇಂತಹದನ್ನು ಅವನ ಸಹೋದ್ಯೋಗಿಗಳು ಖಂಡಿಸ ಬಹುದು. ಇಲ್ಲವೇ ಆಸ್ಪತ್ರೆಯ ನಿರ್ವಾಹಕರು ತಡೆ ಗಟ್ಟಬಹುದು ಅಷ್ಟೆ.

ಆದರೆ ಬರೂವನಂತಹವರು ತನ್ನದೇ ಆದ ಆಸ್ಪತ್ರೆಯನ್ನು ಹೊಂದಿದ್ದರೆ, ಹಂದಿ ಹಗರಣಗಳು ಖಂಡಿತ ನಡೆಯುತ್ತವೆ.

( ೨೫ನೇ ಪುಟದಿಂದ )

# ಬರಲಿದೆ ರಕ್ತರಹಿತ ಶಸ್ತ್ರಚಿಕಿತ್ಸೆ

ಆದರೆ... ಬಯಾಪ್ಸಿ ಎಂದರೆ ಅದೊಂದು ಪುಟ್ಟ ಶಸ್ತ್ರ ಚಿಕಿತ್ಸೆಯೇ ಸರಿ. ನೋವಿನಿಂದ ಕೂಡಿರುವಂತಹದು. ಇದನ್ನು ಮಾಡಿಸಿಕೊಳ್ಳಲು ಒಂದು ದಿನವಾದರೂ ರಜೆಯನ್ನು ಹಾಕಿಕೊಳ್ಳ ಲೇಬೇಕು. ಇದು ಸ್ವಲ್ಪ ದುಬಾರಿಯೂ ಹೌದು. ಫಲಿತಾಂಶ ಬರಲು ಕನಿಷ್ಠ ೪೮ ಗಂಟೆಗಳಾ ದರೂ ಕಾಯಲೇ ಬೇಕು. ಅಲ್ಲಿಯವರೆಗೆ ಆ ಹೆಣ್ಣು ಆತಂಕದಲ್ಲಿ ಬೇಯುತ್ತಿರುತ್ತಾಳೆ.

**ಅಲ್ಟ್ರಾಸೌಂಡ್**

ಕಳೆದ ವರ್ಷ ಸೀಟಲ್‌ನಲ್ಲಿರುವ ವಾಶಿಂಗ್ ಟನ್ ವಿಶ್ವವಿದ್ಯಾಲಯ ಹಾಗೂ ಅಪ್ಲೈಡ್ ಫಿಸಿಕಲ್ ಲ್ಯಾಬೋರೇಟರಿಯವರು (ಎ.ಪಿ.ಎಲ್.) ಜಂಟಿಯಾಗಿ ಒಂದು ಸಾಧನವನ್ನು ರೂಪಿಸಿದ್ದಾರೆ. ಈ ಸಾಧನಕ್ಕೆ ಅಮೆರಿಕದ ಎಫ್.ಡಿ.ಎ. ಅನುಮತಿ ಯನ್ನು ನೀಡಿದೆ. ಇದೊಂದು ಅಲ್ಟ್ರಾಸೌಂಡ್ ಸಾಧನ. ಈ ಸಾಧನದ ನೆರವಿನಿಂದ ಮಹಿಳೆಯ ಸ್ತನವನ್ನು ಕೇವಲ ೧೫ ನಿಮಿಷ ಪರೀಕ್ಷಿಸಿದರೆ ಸಾಕು. ಅನುಮಾನಾಸ್ಪದ ಗಂಟು ಕ್ಯಾನ್ಸರ್ ಹೌದೋ ಅಲ್ಲವೋ ? ಎಂಬುದನ್ನು ತಿಳಿಯ ಬಹುದು. ಈ ಸಾಧನ ಬಂದ ಮೇಲೆ ಬಯಾಪ್ಸಿ ಮಾಡಿಸಿ ಕೊಳ್ಳಲು ಸಿದ್ಧರಿದ್ದ ಶೇಕಡಾ ೪೦ರಷ್ಟು ಮಹಿಳೆ ಯರು, ಬಯಾಪ್ಸಿ ಮಾಡಿಸಿಕೊಳ್ಳ ದೆಯೇ ತಮಗೆ ಕ್ಯಾನ್ಸರ್ ಬಂದಿಲ್ಲ ಎಂಬ ವಿಷಯ ವನ್ನು ಖಚಿತ ಪಡಿಸಿಕೊಂಡರು.

ಮುಂದಿನ ದಿನಗಳಲ್ಲಿ ಈ ಅಲ್ಟ್ರಾಸೌಂಡ್ ಸಾಧನ ಮತ್ತಷ್ಟು ಅಭಿವೃದ್ಧಿಗೊಂಡು ಮಹಿಳೆ ಯರ ವೆಚ್ಚ, ನೋವು, ಆತಂಕಗಳನ್ನು ಕಡಿಮೆ ಮಾಡಲಿದೆ, ಸಮಯವನ್ನು ಉಳಿಸಲಿದೆ ಎಂದು ಹೇಳುತ್ತಾರೆ ಎ.ಪಿ.ಎಲ್‌ನ ಡೆನಿಸ್. ಸಿ.ಫಿಲ್.

**ಮುರಿದ ಮೂಳೆ**

ಇಷ್ಟು ದಿನಗಳವರೆಗೂ ಒಂದು ಸಲ ಮೂಳೆ ಮುರಿಯಿತೆಂದರೆ, ಅದು ಮತ್ತೆ ಕೂಡಲು ಕನಿಷ್ಟ ೬ ವಾರಗಳಾದರೂ ಬೇಕೇ ಬೇಕು. ಅದಕ್ಕಿಂತ ಬೇಗ ಮೂಳೆ ಕೂಡುವುದಿಲ್ಲ. ಕೂಡುವಂತೆ ಮಾಡಲು ಸಾಧ್ಯವಾಗುತ್ತಿರಲಿಲ್ಲ, ಈಗ ಮೂಳೆ ಕೂಡು ವಿಕೆಯ ಸಹಜಕ್ರಿಯೆಯನ್ನು ಉತ್ತೇಜಿಸುವ ಒಂದು ಅಲ್ಟ್ರಾಸೌಂಡ್ ಸಾಧನವು ಮಾರುಕಟ್ಟೆಗೆ ಬಂದಿದೆ. ಅಲ್ಟ್ರಾ ಸೌಂಡ್ ಉತ್ಪಾದಿಸುವ ಸಾಧನವೊಂದನ್ನು ಮೂಳೆ ಮುರಿದ ಅಂಗದ ಮೇಲಿಟ್ಟು ಪ್ಲಾಸ್ಟರ್ ಹಾಕಿದರಾ ಯಿತು. ದಿನಕ್ಕೆ ೨೦ ನಿಮಿಷಗಳ ಕಾಲ ಇದನ್ನು ಚಲಾ ಯಿಸಿದರೆ ಸಾಕು !....ಮೂಳೆ ಕೂಡಿಕೊಳ್ಳುತ್ತದೆ !

ಮೂಳೆ ಕೂಡಲು ಮಾತ್ರವಲ್ಲ ದೇಹದ ಒಳಗೆ ಯಾವುದಾದರೊಂದು ರಕ್ತನಾಳ ಭಂಗವಾಗಿ ರಕ್ತ ಸ್ರಾವವಾಗುತ್ತಿದ್ದರೆ, ಹೊರಗಿ ನಿಂದಲೇ ಅಲ್ಟ್ರಾ ಸೌಂಡ್ ತರಂಗಗಳನ್ನು ಹಾಯಿಸಿ ರಕ್ತ ಸ್ರಾವವನ್ನು ನಿಲ್ಲಿಸಬಹುದು. ಅಂತಹ ಸಾಧನಗಳು ಈಗ ವಿದೇಶಗಳಲ್ಲಿ ದೊರೆಯುತ್ತಿವೆ.

**ಭವಿಷ್ಯ :**

ಬರಲಿರುವ ದಿನಗಳಲ್ಲಿ ರಕ್ತರಹಿತ ಶಸ್ತ್ರ ಚಿಕಿತ್ಸೆಗೆ ಉತ್ತಮ ಭವಿಷ್ಯವಿದೆ. ಇದುವರೆಗೂ ತಿಳಿಸಿದ ಅಂಗಗಳಲ್ಲದೆ ಮೊಣಕಾಲಿಗೆ ಬಿದ್ದ ಪೆಟ್ಟು (ಕ್ರೀಡಾಪಟು ಗಳಲ್ಲಿ ಇದು ಸಾಮಾನ್ಯ) ಹಾಗೂ ಕೀಲುರಿಯೂತದಿಂದ, ಆಘಾತ ಗೊಂಡ ಕೀಲುಗಳಷ್ಟನ್ನೂ ರಕ್ತರಹಿತ ಶಸ್ತ್ರ ಚಿಕಿತ್ಸೆಯಿಂದ ಗುಣಪಡಿಸಬಹುದು. ಹಾಗೆಯೇ ದಂತ ಚಿಕಿತ್ಸೆಯಲ್ಲಿ ಇದನ್ನು ಬಳಸಬಹುದು. ರಾತ್ರಿ ಇಡೀ ರೈಲಿನಂತೆ ಗೊರಕೆ ಹೊರಡಿಸಿ ಇತರರ ನಿದ್ರೆಗೆ ಭಂಗ ತರುವವರೂ ಸಹ ರಕ್ತರಹಿತ ಶಸ್ತ್ರಚಿಕಿತ್ಸೆಯಿಂದ ಗುಣಹೊಂದ ಬಹುದು. ಹೀಗೆ ವೈವಿಧ್ಯಮಯ ಕ್ಷೇತ್ರಗಳಲ್ಲಿ ರಕ್ತ ರಹಿತ ಶಸ್ತ್ರಚಿಕಿತ್ಸೆಯ ಯೋಜನೆಗಳು ದಿನವೂ ಬರುತ್ತಿವೆ. ಈ ಯೋಜನೆಗಳಲ್ಲಿ ಅರ್ಧದಷ್ಟು ಯಶಸ್ವಿಯಾದರೂ ಸಾಕು ಸಾಂಪ್ರದಾಯಕ ಚೂರಿಗೆ ತುಕ್ಕು ಹಿಡಿಯುವುದು ಖಂಡಿತ !

ಅಂದು ಇಂಗ್ಲೆಂಡಿನ ಕ್ಷೌರಿಕರು ರಕ್ತಹರಿಯ ಬಿಡುತ್ತಿದ್ದುದನ್ನು ಇಂದು ನಾವು ಖಂಡಿಸು ತ್ತಿದ್ದೇವೆ. ಮುಂದಿನ ದಿನಗಳಲ್ಲಿ ಜನರು ಇಂದು ನಾವು ನಡೆಸುತ್ತಿರುವ ಸಾಂಪ್ರದಾಯಿಕ ಶಸ್ತ್ರ ಚಿಕಿತ್ಸೆಗಳನ್ನು ಛೇಡಿಸಲಿದ್ದಾರೆ !

ಆ ದಿನ ದೂರವಿಲ್ಲ.

## ಬಾರಾ ಖೂನ್ ಮಾಫ್:

ಡಾ. ಬರೂವಾ ಹಾಗು ಆತನ ಸಹ ವೈದ್ಯರಿಗೆ ಇತ್ತೀಚೆಗೆ ಉಚ್ಚ ನ್ಯಾಯಾಲವುಜಾಮೀನಿನ ಮೇಲೆ ಬಿಡುಗಡೆ ಮಾಡಿದೆ. ಅಂತಿಮ ತೀರ್ಪು ಬರುವವರೆಗೆ ಆರೋಪಿಗಳು (ಅ) ದೇಶ ಬಿಟ್ಟು ಕದಲುವಂತಿಲ್ಲ. (ಆ) ವಾರಕ್ಕೆರಡು ಸಲ ಪೋಲೀಸ್ ಠಾಣೆಯಲ್ಲಿ ಹಾಜರಿ ಹಾಕತಕ್ಕದ್ದು. (ಇ) ಅಂಗಾಂಗ ಬದಲಿ ಚಿಕಿತ್ಸೆ ನಡೆಸುವಂತಿಲ್ಲ. (ಈ) ಅಂತಹ ಚಿಕಿತ್ಸೆ ನಡೆಸಬೇಕಾದರೆ ICMR ಮತ್ತು IMC ಗಳ ಉಧಿಕೃತ ಪರವಾನಿಗೆಯನ್ನು ಪಡೆಯಬೇಕು.

ವೈದ್ಯ ಸಾಧನಗಳು

# ಇಂಜೆಕ್ಷನ್ ಸೂಜಿ ಸಿರಿಂಜ್



ಬಾತುಕೋಳಿ ನೀಡಿದ ಸಿರಿಂಜ್

ಇಂದು ಹಲವು ರೀತಿಯಲ್ಲಿ ಪರಿ ವರ್ತನೆ ಗೊಂಡಿದೆ. ಆದರೆ ಸಿರಿಂಜ್ ಈಜಿಪ್ತ್‌ನಲ್ಲಿ ಪುರಾತನ ಕಾಲದಲ್ಲೇಬಳಕೆ ಯಲ್ಲಿತ್ತು.

೧೮೫೨ರಲ್ಲಿ ಪ್ಯಾರಿಸ್ ನಗರದಲ್ಲೆಲ್ಲ ಕಾಲರಾ. ಇದರಿಂದ ಬಡವ, ಬಲ್ಲಿದರೆನ್ನದೆ ಸಾವಿರಾರು ಜನ ಸತ್ತರು. ಆಗ ಪ್ಯಾರಿಸ್‌ನ ದೊಡ್ಡ ಆಸ್ಪತ್ರೆಯಲ್ಲಿ ಐರಿಶ್‌ನ ಶಾಂಗ್‌ನಸಿ ಎಂಬ ವೈದ್ಯರಿದ್ದರು. ಇವರು ಕಾಲರಾ ಬಂದ ರೋಗಿಗಳ ದೇಹದೊಳಕ್ಕೆ ಔಷಧಿ ಯನ್ನು ಚುಚ್ಚಿ ಜನರನ್ನು ಉಳಿಸಬೇಕೆಂಬ ನಾನಾ ಪ್ರಯತ್ನದಲ್ಲಿ ತೊಡಗಿದರು.

ಆ ಆಸ್ಪತ್ರೆಯ ಹಿಂದೆ ಬಾತುಗಳ ಹಿಂಡೇ ಇತ್ತು. ಅವುಗಳನ್ನು ನೋಡಿದಾಗ ಶಾಂಗ್‌ನಸಿಯವರಿಗೆ ಒಂದು ಆಲೋಚನೆ ಬಂತು. ಅದರ ಬಾಲದ ಬದಿಯ ಒಂದು ಗರಿಯನ್ನು ಕಿತ್ತುತಂದರು. ಅದು ತುಂಬ ಚೂಪಾಗಿತ್ತು. ಜೊತೆಗೆ ಅದು ನಳಿಕೆಯಂತೆಯೂ ಇತ್ತು.

**ಗರಿ ಸಿರಿಂಜ್**

ಬಾತಿನ ಗರಿಯನ್ನು ರೋಗಿಯ ಮೈಗೆ ಚುಚ್ಚಿ ಗರಿ ಬುಡದ ಮೂಲಕ ದೇಹದೊಳಕ್ಕೆ ಔಷಧಿಯನ್ನು ಹಾಯಿಸಿದರು. ಆದರೆ ರೋಗಿಗಳು ಸತ್ತುಹೋದರು.

ಇದಕ್ಕೆ ಬಹುಶಃ ಚುಚ್ಚಿದಾಗ ತಲೆದೋರಿದ ರಕ್ತ ಗರಣೆಗಳು ಕಾರಣವಾಗಿರಬಹುದು ಅಥವಾ ಸೋಂಕೂ ಆಗಿರಬಹುದು.

ಶಾಂಗ್‌ನಸಿಯವರೊಡನೆ ಕೆಲಸ ಮಾಡುತ್ತಿದ್ದ ವರು ಫ್ರಾನ್ಸ್ ವೈದ್ಯ ಗೇಬ್ರಿಯಲ್. ಇವರು ಪಿಸ್ಟನ್ ಮೂಲಕ ಔಷಧಿಯನ್ನು ದೇಹದೊಳಕ್ಕೆ ಹಾಯಿಸ ಬಹುದು ಎಂಬ ಸಲಹೆಯನ್ನು ನೀಡಿದರು. ಅದೇ ಇಂದಿನ ಸೂಜಿಮದ್ದಿಗೆ ಬಳಸುವ ಸಿರಿಂಜ್ ಮೂಲ:

ಸಿರಿಂಜ್‌ಗಳು ಬಹು ಹಿಂದಿನಿಂದ ಬಳಕೆಯಲ್ಲಿದ್ದವು. ಅವೆಲ್ಲ ದೊಡ್ಡ ಗಾತ್ರದ ಸಿರಿಂಜ್‌ಗಳು. ವೈದ್ಯ ಕೀಯರಂಗದಲ್ಲೂ ಸಿರಿಂಜ್‌ಗಳ ಬಳಕೆ ಇತ್ತು.

ಮಾನವನ ಆಸನ, ಸ್ತ್ರೀಯರ ಜನನ ದ್ವಾರಗಳನ್ನು ಶುದ್ಧೀಕರಿಸಲು ಈ ಸಿರಿಂಜ್‌ಗಳನ್ನು ಬಳಸುತ್ತಿದ್ದರು. ಆದರೆ ಇವು ಗಾತ್ರದಲ್ಲಿ ದೊಡ್ಡದಾಗಿದ್ದವು.

**ಈಜಿಪ್ಟ್:**

ಕಿವಿ ಶುದ್ಧ ಮಾಡುವ ಸಣ್ಣ ಅಳತೆಯ ಸಿರಿಂಜನ್ನು ಈಜಿಪ್ತಿನವರು ಬಳಸಿದ್ದು, ಚಾರಿತ್ರಿಕ ಭಗ್ನ ಗೃಹಗಳಲ್ಲಿ ಸಿಕ್ಕಿದೆ. ಈಜಿಪ್ಟಿನವರು ಸತ್ತವರ ದೇಹದಲ್ಲಿ ಹೆಪ್ಪು ಗಟ್ಟದ ರಕ್ತವನ್ನು ಸಿರಿಂಜ್ ಮೂಲಕ ಹೀರಿ ಆ ಬಳಿಕ ಮಮ್ಮಿ ಮಾಡುತ್ತಿದ್ದುದ್ದೂ ತಿಳಿದು ಬಂದಿದೆ.

ಆದರೆ ಅವೆಲ್ಲ ಸೂಜಿ ಮದ್ದಿಗೆ ಬಳಸಲಾಗದಷ್ಟು ದೊಡ್ಡವುಗಳೇ ಆಗಿದ್ದವು. ೧೭ನೇ ಶತಮಾನದಲ್ಲಿ ಜರ್ಮನಿಯ ಇಬ್ಬರು ವೈದ್ಯರು ರೋಗಿಗಳಿಗೆ ಇಂಜೆ ಕ್ಷನ್ ನೀಡಿ ಗುಣಪಡಿಸಿದರೆಂದು ಹೇಳಲಾಗಿದೆಯಾ ದರೂ ಅದರ ಯಾವುದೇ ದಾಖಲೆ ಲಭ್ಯವಿಲ್ಲ.

ಐರಿಶ್ ವೈದ್ಯರೊಬ್ಬರು ೧೮೫೭ರಲ್ಲಿ ರೋಗಿಗಳ ದೇಹದೊಳಕ್ಕೆ ''ಔಷಧಿ ಚುಚ್ಚಿದ ಹೇಳಿಕೆಯಿದೆಯಾ ದರೂ ಅದು ಯಾವ ಬಗೆಯ ಸಿರಿಂಜ್ ? ಅದೇನು ಇತ್ಯಾದಿ ದಾಖಲೆಗಳಾವುವೂ ಲಭ್ಯವಿಲ್ಲ.

ಆದರೆ ಫ್ರಾನ್ಸ್‌ನ ಪ್ರಿವಾಸ್‌ಶಾಂಗ್‌ನಸಿ ಪ್ರಯೋ ಗದ ಬಳಿಕ ಎರಡು ಸತ್ಯಗಳನ್ನು ಈ ನಿಟ್ಟಿನಲ್ಲಿ ಬಲವಾಗಿ ನಂಬಿದರು. ಸಿರಿಂಜ್ ತುಂಬ ಚಿಕ್ಕದಾಗಿ ಇರಬೇಕು. ಎರಡನೆಯದು ಚುಚ್ಚುವ ಸೂಜಿಯು ಅತಿ ಚೂಪಾ ದುದಾಗಿರಬೇಕು ಮತ್ತು ಆ ಸೂಜಿ ಔಷಧಿ ಒಳತಳ್ಳುವ ನಳಿಕೆ ಆಗಿಯೂ ಇರಬೇಕು. ಆದರೆ ಈ ಆಲೋಚನೆಯಂತೆ ಸೂಜಿ ತಯಾರಿ ಸುವುದು ಅಷ್ಟು ಸುಲಭದ್ದಾಗಿರಲಿಲ್ಲ. ನಳಿಕೆಯಂಥ ಸೂಜಿಗಳು ಬೇಗ ಬಾಗುತ್ತಿದ್ದವು. ತೀರಾ ಸಪೂರವಾಗಿ ತಯಾರಿಸುವುದೂ ತುಂಬ ಕಷ್ಟದ್ದಾಗಿತ್ತು.

**ಬೆಳ್ಳಿಯಿಂದ ಪ್ಲಾಸ್ಟಿಕ್‌ಗೆ**

ಆದರೂ ಪ್ರಿವಾಸ್ ಪ್ರಯತ್ನ ಬಿಡದೆ ಮೊದಲ ಇಂಚೆಕ್ಷಮ್ ಸೂಜಿಗಳನ್ನು ತಯಾರಿಸಿ ಕುದುರೆ, ಮೊಲಗಳ ಮೇಲೆ ಪ್ರಯೋಗಿಸಿ ಯಶಸ್ಸು ಕಂಡರು. ಇವರ ಸಂಶೋಧನೆಯ ಮೇಲೆ ೧೮೫೨ ರಲ್ಲಿ ಫ್ರಾನ್ಸ್‌ನ ಒಂದು ಚಿಕ್ಕ ಕಂಪೆನಿಯು ಸಿರಿಂಜ್‌ಗಳನ್ನು ತಯಾರಿಸಲು ಆರಂಭಿಸಿತು.

ಆರಂಭದಲ್ಲಿ ತಯಾರಾದ ಸೂಜಿಗಳು ಶುದ್ಧ ಬೆಳ್ಳಿಯವು. ಮುಂದೆ ಕಬ್ಬಿಣ, ಸ್ಟೀಲ್‌ನ ಸೂಜಿಗಳು ತಯಾರಾದವು. ಸಿರಿಂಜ್‌ನ ಒಡಲು ಸಹ ಲೋಹದ ಬದಲಿಗೆ ಗಾಜಿನಿಂದ ತಯಾರಾಗತೊಡಗಿತು.

ಗಾಜಿನ ಸಿರಿಂಜನ್ನು ಬಿಸಿನೀರಿನಲ್ಲಿ ಸ್ಟೆರ್‌ಲೈಜ್ ಮಾಡಬಹುದು ಮತ್ತು ಇಂಜೆಕ್ಟ್ ಮಾಡುವ ಔಷಧಿಯ ಪ್ರಮಾಣ ಎಷ್ಟು ಎಂಬುದನ್ನು ಸರಿಯಾಗಿ ನೋಡಿಕೊಳ್ಳಬಹುದು. ಈ ಅನುಕೂಲಕ್ಕಾಗಿಯೇ ಗಾಜನ್ನು ಬಳಸಲಾಯಿತು. ಏಡ್ಸ್‌ನಂತ ಕಾಯಿಲೆಗಳು ಇಂಜೆಕ್ಷನ್ ಸೂಜಿಗಳ ಮೂಲಕ ಹಬ್ಬಬಹುದೆಂಬ ಭಯ ಬಂದ ಬಳಿಕ, ಒಂದೇ ಬಾರಿ ಬಳಸಿ ಬಿಸಾಡಬಹುದಾದ ಪ್ಲಾಸ್ಟಿಕ್ಕಿನ ಡಿಸ್‌ಪೋಸೇ ಬಲ್ ಸಿರಿಂಜ್‌ಗಳು ಈಗ ಬಂದಿವೆ.

ಅಂದು ಗರಿಯನ್ನು ಚುಚ್ಚಿದರು. ಒಂದು ಗರಿ ಯನ್ನು ಒಬ್ಬರಿಗೆ ಮಾತ್ರ. ಅದೀಗ ಪುನರಾವರ್ತನೆ ಯಾಗಿದೆ.

ಮಕ್ಕಳು ಎಲ್ಲದಕ್ಕೂ ಭಯಬೀಳುವುದೇಕೆ ? ಹಾಗೆ ನೋಡಿದರೆ ಹಿರಿಯರೂ ಸಹ ಕೆಲವೊಮ್ಮೆ ಸಣ್ಣ ಜಿರಲೆಗೂ ಭಯ ಬೀಳುತ್ತಾರಲ್ಲ. ಮಗು ಹಠ ಹಿಡಿಯುತ್ತಿದೆ ಯೆಂದರೆ ಅದರ ಹಿಂದೆ ಒಂದು ಭಯವಿದೆಯೆಂದೇ ಅರ್ಥ. ಏನಾಭಯ ? ಅದನ್ನು ಕಂಡುಕೊಳ್ಳುವುದು ಹೇಗೆ ?



# ಮಗು ಭಯ ಬೀಳುವುದೇಕೆ ?

ಕೆಲವು ಮಕ್ಕಳು ತುಂಬ ಭಯಬೀಳುತ್ತಾರೆ. ಯಾಕೆ ಹೀಗೆ ? ಮಗು ತನ್ನ ನೆರಳಿಗೇ ಯಾಕೆ ಭಯ ಪಡಬೇಕು ? ''ಕತ್ತಲೆ ಅಂದರೆ ಸಾಕು, ನಮ್ಮ ಹುಡುಗನಿಗೆ ತುಂಬ ಭಯ.'' ಇದು ಕೆಲವು ಹೆತ್ತವರಲ್ಲಿರುವ ಆತಂಕ. ಮಕ್ಕಳಲ್ಲಿನ ಇಂಥ ಭಯವನ್ನು ಹೋಗಲಾಡಿಸುವ ದಾರಿ ಇವರು ಅರಿಯರು. ಏನು ಮಾಡುವುದು ? ಎಂದು ಕೈ ಹಿಸುಕಿಕೊಳ್ಳುವವರೇ ಹೆಚ್ಚು.

''ಇದು ಅರ್ಥವಿಲ್ಲದ ಹೆದರಿಕೆ'' ಎಂದು ತುಚ್ಛೀಕಾರ ಮಾಡಿ ಅಲ್ಲಿಗೇ ಬಿಟ್ಟು ಬಿಡುವವರೂ ಇದ್ದಾರೆ. ಮಕ್ಕಳು ಮಾತ್ರ ಭಯಪಡುತ್ತಾರೆಯೇ? ಸರಿಯಾಗಿ ನೋಡಿದರೆ ನಾವೂ ಕೂಡ ಅನಗತ್ಯವಾಗಿ ಭಯ ಬೀಳುತ್ತೇವೆ. ಸಣ್ಣ ಜಿರಲೆಯಿಂದ ಹಿಡಿದು ಅಪರಿಚಿತ ವ್ಯಕ್ತಿಗಳವರೆಗೆ ಭಯ ಪಡುವ ಸಂಗತಿಗಳ ಸಾಲು ಸಾಲೇ ಇದೆ.

## ಸಹಜ ಭಯನೆಲೆಗಳು

ಎಲ್ಲಿ ಬಿದ್ದು ಬಿಡುತ್ತೇನೋ ಎಂದು ಮಗು ಅಳುತ್ತದೆ, ಭಾರೀ ಶಬ್ದ ಕೇಳಿ ಭಯಬಿದ್ದು ಕೂಗುತ್ತದೆ. ಇವೆಲ್ಲ ಬಾಲ್ಯದ ಸಹಜ ಸ್ವಭಾವ ಸಂಗತಿಗಳಾಗಿವೆ.

೬ ರಿಂದ ೧೦ ತಿಂಗಳ ಮಗುವಿಗೆ ಹೊಸ ಮುಖಗಳು ಕಂಡರೇನೇ ಅಳು ಬಂದುಬಿಡುತ್ತದೆ. ಸಾಮಾನ್ಯವಾಗಿ ಮಗುವು ತನ್ನ ಹೆತ್ತವರ ಮುಖಗಳನ್ನು ಬೇಗನೆ ಗುರುತಿಸುತ್ತದೆ. ಬೇರೆಯವರನ್ನು ಕಂಡರೆ ಬಹು ಪಾಲು ಅಳತೊಡಗುತ್ತದೆ. ಅವರಿಂದ ಎಲ್ಲಿ ತನಗೆ ಆಪತ್ತು ಬಂದೀತೋ ಎಂಬ ಒಳ ಅಂಜಿಕೆಯೇ ಇದಕ್ಕೆ ಕಾರಣ. ೮ರಿಂದ ೧೨ ತಿಂಗಳ ಮಗುವು ತಂದೆ ತಾಯಿ ತನ್ನನ್ನು ಬಿಟ್ಟು ಎಲ್ಲಿಗಾದರೂ ಹೋದಾಗ, ಬೇರ್ಪಟ್ಟ ಭಯ ಅದನ್ನು ಕಾಡುತ್ತದೆ. ಒಂದು ಮತ್ತು ಎರಡನೇ ವಯಸ್ಸಿನಲ್ಲಿ ಈ ಭಯವು ಬಲಗೊಳ್ಳುತ್ತದೆ.

ಅಂಗಡಿಗೆ ಹೋದ ಅಮ್ಮ, ಕಚೇರಿಗೆ ಹೋದ ಅಪ್ಪ, ಅಥವಾ ಇನ್ನೆಲ್ಲಿಗೋ ಹೋದ ಇಬ್ಬರೂ ಶೀಘ್ರದಲ್ಲೇ ವಾಪಾಸ್ಸಾಗುವರು ಎನ್ನುವುದು ಮಗುವಿಗೆ ತಿಳಿಯುವುದಿಲ್ಲ. ಅಮ್ಮ ಕಣ್ಣೆದುರಿಂದ ಹೋಗಿ ಬಿಟ್ಟಳು ಎನ್ನುವುದನ್ನಷ್ಟೇ ಅದು ನೆನೆಸುತ್ತದೆ.

ಇದೇ ರೀತಿ ಮಗುವೊಂದನ್ನು ನೋಡಿಕೊಳ್ಳುವ ಯಾರೇ ಆದರೂ ತಾತ್ಕಾಲಿಕವಾಗಿ ಆಚೀಚೆ ಹೋದಾಗಲೂ ಮಗು ಚಿಂತೆಗೆ, ಭಯಕ್ಕೆ ಈಡಾಗುತ್ತದೆ. ಈ ಚಿಕ್ಕ ವಯಸ್ಸಿನಲ್ಲಿ ನಾವು ಮಕ್ಕಳನ್ನು ಬಿಟ್ಟು ಹೆಚ್ಚು ಕಾಲ ದೂರ ಉಳಿಯಬಾರದು. ತಾವು ಬಳಿಯಿದ್ದು, ಮಗುವಿನಲ್ಲಿ ರಕ್ಷಣೆಯ ನಂಬಿಕೆಯನ್ನು ಈ ಕಾಲ ಘಟ್ಟದಲ್ಲಿ ಬೆಳೆಸುವುದು ಅಗತ್ಯ.

## ಒಡೆದದ್ದು ಇಡಿಯಲ್ಲ

ಎರಡು ಮತ್ತು ಮೂರರ ಪ್ರಾಯದಲ್ಲಿ ಮಗುವು ಕತ್ತಲೆ ಹಾಗೂ ಭಾವನೆಗಳನ್ನು ಮರೆಸುವ ಮುಖಗಳನ್ನು ಕಂಡರೆ ಭಯ ಗೊಳ್ಳುತ್ತದೆ. ದಿಢೀರನೆ ಭಯಕಚ್ಚಿಕೊಂಡು ತತ್ತರಿಸಿದಾಗ, ಹೆತ್ತವರ ಮುಖ ಕೂಡ ಅದಕ್ಕೆ ಭಯ ತರಬಹುದು. ಭಾವನೆ ಬತ್ತಿದ ಮುಖ ಗಳೆಲ್ಲಾ ಭಯ ಕೊಡುವ ಮುಖಗಳೇ ಆಗಿವೆ.

ಕೆಲವು ಮಕ್ಕಳು ಹಠ ಮಾಡುತ್ತಾರೆ. ಕೆಲವರು ಅತಿ ಹಠ ಮಾಡುತ್ತಾರೆ. 'ಮಗುವಿಗೆ ಬಾಡಿ ಇಮೇಜ್ ಕಾರಣವಾಗಿ ಅದು ಒಡೆದ ಬೊಂಬೆಯೊಡನೆ ಆಟವಾಡಲು ಬಯಸದು' ಎನ್ನುತ್ತಾರೆ ಮನೋವಿಜ್ಞಾನಿಯಾದ ಮಾರ್ವಿನ್ ಆಕ್. ಅಂಥ ಮಗು ಒಡೆದ ಬಿಸ್ಕತ್ ತಿನ್ನಲಾರೆನೆಂದು ಹಠ ಮಾಡುವುದರಲ್ಲಿ ತಪ್ಪೇನೂ ಇಲ್ಲ. ಇಡೀ ಬಿಸ್ಕತ್ ಒಡೆದೇ ತಿಂದರೂ, ಒಡೆದ ಬಳಿಕ ಪೂರ್ಣ ಬಿಸ್ಕತ್ ಕೊಟ್ಟರೂ ಅದು ಇಡಿಯಲ್ಲವೆಂಬ ಭಾವನೆ ಕೆಲವೊಮ್ಮೆ ದೊಡ್ಡವರಲ್ಲಿಯೂ ಇರುವುದಿದೆ. ಶಾಲಾ ದಿನಗಳಲ್ಲಂತೂ ಮಗುವನ್ನು ನಾನಾ ಸಂಗತಿಗಳು ಭಯ ಬೀಳಿಸಲು ಸಾಲುಗಟ್ಟುತ್ತವೆ.

ತಾನು ಹೊರುವ ಪುಸ್ತಕದ ಮೂಟೆ, ಗದರಿಸುವ ಉಪಾಧ್ಯಾಯರು, ಹೋಂವರ್ಕ್, ಮಾಸ್ತರ್‌ರ ಪ್ರಶ್ನೆಗೆ ಉತ್ತರಿಸಲಾಗದಿರುವಿಕೆ, ಅದಕ್ಕಾಗಿ ಬೆಂಚೇರಿ ನಿಲ್ಲಬೇಕಾಗಿರುವುದು, ಟೀಚರ್ ನನ್ನನ್ನು ಮನೆಗೆ ಕಳುಹಿಸಲಾರರೋ ಎಂಬಭಯ ಇತ್ಯಾದಿ ಇತ್ಯಾದಿ.

ಇಷ್ಟೇ ಅಲ್ಲದೆ ಇತರ ಹುಡುಗರೊಡನೆ ಹೋಲಿಸಿದಾಗ ತಾನು ಚಂದ ಇಲ್ಲವೋ ? ತುಂಬ ದಡ್ಡನೇ? ನಾನು ಮೂರ್ಖ ಇತ್ಯಾದಿ ಹೋಲಿಕೆಯ ಭಯಗಳೂ ಬರುವುದುಂಟು.

ಪರೀಕ್ಷೆಯಲ್ಲಿ ನಪಾಸಾದರೆ, ಮತ್ತೆ ಅದೇತರಗತಿಯಲ್ಲಿ ಕೂರಬೇಕಲ್ಲ, ಹಳೆಯ ಸ್ನೇಹಿತರನ್ನು ಕಳೆದುಕೊಳ್ಳಬೇಕಲ್ಲ, ಹೆತ್ತವರ ವರ್ಗಾವಣೆ ಕಾರಣವಾಗಿ ಹೊಸ ವಾತಾವರಣಕ್ಕೆ ಹೋಗ ಬೇಕಾದಿತೇನೋ, ಬೇರೆ ಶಾಲೆಗೆ ಹೋಗಬೇಕಲ್ಲ ಇತ್ಯಾದಿ ಭಯಗಳು.

## ಮಾತಿನ ಭಯ ಮುದ್ರೆಗಳು

ಪಕ್ಕದ ಮನೆಯ ತಾತ ಸತ್ತಾಗ ''ಅವರೇಕೆ ಸತ್ತರು?'' ಎಂದು ಮಗು ಕೇಳುತ್ತದೆ. ''ಜ್ವರದಿಂದ ಸತ್ತರು'' ಎನ್ನುತ್ತಾಳೆ ತಾಯಿ. ಕೆಲವೇ ದಿನಗಳಲ್ಲಿ ತಾಯಿ ಜ್ವರಕ್ಕಾಗಿ ಒಂದು ಮಾತ್ರೆ ತೆಗೆದು ಕೊಂಡರೂ, ನಮ್ಮ ತಾಯಿಯೂ ಜ್ವರದಿಂದ ಸಾಯುತ್ತಾಳೇನೋ? ಎಂದು ಮಗು ಭಯ ಬೀಳುತ್ತದೆ.

ಮಗು ಏನಾದರೂ ತಪ್ಪು ಮಾಡಿದರೆ ''ದೇವರು ಕಣ್ಣು ತೆಗೆಯುತ್ತಾನೆ'' ಎಂದು ಹಿರಿಯರು ಬೆದರಿಸುತ್ತಾರೆ. ಎಲ್ಲಿ ಕುರುಡರಾಗಿ ಹೋಗುತ್ತೇವೋ ? ಎಂದು ಮಗು ಭಯ ಬೀಳುತ್ತದೆ. ಗುಮ್ಮ ಬಂದ, ಪೊಲೀಸ್ ಬಂದ ಹಿಡಿದು ಕೊಡ್ತೀನಿ. ಇಂಥ ಹಿರಿಯರ ಬೆದರಿಕೆಗಳೂ ಮಗುವಿನ ಮೇಲೆ ಭಯದ ಮುದ್ರೆಯನ್ನು ಒತ್ತುತ್ತವೆ. ಸಮವಯಸ್ಸಿನವರು ತಮ್ಮ ವಯಸ್ಸಿನವರ ಬೆಂಬಲವನ್ನು ನಿರೀಕ್ಷಿಸುತ್ತಾರೆ. ಅದು ತಪ್ಪಿ ಹೋಗುವುದನ್ನು, ಕಳೆದು ಕೊಳ್ಳುವುದನ್ನು ಅವರು ಸಹಿಸುವುದಿಲ್ಲ. ತಾವು ಅವಮಾನಗೊಂಡುದಾಗಿ ಭಯಗೊಳ್ಳುತ್ತಾರೆ.

ತಿಳಿಯದ ಊರಿಗೆ ಹೋದಾಗ ತಪ್ಪಿಸಿಕೊಳ್ಳುತ್ತೇವೇನೋ ? ಎಂಬ ಭಯ. ತಂದೆ ತಾಯಿಯ ಜಗಳ ಜೋರಾದರೆ ಒಂದು ರೀತಿಯ ನಡುಕ. ಜಗಳದ ಶಬ್ದವೇ ಮಕ್ಕಳಲ್ಲಿ ಮಾನಸಿಕ ನಡುಕವನ್ನು ಉಂಟು ಮಾಡುತ್ತದೆ.

ಮಲಗಿದ ಮಗುವಿಗೆ ಕಿಟಕಿಯಿಂದ ಕಾಣುವ ಮರದ ನೆರಳು ದೆವ್ವಗಳಂತೆ ಕಾಣಿಸಬಹುದು. ''ಅದೇನಿಲ್ಲ, ಹೋಗಿ ಮಲಗು'' ಎಂದರೆ ಮಗುವು ಅದನ್ನು ಅನುಮಾನಿಸುತ್ತದೆ. 'ಇಂತಹ ಸಂದರ್ಭದಲ್ಲಿ ನೀನು ನೋಡುತ್ತಿರುವುದು ಮರದ ನೆರಳು. ಅದು ನಿನಗೇನೂ ಮಾಡದು'' ಎಂಬ ರೀತಿಯಲ್ಲಿ ದೊಡ್ಡವರು ಉತ್ತರ ಕೊಡಬೇಕು. ಆಗ ಮಗುವಿನಲ್ಲಿ ತನ್ನ ತಿಳಿವಳಿಕೆಯ ಬಗೆಗೆ ನಂಬಿಕೆ ಬಲಿಯುತ್ತದೆ.

## ತಿಳವಳಿಕೆಯ ಅಗತ್ಯ

'ವಯಸ್ಸಿಗೆ ತಕ್ಕಂತೆ ಗಂಭೀರವಾಗಿ ಇರು, ಲಕ್ಷಣ ವಾಗಿ ಇರು' ಇತ್ಯಾದಿ ಮಾತುಗಳೆಲ್ಲ ಮಕ್ಕಳಲ್ಲಿ ವಿಪರೀತ ನಡೆಯನ್ನೇ ಬಿತ್ತುತ್ತವೆ' ಎನ್ನುತ್ತಾರೆ ವೈದ್ಯ ಜಾಯ್ಸ್ ಸಿಂಡರ್.

೫ ರಿಂದ ೮ ವರ್ಷದ ಮಕ್ಕಳು ಯಾವಾಗಲೂ 'ಐ ಡೋಂಟ್ ಕೇರ್' ಶೈಲಿಯಲ್ಲಿ ಕೈ ಬೀಸುತ್ತ ಡೈಲಾಗ್ ಹೇಳುತ್ತವೆ. ತನ್ನ ಭಯವನ್ನು ತಾನೇ ದೂರಗೊಳಿಸುವ ಯುಕ್ತಿ ಇದು.

''ಏಯ್, ನಿನ್ನ ವಯಸ್ಸಿನಲ್ಲಿ ನಾನು ಕೂಡ

(೫೯ನೇ ಪುಟ ನೋಡಿ)

(ವೈದ್ಯಕೀಯ ಅನುಭವ)

# ಎರಡು ಗರ್ಭಕೋಶಗಳಿದ್ದರೆ ಹೇಗೆ?



● ಡಾ|| ಸಿ. ಅನ್ನಪೂರ್ಣಮ್ಮ

ಇದು ೧೯೭೭ನೇ ಇಸವಿಯಲ್ಲಿ ನಡೆದ ಘಟನೆ.

ಒಂದು ದಿನ ರಂಜಿತ ಎಂಬ ೩೬ ವರ್ಷದ ಚೊಚ್ಚಲ ಬಸುರಿ ನಮ್ಮ ಆಸ್ಪತ್ರೆಗೆ ಹೆರಿಗೆಗಾಗಿ ದಾಖಲಾದಳು. ಹತ್ತಿರದ ಹಳ್ಳಿಯಿಂದ ಬಂದಿದ್ದ ಆಕೆಗೆ, ಹೆರಿಗೆಯ ಕ್ಯಾಲೆಂಡರಿನ ಪ್ರಕಾರ ದಿನ ತುಂಬಲು ಇನ್ನು ೧೦ ದಿನಗಳು ಬಾಕಿಯಿದ್ದವು. ಆ ದಿನ ಡ್ಯೂಟಿಯಲ್ಲಿದ್ದ ಮಹಿಳಾ ವೈದ್ಯೆ ಪರೀಕ್ಷಿಸಿ, ಮಗುವಿನ ಹೃದಯದ ಬಡಿತ ಲಯ ಬದ್ಧವಾಗಿದೆ. ಆದರೆ ತಲೆ ಕೆಳಗಿಳಿದಿಲ್ಲ, ಗರ್ಭ ಕೋಶದ ಸಂಕುಚನ ಪದೇ ಪದೇ ಬರುತ್ತಿದೆ, ಯೋನಿ ಪರೀಕ್ಷೆಯಲ್ಲಿ ಏನೋ ಗಡ್ಡೆ ಇದ್ದಂತಿದೆ ಎಂದು ಚೀಟಿ ಬರೆದು ನನಗೆ ಕರೆ ಕಳಿಸಿದರು.

ನಾನು ಆಕೆಯನ್ನು ಪರೀಕ್ಷಿಸಿದಾಗ ಹಲವು ವಿಚಿತ್ರ, ಅಸಹಜ ಅಂಶಗಳು ವೇದ್ಯವಾದವು. ಉದರದ ಪರೀಕ್ಷೆಯಲ್ಲಿ ಗರ್ಭಕೋಶದ ಮೇಲ್ಭಾಗದ ಮಟ್ಟ ೩೬ ವಾರಗಳ ಮಟ್ಟಕ್ಕೆ ಏರಿದ್ದಿತಾದರೂ ಉದರದ ಎಡಪಕ್ಕಕ್ಕೆ ಸ್ವಲ್ಪ ಹೆಚ್ಚಾಗಿ ಸೆಟೆದುಕೊಂಡಿತ್ತು. ನೋವು ಬಂದಾಗಲೆಲ್ಲ, ಗರ್ಭಕೋಶ ಸ್ವಲ್ಪ ಸಿಲಿಂಡರಿನಂತೆ ನಿಲ್ಲುತ್ತಿತ್ತು. ಉದರದ ಬಲಭಾಗದ ಸ್ವಲ್ಪ ಖಾಲಿ ಎನಿಸುತ್ತಿತ್ತು. ಮಗುವಿನ ಕೈ, ಕಾಲುಗಳನ್ನು ಬೆರಳಿನ ಸ್ಪರ್ಶದಿಂದ ಗುರುತಿಸಬಹುದಾಗಿತ್ತು. ತಲೆ ಮಾತ್ರ ಶ್ರೋಣಿಯ ಅಂಚಿನ ಮೇಲ್ಭಾಗದಲ್ಲಿಯೇ ಇದ್ದಿತ್ತು. ತೀರಾ ದೊಡ್ಡಗಾತ್ರದ ಮಗುವಲ್ಲದಿದ್ದರೂ ತಲೆ ಶ್ರೋಣಿಯೊಳಕ್ಕೆ ಇಳಿಯದಿರಲು ಏನು ಕಾರಣ? ಎಂದು ಯೋಚಿಸುತ್ತಾ 'ಪಿ.ವಿ.' ಪರೀಕ್ಷೆ ನಡೆಸಿದೆ.

ಯೋನಿಯ ಹಿಂಭಾಗದ ಗೋಡೆಯ ಮೂಲಕ ಒಂದು ಸ್ವಲ್ಪ ಮೃದುವಾದ, ಗೋಲವಾದ ಗಡ್ಡೆಯ ಕೆಳಭಾಗ ಕೈಬೆರಳುಗಳಿಗೆ ವೇದ್ಯವಾಗುತ್ತಿತ್ತು. ಗರ್ಭ ಕೊರಳು ಸಹಜವಾಗಿ ಇರಬೇಕಾದ ಭಾಗದಲ್ಲಿರದೆ, ಅತಿಮೇಲೆ, ಈ ಗಡ್ಡೆಗೂ ಮೇಲೆ ಸಿಕ್ಕಿಹಾಕಿಕೊಂಡು ಒದ್ದಾಡುತ್ತಿತ್ತು. ಕಷ್ಟಪಟ್ಟು ತರ್ಜನಿ ಹಾಗೂ ನಡು ಬೆರಳುಗಳನ್ನು ಮೇಲೆ ತೂರಿದಾಗ ಸ್ಪರ್ಶಕ್ಕೆ ಎಟುಕಿಯೂ ಎಟುಕದಂತಿದ್ದ ಉಲ್ಬದ ಪೊರೆಯಿಲ್ಲದ ಶಿಶುವಿನ ತಲೆಭಾಗವಿರುವುದು ಅರಿವಿಗೆ ಬಂದಿತು.

ಒಂದು ವೇಳೆ ಈ ಗಡ್ಡೆ 'ಗಾರ್ಟನರ್ಸ್ ಡಕ್ಟ್ ಸಿಸ್ಟ್' ಅಥವಾ ಅಂಡಾಶಯದ ಸಿಸ್ಟ್ ಇರಬಹುದೇ? ಎಂಬ ಅನುಮಾನ ಕ್ಷಣಾರ್ಧದಲ್ಲಿ ನನ್ನ ಮನಸ್ಸಿನಲ್ಲಿ ಮಿಂಚಿ ಮಾಯವಾಯಿತು. ಇದು ಫೈಬ್ರಾಯಿಡ್ ಗಡ್ಡೆ; 'ಡಗ್ಲಾಸ್ ಪೌಚ್'ನಲ್ಲಿ ಬಿದ್ದು ಪ್ರಸವಕ್ಕೆ ತಡೆಯೊಡ್ಡುತ್ತಿದೆ. ಶಿಶುವಿನ ತಲೆ ಕೆಳಗಿಳಿಯಲು ಈ ಗಡ್ಡೆಯಿಂದಾಗಿ ಶ್ರೋಣಿಯಲ್ಲಿ ಜಾಗವೇ ಇಲ್ಲ. ಇನ್ನೂ ಹೆಚ್ಚು ಹೊತ್ತು ಕಾಯುವುದರಲ್ಲಿ ಅರ್ಥವಿಲ್ಲ ಎಂದುಕೊಂಡೆ. ಮೂವತ್ತಾರು ವರ್ಷದ ಮಹಿಳೆ ಮೊದಲ ಗರ್ಭದಲ್ಲಿ ತಲೆ ಶ್ರೋಣಿಗಿಳಿಯದೆ ಮೇಲೆಯೇ ಇರುವ ಪರಿಸ್ಥಿತಿ, ಉಲ್ಬದ ನೀರು ಮೊದಲೇ ಹೋಗಿದ್ದು, ಮಗುವಿನ ಸುತ್ತ ಒಣ ಪರಿಸರ, ಹಲವು ಗಂಟೆಗಳ ಪ್ರಸವ ನೋವಿನಿಂದಲೂ ಪ್ರಗತಿಯಾಗದಿರುವ ಪ್ರಸಂಗ,

ಇವೆಲ್ಲ Obstructed Labour ಲಕ್ಷಣ

## ಎರಡು ಗರ್ಭಕೋಶಗಳು



ಈಗ ನಾವು ಸ್ತ್ರೀ ಶರೀರದಲ್ಲಿ ಕಾಯುವ ...ೋಶವೆಂಬುದು ಭ್ರೂಣಾವಸ್ಥೆಯ ೮ನೇ ವಾರದಲ್ಲಿ 'ಮ್ಯುಲೇರಿಯನ್ ಡಕ್ಟ್' ಎಂಬ ಹೆಸರಿನ ಸ್ನಾಯುವಿನ ನಾಳದ ರೂಪದಲ್ಲಿ ಪ್ರಕಟಗೊಳ್ಳುತ್ತದೆ. ಇವು ಎರಡೂ ಕಡೆ ಉದರದೊಳಗಡೆ, ಹಿಂದುಗಡೆ ಅಂಡಾಶಯದ ಮೂಲ ರೂಪವಾದ ಗೊನಡ್‌ಗಳ ಬದಿಯಿಂದ ಆರಂಭವಾಗಿ ಕೆಳಕ್ಕೆ ಹೋಗಿ ಸೇರುತ್ತವೆ. ಹೀಗೆ ಎರಡೂ ಸೇರಿ ಒಂದೇ ಕೊಳವೆಯಾಗುತ್ತದೆ (ಚಿತ್ರ ನೋಡಿ) ಹೀಗೆ ಕೆಳಗಡೆ ಸೇರಿರುವ ಈ ಭಾಗವೇ ಗರ್ಭಕೋಶ ಮತ್ತು ಯೋನಿಯಾಗಿ ರೂಪುಗೊಳ್ಳುತ್ತದೆ. ಇದು ಸಹಜ ರೀತಿ.

ಎಷ್ಟೋ ಬಾರಿ ಗರ್ಭಿಣಿ ಪೌಷ್ಟಿಕ ಆಹಾರ ಸೇವಿಸದಿದ್ದಲ್ಲಿ ಅಥವಾ ಔಷಧಿಯ ದುಷ್ಪರಿಣಾಮ, ಧೂಮಪಾನ ಮುಂತಾದ ದುಶ್ಚಟಗಳು ಅಥವಾ ಗುಣವಾಹಿಗಳು, ವರ್ಣತಂತುಗಳ







ಅಸಂಬದ್ಧ ಜೋಡಣೆ, ಮತ್ಯಾವುದೋ ಕಾಣದ ಶಕ್ತಿಯ ಕೈವಾಡದಿಂದ ಈ 'ಮ್ಯುಲೇರಿಯನ್ ನಾಳ ಗಳು' ಒಂದರೊಡನೊಂದು ಬೆಸೆದುಕೊಳ್ಳುವ ಕಾರ್ಯ ಕರಾರುವಾಕ್ಕಾಗಿರುವುದಿಲ್ಲ. ಹೀಗಾದಾಗ ಹಲವು ಬಗೆಯ ವಿಕೃತ ಗರ್ಭಕೋಶಗಳು ವಿಕಾಸವಾಗುತ್ತವೆ.

ಈ ನಾಳಗಳು ಪೂರ್ತಿಯಾಗಿ ಬೆಸೆದುಕೊಳ್ಳದೆ ಹಾಗೆಯೇ ಉಳಿದುಕೊಂಡಾಗ ಒಂದರ ಪಕ್ಕದಲ್ಲಿ ಮತ್ತೊಂದು ಗರ್ಭಕೋಶಗಳು ರೂಪುಗೊಳ್ಳುತ್ತವೆ. ಇದು **Uterus didelphis** ಹೀಗೆ ಕ್ರಿಯಾಶೀಲವಾದ ಎರಡು ಗರ್ಭಕೋಶಗಳು ಅಪರೂಪಗಳಲ್ಲಿ ಅಪರೂಪ. ಸಾಮಾನ್ಯವಾಗಿ ಒಂದು ಮಾತ್ರ ಸಹಜಗಾತ್ರ ಹೊಂದಿದ್ದು, ಕ್ರಿಯಾಶೀಲವಾಗಿದ್ದು, ಮತ್ತೊಂದು ಕೇವಲ ಮೂಲರೂಪದಲ್ಲಿದ್ದು ಚಿಕ್ಕಗಾತ್ರದಲ್ಲಿದ್ದು ನಿಷ್ಕ್ರಿಯವಾಗಿರುತ್ತದೆ. ಇಂತಹ ಸಂದರ್ಭಗಳಲ್ಲೆಲ್ಲ ಹಲವು ವಿಧದ ತೊಂದರೆಗಳು ಕಾಡುತ್ತವೆ.

## ಎರಡು ಗರ್ಭಕೋಶಗಳಿದ್ದರೆ ಹೇಗೆ?

ನಮ್ಮ ಶರೀರದಲ್ಲಿ ಕಣ್ಣು, ಕಿವಿಗಳಂತಹ ಜ್ಞಾನೇಂದ್ರಿಯಗಳು ಮತ್ತು ಕಿಡ್ನಿ, ಶ್ವಾಸಕೋಶಗಳಂತಹ ಜೀವಾಧಾರ ಅವಯವಗಳು ಜೋಡಿಯಲ್ಲಿಲ್ಲವೆ? ಸ್ತ್ರೀಯರ ಸಂತಾನೋತ್ಪತ್ತಿ ಅವಯವಗಳ ಸಮೂಹದಲ್ಲಿ ಅಂಡಾಶಯಗಳು, ಗರ್ಭನಾಳಗಳು ಸಂಖ್ಯೆಯಲ್ಲಿ ಎರಡಿದ್ದು, ಗರ್ಭಕೋಶ ಮಾತ್ರವೇ ಒಂದೇ ಒಂದು ಇರುತ್ತದೆ. ಜೋಡಿ ಅವಯವಗಳು ನಿರ್ದಿಷ್ಟ ಕೆಲಸವನ್ನು ತಮ್ಮಲ್ಲಿ ಹಂಚಿಕೊಂಡು, ಒಂದು ಮತ್ತೊಂದರೊಡನೆ ಸಹಕರಿಸಿ ಕೆಲಸ ಮಾಡುತ್ತವೆ. ಯಾವುದೇ ಒಂದು ಅವಯವ ಘಾಸಿಗೊಂಡಾಗ ನಿಷ್ಕ್ರಿಯವಾದಾಗ, ಶಸ್ತ್ರಕ್ರಿಯೆಯಿಂದ ತೆಗೆದು ಹಾಕಲ್ಪಟ್ಟಾಗ, ಮತ್ತೊಂದು ಅವಯವ ಆ ಕಾರ್ಯ ತಾನೇ ನಿರ್ವಹಿಸುತ್ತದೆ.

"ಹಾಗೆಯೇ ಗರ್ಭಕೋಶ ಒಂದಿರುವುದಕ್ಕೆ ಬದಲಾಗಿ ಎರಡಿದ್ದರೆ ಕಷ್ಟವೇನು? ಸಂತಾನೋತ್ಪತ್ತಿ ನಿರ್ವಿಘ್ನವಾಗಿರುವುದಿಲ್ಲವೆ? ಸಂತಾನಹೀನರಿಗೆ ಏನಾದರೂ ಆಶಾದಾಯಕವೆನಿಸುವ ಪ್ರಸಂಗ ವಿದೆಯೇ?" ಹೀಗೆಲ್ಲ ಮನಸ್ಸು ಲಂಗು ಲಗಾಮಿಲ್ಲದೆ ಹುಚ್ಚು ಕುದುರೆಯಂತೆ ಹಲವಾರು ದಿಕ್ಕಿನಲ್ಲಿ ಹರಿದು ಅಸಂಗತ ಪ್ರಶ್ನೆಗಳನ್ನು ಎಬ್ಬಿಸಬಹುದು. ಆದರೆ ಇವುಗಳಿಗೆಲ್ಲ ಒಂದೇ ಒಂದು ಸ್ಪಷ್ಟ ಉತ್ತರ - ಒಬ್ಬ ಮಹಿಳೆಗೆ ಒಂದೇ ಗರ್ಭಕೋಶ. ಆಗಲೆ ಸುಗಮ ಸಂತಾನೋತ್ಪತ್ತಿ ಮತ್ತು ಉತ್ತಮ ಆರೋಗ್ಯ. ಎರಡು ಗರ್ಭಕೋಶಗಳಿರುವುದು, ಒಂದು ವೈಕಲ್ಯ, ಇನ್ನೊಂದು ದೌರ್ಭಾಗ್ಯ. ಪ್ರಕೃತಿಯಾಡಿದ ಪಗಡೆ ಯಾಟದಲ್ಲಿ ದುರದೃಷ್ಟಗರ ಬಿದ್ದು ಇಂತಹ ಅಸಂಬದ್ಧತೆ ಏರ್ಪಡಬಹುದು. ಇಂತಹ ಒಂದು ವ್ಯತ್ಯಾಸ ದಿಂದ ಸ್ತ್ರೀಯರು ಹಲವಾರು ದೈಹಿಕ ತೊಂದರೆಗಳಿಗೆ ಗುರಿಯಾಗಬಹುದು.

### ಎರಡು ಗರ್ಭಕೋಶಗಳಿರುವುದರಿಂದ ಎದುರಾಗುವ ತೊಂದರೆಗಳು

ಎರಡು ಗರ್ಭಕೋಶಗಳಿರುವುದೆಂದರೆ, ಶಿಶು ಭ್ರೂಣಾವಸ್ಥೆಯಲ್ಲಿ, ತಾಯಿಯ ಬಸುರಿನಲ್ಲಿದ್ದಾಗಲೇ ಸಂತಾನ ವ್ಯವಸ್ಥೆಯ ವಿಕಾಸದಲ್ಲಿ ಆಗಿರುವ ಒಂದು ಅಭಾಸ ಎಂದು ತಿಳಿಯಿರಿ. ಇಂತಹ ಪ್ರಸಂಗ ಗಳಲ್ಲೆಲ್ಲ ಮಹಿಳೆ ಒಂದಲ್ಲ ಒಂದು ಸಮಸ್ಯೆಗೆ ಗುರಿ ಯಾಗುತ್ತಾಳೆ. ಋತುಚಕ್ರದ ಸಮಸ್ಯೆ, ಪ್ರತಿತಿಂಗಳ ಋತುಸ್ರಾವದಲ್ಲಿ ಅಧಿಕವಾದ ರಕ್ತಸ್ರಾವ ; ಸುಮಾರು ೭-೮ ದಿನಗಳವರೆಗೆ ರಕ್ತನಷ್ಟವಾಗಬಹುದು. ಈ ದಿನಗಳಲ್ಲಿ ತೀವ್ರ ಕಿಬ್ಬೊಟ್ಟೆ ನೋವು, ಋತು ಶೂಲೆ, ಬಿಟ್ಟು ಬಿಟ್ಟು ಬರುವ ನೋವು, ಜೊತೆಗೆ ಮೈಥುನ ವೇಳೆಯಲ್ಲಿ ಯೋನಿಯ ಆಳದಲ್ಲಿ ಯಾತನೆ (Dysparunia), ಗರ್ಭಧಾರಣೆಯಲ್ಲಿ ವಿಳಂಬ, ಬಂಜೆತನ ಮತ್ತು ಎಡೆಗೆಟ್ಟ ಗರ್ಭ ಇಂತಹ ಹಲವಾರು ತೊಂದರೆಗಳಿಗೆ ಮಹಿಳೆ ಒಳಗಾಗುತ್ತಾಳೆ.

ಬಸುರಿನ ಪರ್ವದಲ್ಲಿ ಅಪಾಯ ಕಟ್ಟಿಟ್ಟ ಬುತ್ತಿ. ಅಬಾರ್ಷನ್ ಒಂದು ಸಾಧಾರಣ ಸಮಸ್ಯೆ. ದ್ವಿತೀಯ ತ್ರೈಮಾಸಿಕದಲ್ಲಿ ಇಂತಹ ಘಟನೆಗಳು ಹೆಚ್ಚು. ಅಕಾಲ ಪ್ರಸವ, ಅಪಕ್ವ ಶಿಶು ಜನನವೂ ಇದರಲ್ಲಿ ಹೆಚ್ಚು. ಗರ್ಭಕೋಶದಲ್ಲಿ ಶಿಶುವಿನ ಶೀರ್ಷಾಸನದ ಸಹಜ ಭಂಗಿ ಅಪರೂಪ. ಅದು ಉಪವಿಶ್ವಾಸನದಲ್ಲಿರಬಹುದು, ಅಡ್ಡಡ್ಡಲಾಗಿ ಮಲಗಿರಬಹುದು, ಹೆರಿಗೆ ಸಮಯದಲ್ಲಿ ಕೈ ಅಥವಾ ಕಾಲು, ಹೊಕ್ಕಳ ಬಳ್ಳಿ ಮುಂತಾದವುಗಳು ಮೊದಲು ಹೊರಗೆ ಬಂದು ಶಿಶುವಿಗೆ ಹಾಗೂ ತಾಯಿಗೆ ಪ್ರಾಣಾಪಾಯ ಒಡ್ಡಬಹುದು. ಹೆರಿಗೆಯ ನೋವು ಲಯಬದ್ಧವಾಗಿಲ್ಲದೆ, ಗರ್ಭ ಕೋಶದ ಕೆಳ ಹಾಗೂ ಮೇಲ್ಭಾಗಗಳ ಸ್ನಾಯುಗಳಲ್ಲಿ ಅಸಹಕಾರ ಏರ್ಪಟ್ಟು ಪರಿಣಾಮಕಾರಿ ಒತ್ತಡವಿಲ್ಲದೆ, ಹೆರಿಗೆ ದೀರ್ಘಕಾಲ ತೆಗೆದುಕೊಳ್ಳಬಹುದು. ಗರ್ಭ ಕೋಶ ಹರಿದುಹೋಗುವ ದುರ್ಘಟನೆಗಳೂ ಇವೆ. ತಾಯಿ ಮಾಸು ಹೊರಗೆ ಬರದೇ ಹೋಗುವಿಕೆ, ತೀವ್ರ ರಕ್ತಸ್ರಾವ, ಅನೀಮಿಯಾ, ಸೋಂಕು ಇತ್ಯಾದಿ ಇತ್ಯಾದಿ ಸಮಸ್ಯೆಗಳ ಸರಮಾಲೆಗಳೇ ಹಿಂಬಾಲಿಸುತ್ತವೆ.

ಗಳೆಂದು ಮನವರಿಕೆ ಮಾಡಿಕೊಂಡು ಸಿಸೇರಿಯನ್ ಶಸ್ತ್ರಕ್ರಿಯೆ ಪ್ರಯೋಗ ಮಾಡಿ ಮಗು ಹೊರತೆಗೆಯಲು ನಿರ್ಧರಿಸಿದೆ.

ಎಂದಿನ ರೀತಿಯಲ್ಲಿ ಉದರವನ್ನು ಹೊಕ್ಕಳ ಕೆಳಗಡೆ ಶುರುಮಾಡಿ ಗುಂಜೆಲು ಎಲುಬಿನವರೆಗೆ ಸೀಳಿ ಉದರದ ಗೋಡೆಯ ಅಂಚುಗಳನ್ನೆಲ್ಲ ಬಗಲು ಮಾಡಿದಾಗ ನಾನು ನಿರೀಕ್ಷಿಸಿದಂತೆ ಗರ್ಭಕೋಶದಲ್ಲಿ ಉಬ್ಬು - ತಗ್ಗು ಮತ್ತು ಡೊಂಕು ಹಳ್ಳಗಳನ್ನು ಹೊಂದಿರುವ ಗಡ್ಡೆಗಳಾವುವೂ ಗರ್ಭಕೋಶದ ಹೊರಗಡೆ ಕಾಣಬರಲಿಲ್ಲ. ಗರ್ಭಕೋಶ ಸ್ವಲ್ಪ ಲಂಬವಾಗಿದ್ದು, ಅದರ ಬಲಪಾರ್ಶ್ವ ಬೋಳಾಗಿದ್ದು, ಬೂದುಗುಂಬಳ ಕಾಯಿಯ ಆಕಾರ ನೆನಪಿಸುತ್ತಿತ್ತು. ಗರ್ಭಕೋಶದ ಬಲಪಾರ್ಶ್ವದಿಂದ ಮತ್ತು ಕೆಳಗಡೆಯಿಂದ, ದಪ್ಪಗಾದ ಶಿರೆಗಳು ಅಡ್ಡಲಾಗಿ ಗರ್ಭಕೋಶದ ಮೇಲೆ ಹಾದು ಹೋಗುತ್ತಾ ಅನೇಕ ಕವಲುಗಳಾಗಿ ಒಡೆದು, ಅದರ ಮಧ್ಯಭಾಗಕ್ಕೆ ಹೋಗುತ್ತಿದ್ದವು. ಗರ್ಭಕೋಶದ ಕೆಳಭಾಗದ ಬಲಗಡೆ ಸ್ವಲ್ಪ ತಿರುಚಿಕೊಂಡು ಹಿಂದಕ್ಕೆಳೆಯಲ್ಪಟ್ಟಿತ್ತು. ಆ ಭಾಗ ಹೆಚ್ಚು ರಕ್ತಯುಕ್ತವಾಗಿ ಕಡು ಕೆಂಪು ಬಣ್ಣಕ್ಕೆ ತಿರುಗಿತ್ತು. ಗರ್ಭಕೋಶದ ಎಡಭಾಗದ ಪಾರ್ಶ್ವದಲ್ಲಿ ಗರ್ಭನಾಳ, ಅಗಲ ತಂತುಕಟ್ಟು, ದುಂಡುಕಟ್ಟು ಇವೆಲ್ಲ ಸಹಜವಾಗಿರುವಂತೆ ಇದ್ದರೂ, ಬಲ ಪಾರ್ಶ್ವದಲ್ಲಿ ಇವಾವುವೂ ಇಲ್ಲದಿರುವುದು ಸೋಜಿಗವೆನಿಸಿತು.

ನನಗೆ ಈಗ ರೋಗದ ಡಯಾಗ್ನೋಸಿಸ್‌ಗಿಂತ ಗರ್ಭಕೋಶದೊಳಗಡೆ ಬಂಧನದಲ್ಲಿದ್ದ ಮಗುವನ್ನು ಬಿಡುಗಡೆ ಮಾಡಿ ಹೊರ ಪ್ರಪಂಚದ ನಿಸರ್ಗದತ್ತ ಪ್ರಾಣವಾಯುವಿನ ಪರಿಸರಕೊಡುವುದು ಹಾಗೂ ಅದಕ್ಕೆ ಬೇಕಾದ ಉಪಚಾರಗಳತ್ತ ಗಮನ ಹರಿಸುವುದು ಮುಖ್ಯವಾಗಿದ್ದಿತು. L.S.C.S. ಕ್ರಮದಲ್ಲಿ ಗರ್ಭಕೋಶದಲ್ಲಿ ಸೀಳಿ, ಮಗುವನ್ನು ಹೊರತೆಗೆದು ದಾದಿಯರಿಗೊಪ್ಪಿಸಿ ಅದು ಅಳುವುದನ್ನು ಖಚಿತ ಪಡಿಸಿಕೊಂಡೆ. ಅನಂತರ, ತಾಯಿಮಾಸು, ಹೆಪ್ಪುಗಟ್ಟಿದ ರಕ್ತದ ತುಣುಕು ಇವುಗಳನ್ನೆಲ್ಲ ಗರ್ಭಕೋಶ ದಿಂದ ತೆಗೆದು, ಮೆಕೆರ್ಜಿನ್ ಇಂಜೆಕ್ಷನ್ ತಾಯಿಗೆ ಕೊಡಿಸಿದ ತಕ್ಷಣವೇ ಗರ್ಭಕೋಶ ಗಾತ್ರದಲ್ಲಿ ಕುಸಿದ ನಂತರ ಈಗ ಗಡ್ಡೆಯನ್ನು ಹುಡುಕಲು ಆರಂಭಿಸಿದೆ. ಗರ್ಭಕೋಶವನ್ನು ಮುಂದಕ್ಕೆ ಎಳೆದು, ಬಲಗೈ ಬೆರಳು ಗಳನ್ನು ಡಗ್ಲಾಸ್ ಪೌಚಿಗೆ ತೂರಿಸಲು ಪ್ರಯತ್ನಪಟ್ಟೆ. ಅಲ್ಲಿ ಬಹಳ ಇರುಕ್ಕವಾಗಿ ಸಂಘಟನೆಯಾಗಿದ್ದ ನುಣುಪಾದ ಮೇಲ್ಮೈಯ ಗಡ್ಡೆ ಕಾಣಬಂದಿತು. 'ಆಲಿಸ್' ಇಕ್ಕಳದ ಸಹಾಯದಿಂದಲೂ ಹಾಗೂ ಕೈ ಬೆರಳುಗಳ ನಾಜೂಕಾದ ಮತ್ತು ಜಾಣತನದ ಎಳೆತದಿಂದಲೂ ಶ್ರೋಣಿಯಲ್ಲಿ ಬಹುಶಃ ಸ್ವಲ್ಪ ಕಾಲದಿಂದಲೂ ಭದ್ರವಾಗಿ ತಳವೂರಿದ್ದ ಗಡ್ಡೆಯನ್ನು ಸ್ವಲ್ಪ ಸ್ವಲ್ಪವಾಗಿ ಮೇಲಕ್ಕೆತ್ತಿದಾಗ ಒಂದು ಮೂಸಂಬಿ ಗಾತ್ರದ ಗಡ್ಡೆ ಅದಾಗಿತ್ತೆಂದು ತಿಳಿಯಿತು. ಇದರ ಕೆಳಭಾಗ, ಅದೇ ತಾನೆ ಶಸ್ತ್ರಕ್ರಿಯೆ ನಡೆಸಿದ ಗರ್ಭಕೋಶದ ಕೆಳಭಾಗಕ್ಕೆ ಬೆಸೆದು ಕೊಂಡಿದ್ದಿತ್ತು. ಅದರ ಮೇಲ್ಭಾಗ ಮುಕ್ತವಾಗಿದ್ದು, ಸರಿಯಾಗಿ ಅಲ್ಲಿ ಇರಿಸಿದಾಗ ಗರ್ಭಕೋಶದ ಬಲ ಪಾರ್ಶ್ವಕ್ಕೆ ಬಂದು ಹರಡಿಕೊಂಡಿತು. ಈ ಗಡ್ಡೆ ಅಂಟಿಕೊಂಡಂತೆ ಬಲಭಾಗದಿಂದ ಗರ್ಭನಾಳ, ದುಂಡು ತಂತು ಕಟ್ಟು ಮತ್ತು ಅಗಲ ತಂತುಕಟ್ಟು ಎಲ್ಲವೂ ಕಾಣಬಂದವು. ಈಗ ಇದು ಗಡ್ಡೆ ಅಲ್ಲ ಇದು

ಮತ್ತೊಂದು ಗರ್ಭಕೋಶ ಎಂದು ತಿಳಿದಾಗ ಪುಳಕಗೊಂಡೆ. ಇಂತಹ ಅಪರೂಪದ ಪ್ರಕರಣ ನೋಡುವ ಹಾಗೂ ಅಂತಹ ರೋಗಿಗೆ ಶಸ್ತ್ರಕ್ರಿಯೆ ಮಾಡಿ ಉಳಿಸುವ ಭಾಗ್ಯ ನನ್ನದಾಗಿದ್ದುದು. ಆ ದಿವಸ ನನಗೆ ಧನ್ಯತೆ ತಂದು ಕೊಟ್ಟಿದ್ದಿತು. ನಾನು ಸ್ತ್ರೀರೋಗ ಪ್ರಸೂತಿಯಲ್ಲಿ ವಿಶೇಷ ಅಧ್ಯಯನ ನಡೆಸಿದ್ದು ಸಾರ್ಥಕ ಎಂದೆನಿಸಿತು.

ಇಲ್ಲಿ ಎರಡನೆ ಗರ್ಭಕೋಶ, ಮೂಲಸ್ಥಿತಿಯಲ್ಲೇ ಇದ್ದು ನಿಷ್ಕ್ರಿಯವಾಗಿದ್ದರೂ, ಗರ್ಭಾವಸ್ಥೆಯಲ್ಲಿ ಹಾರ್ಮೋನುಗಳ ಪ್ರಭಾವದಿಂದ ದಪ್ಪಗಾಗಿ ತಿರುಚಿ ಕೊಂಡು, ಶ್ರೋಣಿಯಲ್ಲಿ ಕೀಲು ಳಿಯಲ್ಲಿ ಬಿದ್ದು ಪ್ರಸವವನ್ನು ತಡೆಹಿಡಿದಿತ್ತು.

ಇದೆಲ್ಲ ನನ್ನ ಅನುಭವ ಕುರಿತಂತೆ,

ಗರ್ಭಕೋಶವೆರಡಿದ್ದಾಗ ಉಂಟಾಗಬಹುದಾದ ತೊಂದರೆಗಳಿಗೆ ಉದಾಹರಣೆ ತಿಳಿದಿರಲ್ಲವೆ? ಕೊನೆಗೆ ರಂಜಿತ ಅವಳ ಮಗು ಕುರಿತು ತಿಳಿಯಬೇಕು ಅಲ್ಲವೇ? ರಂಜಿತಳ ಪ್ರಸವೋತ್ತರ ಶಸ್ತ್ರಕ್ರಿಯೆಯ ನಂತರದ ದಿನಗಳು ಅಹಿತಕರ ಘಟನೆಯೇನೂ ಇಲ್ಲದೆ ಆರೋಗ್ಯದಿಂದ ಕೂಡಿತ್ತು. ರಂಜಿತ ತನ್ನ ಮುದ್ದಿನ ಮಗು ಸಮೇತ ಆಸ್ಪತ್ರೆಯಿಂದ ೧೦ನೇ ದಿನ ಸಂಪೂರ್ಣ ಆರೋಗ್ಯಸ್ಥಿತಿಯಲ್ಲಿ ತನ್ನ ಹಳ್ಳಿಗೆ ಹಿಂತಿರುಗಿದಳು. ಸಂಶೋಧನೆ ಮತ್ತಷ್ಟು ನಡೆಸಲು ನಾನು ಆಕೆಯನ್ನು ೬ ವಾರಗಳ ನಂತರ ಬರಹೇಳಿದ್ದರೂ ಆಕೆ ಮರಳಲಿಲ್ಲ. ಆಕೆಗೆ ಹಿಸ್ಟಿರೋ ಸಾಲ್ಪಿಂಗೋಗ್ರಾಮ್ ಮುಖ್ಯವಾಗಿ ಮಾಡಿಸಬೇಕಿತ್ತು. ಆದರೆ ಆಕೆ ಚೆಕ್ ಆಪ್‌ಗೆ ಬರಲಿಲ್ಲ.

ಈ ಪ್ರಕರಣವನ್ನು ನಮ್ಮ ಇಲಾಖೆಯ ಮೀಟಿಂಗ್‌ನಲ್ಲಿ ಪ್ರಸ್ತಾಪ ಮಾಡಿದಾಗ ಪ್ರಸೂತಿ ತಜ್ಞರಲ್ಲಿ ಬಹಳ ರಸವತ್ತಾದ ಚರ್ಚೆಗೆ ಅವಕಾಶ ಕೊಟ್ಟಿತು.

ಈ ಚರ್ಚೆಯಲ್ಲಿ ತಜ್ಞರು ಹೀಗೆ ಎರಡು ಗರ್ಭ ಕೋಶಗಳಿದ್ದ ಪ್ರಸಂಗದ ತಮ್ಮ ತಮ್ಮ ಅನುಭವಗಳನ್ನು ಹಂಚಿಕೊಂಡರು. ಅದರಲ್ಲಿ ಡಾ. ಶಾರದಮ್ಮ ತಮ್ಮ ಒಂದು ಕೇಸಿನಲ್ಲಿ ಒಂದು ಗರ್ಭಕೋಶದಲ್ಲಿ ಮಗು ವಿದ್ದು, ಮತ್ತೊಂದು ಗರ್ಭಕೋಶದಲ್ಲಿ ತಾಯಿ ಮಾಸು ಇದ್ದುದನ್ನು ಬಣ್ಣಿಸಿದರು. ಅಬಾರ್ಶನ್ ಪ್ರಸಂಗದಲ್ಲಿ ಇಂತಹ ಸಮಸ್ಯೆ ಎದುರಿಸಿ ತಾಯಿ ಮಾಸು ಹೊರಬರದಿದ್ದಾಗ ತಮಗಾದ ದಿಗ್ಭ್ರಾಂತಿ ಯನ್ನು ಬಣ್ಣಿಸಿದರೆ, ಮತ್ತೊಬ್ಬ ತಜ್ಞೆ ಲಲಿತಮ್ಮ ತಾವು ಎರಡೂವರೆ ತಿಂಗಳ ಗರ್ಭವನ್ನು ಖಿ. ಮಾಡ ಹೊರಟಾಗ ತಮಗಾದ ಅನುಭವದ ಸೋಜಿಗ ತಿಳಿಸಿದರು. ''ಗರ್ಭ ಬೇರೂರಿದ್ದು ಒಂದು ಗರ್ಭಕೋಶದಲ್ಲಿ, ತಾವು ಗರ್ಭಕೋಶ ಬರಿದು ಮಾಡಹೊರಟಿದ್ದು ಮತ್ತೊಂದು ಗರ್ಭಕೋಶದಲ್ಲಿ.'' ತಜ್ಞೆ ನಳಿನಿ ವಿವರಿಸಿದ ಅನುಭವ ಬೇರೆಯೇ ಆಗಿದ್ದಿತು. ಅಡ್ಡಡ್ಡಲಾಗಿ ಗರ್ಭಕೋಶದಲ್ಲಿ ಮಲಗಿದ ಮಗುವನ್ನು ಸಿಸೇ ರಿಯನ್ ಮಾಡಿ ಹೊರ ತೆಗೆಯಬೇಕಾದರೆ ತಾವು ಪಟ್ಟ ಕಷ್ಟ ವಿವರಿಸಿದರು. ಧ್ರೂಜಿಕ್ಕಿ ಘಕ್ಕಿ ಇೂಕ್ಕಿ ಸ್ಥಿತಿ ಯಿದ್ದ ಪ್ರಕರಣವದು. ಮಗುವಿನ ತಲೆ ಒಂದು ಗರ್ಭ ಕೋಶದಲ್ಲಿ, ಕಾಲುಗಳು ಮತ್ತೊಂದು ಗರ್ಭ ಕೋಶದಲ್ಲಿ, ಸಿಸೇರಿಯನ್ ಶಸ್ತ್ರಕ್ರಿಯೆಗಾಗಿ ಸೀಳಿದ ಗರ್ಭ ಕೋಶದ ಭಾಗದಿಂದ ಮಗುವನ್ನು ಹೊರತೆಗೆಯಲು ತಮ್ಮ ಕಲಿತ ಎಲ್ಲ ವಿದ್ಯೆಯ ಪ್ರಯೋಗ ಮಾಡ ಬೇಕಾದುದನ್ನು ಸ್ವಾರಸ್ಯವಾಗಿ ವರ್ಣಿಸಿ ಕೊನೆಗೆ ತಾವು ಹೇಗೆ ಯಶಸ್ವಿಯಾದರೆಂಬುದನ್ನು ವಿವರಿಸಿದರು. ಆ ದಿನದ ಮೀಟಿಂಗ್ ಒಂದು ನನಗೆ ರಸದೌತಣ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಅಂತೂ ನನ್ನ ಈ ವಿಸ್ಮಯಕಾರಿ ಅನುಭವ ಇಂದಿಗೂ ನನ್ನಲ್ಲಿ ಸಾಹಸದ, ಧೈರ್ಯ, ಸ್ಥೈರ್ಯ ಮತ್ತು ಸಮಯಪ್ರಜ್ಞೆಯ, ವೈದ್ಯಕೀಯ ಸಾಧನೆಯಲ್ಲಿ ಅಪಾರ ಹೆಮ್ಮೆಯನ್ನು ಮೂಡಿಸುತ್ತಿದೆ. ಈ ಅನುಭವ ಇಂದಿಗೂ ನನ್ನ ಮನಸ್ಸಿನಲ್ಲಿ ಹಚ್ಚ ಹಸಿರಾಗಿ ಉಳಿದಿದೆ. ●

(೫೬ನೇ ಪುಟದಿಂದ)

## ಮಗು ಭಯ ಬೀಳುವುದೇಕೆ?

ಭಯ ಬಿದ್ದಿದ್ದೆ'' ಆದರಲ್ಲೇನೂ ತಪ್ಪಿಲ್ಲ ಎನ್ನುವಂಥ ಹಿರಿಯರ ಮಾತು ಮಕ್ಕಳಲ್ಲಿ ಧೈರ್ಯ ಮತ್ತು ನಂಬಿಕೆಯನ್ನು ಹೆಚ್ಚಿಸುತ್ತದೆ. ಭಯ ಸ್ವಲ್ಪ ಸ್ವಲ್ಪವಾಗಿ ಹೋಗಿ ಬಿಡುತ್ತದೆ. ಆದಕ್ಕಾಗಿ ನಾಚಿಕೊಳ್ಳಬೇಕಾಗಿಲ್ಲ ಎಂಬುದನ್ನು ಮಗು ತಿಳಿದುಕೊಳ್ಳಲು ಹಿರಿಯರ ಸಕಾರಣ ನುಡಿ ಸಹಾಯಕವಾಗಿರುತ್ತದೆ.

ಆರು ವರ್ಷದ ಒಂದು ಮಗುವಿಗೆ ಜೇನುಗಳೆಂದರೆ ಭಯ. ''ನೀನು ಜೇನುತುಪ್ಪ ತಿನ್ನುತ್ತಿ. ಅದನ್ನು ಕೊಡು ವುದು ಈ ನೊಣಗಳೇ. ಜೇನುನೊಣಗಳಿಂದಾಗಿಯೇ ಹೂಗಳು ಫಲಗಳಾಗುತ್ತವೆ, ಕಾಡ ಮರಗಳು ಚೆನ್ನಾಗಿ ಬೆಳೆಯುತ್ತವೆ. ಈ ನೊಣ ಕಷ್ಟ ಪಟ್ಟು ದುಡಿಯುತ್ತದೆ. ನೀನೂ ಅದರಂತೆ ಚುರುಕಾಗಿ ರಬೇಕು ಎಂದು ತಾಯಿಯು ಮಗುವಿಗೆ ಸ್ವಲ್ಪ ವಿವರವಾಗಿ ಹೇಳಿದರೆ ಮಗುವಿನ ಭಯವೂ ಹೋಗು ತ್ತದೆ, ಮಗುವಿಗೆ ಒಳ್ಳೆಯ ವಿಷಯ ತಿಳಿದಂತೆಯೂ ಆಗುತ್ತದೆ.

ಮಕ್ಕಳಿಗೆ ಅದು ಅಷ್ಟಾಗಿ ಅರ್ಥವಾಗದಿದ್ದರೂ ಅಂಥ ಉತ್ತರಗಳಿಂದ ಮಗುವು ಬಲವಾದ ನಂಬಿಕೆಗಳನ್ನು ಬೆಳೆಸಿಕೊಳ್ಳುತ್ತದೆ. ಮಗು ರಜೆಗೆ ಅತ್ತೆಮನೆಗೆ ಹೋಗುತ್ತೇನೆ ಎಂದರೆ 'ನೀನು ಒಬ್ಬನೆ ಅಲ್ಲಿಗೆ ಹೋಗಬಾರದು' ಎನ್ನುತ್ತಾನೆ ಅಪ್ಪ. ಅಪ್ಪನ ಮನದಲ್ಲೂ ತಾನು ಚಿಕ್ಕವನಿದ್ದಾಗ ಒಬ್ಬನೇ ಹೋಗಿ ಭಯ ಬಿದ್ದ ಒಳತುಡಿತವಿರುತ್ತದೆ. ತಂದೆಯ ಭಯಕ್ಕೆ ತಕ್ಕಂತೆ ಮಗನೂ ಕಡೆಗೆ ಹೋಗುವುದಿಲ್ಲ ಎನ್ನುತ್ತಾನೆ.

ಮಕ್ಕಳು ಅತಿ ಹಠ ಮಾಡುತ್ತಾರೆಂದರೆ, ಆದರ ಹಿನ್ನೆಲೆಯಲ್ಲಿರುವುದು ಭಯವೇ ಆಗಿದೆ. ''ನಾನು ಸ್ಕೂಲಿಗೆ ಹೋಗುವುದಿಲ್ಲ''ವೆಂದು ಹಠ ಮಾಡಿದರೆ ಶಾಲೆಯ ಬಗೆಗೆ ಮಗುವಿನಲ್ಲಿ ಭಯವಿದೆಯೆಂದೇ ಅರ್ಥ. ಇಲ್ಲವೇ ಮಗುವಿಗೆ ಹೊಟ್ಟೆನೋವು ಇತ್ಯಾದಿ ದೈಹಿಕ ತೊಂದರೆ ಇರಬಹುದು.

ಇಂಥ ವೇಳೆ ಮಗುವನ್ನು ಹೊಡೆಯುವುದು ಬಡಿಯುವುದು ಮಾಡುವುದರಿಂದ ಯಾವುದೇ ರೀತಿಯ ಪ್ರಯೋಜನವೂ ಇಲ್ಲ. ಶಾಲೆಯ ಭಯವಾದರೆ ಉಪಾಧ್ಯಾಯರ ಭಯವೇ? ಜೊತೆಯವರ ಭಯವೇ? ಇತ್ಯಾದಿಗಳನ್ನು ತಿಳಿದುಕೊಳ್ಳಬೇಕು.

### ಅಷ್ಟಕ್ಕೇಕೆ ಇಷ್ಟು?

''ನಾನು ಸ್ನಾನ ಮಾಡಲಾರೆ'' ಎಂಬ ಮಗುವಿಗೆ ತಾನು ಮುಳುಗಿ ಹೋಗುವ, ಚಳಿಯ ಇಲ್ಲವೇ ನೀರಿನ ಯಾವುದಾದರೂ ಜೀವಿಯ ಭಯವಿರುತ್ತದೆ. ಬೀದಿಜಗಳ, ಸಿನಿಮಾದ ಹಿಂಸೆಗಳು ಕೂಡ ಮಗುವಿನಲ್ಲಿ ಭಯದ ಬೀಜ ಬಿತ್ತುತ್ತದೆ. ಮಕ್ಕಳಲ್ಲಿ ಧೈರ್ಯ ತುಂಬುವ, ಬಲ ಬಿಂಬಿಸುವ ಜವಾಬ್ದಾರಿ ಹಿರಿಯರದು ಎಂಬುದನ್ನು ಹೆತ್ತವರು ಅರಿತಿರಬೇಕು.

ನಿಮ್ಮ ಹುಡುಗನು ಧರಿಸಿದ ಬಟ್ಟೆಯನ್ನು ವಿದ್ಯಾರ್ಥಿಗಳು ಗೇಲಿ ಮಾಡಿದ್ದರೆ, ಆದರಿಂದ ಮಗು ಬೇಜಾರಾಗಿದ್ದರೆ ಬಿಡು, ಅದನ್ನೆಲ್ಲ ಗಮನಿಸದಿರು ಎಂಬ ಉತ್ತರ ಮಗುವಿಗೆ ಏನೇನೂ ಸಾಲದು. ''ಅರರೆ, ಚೆನ್ನಾಗಿದೆಯಲ್ಲ, ನಿನ್ನ ಬಟ್ಟೆ ಅವನಿಗೆ ಹಿಡಿಸಿ ಲ್ಲದಿರಬಹುದು ಅಷ್ಟೆ. ಅಷ್ಟಕ್ಕೆ ಹೀಗೆ ಬೇಸರಮಾಡಿ ಕೊಂಡಿದ್ದೀಯಾ? ಎಂದು ಕೇಳಿದಲ್ಲಿ ಮಗುವಿನಲ್ಲಿ ಹೆತ್ತವರಿಗೆ ತನ್ನ ಮೇಲೆ ಅಕ್ಕರೆಯಿದೆ ಎಂಬ ಅರಿವು ಉಂಟಾಗುತ್ತದೆ.

ಹೊಸದಾಗಿ ಮತ್ತೆ ಶಾಲೆಗೆ ಹೋಗುವಾಗ ''ನಿನಗೆ ಹಿಡಿಸಿದೆಯೇ? ನಿನ್ನ ಹಳೆಯ ಸ್ನೇಹಿತರೂ ಇದ್ದಾರೆಯೇ? ನಿನ್ನ ಈಗಿನ ಟೀಚರ್ ಹೇಗೆ?'' ಇತ್ಯಾದಿಯಾಗಿ ವಿಚಾರಿಸಿಕೊಳ್ಳುವುದು ಒಳಿತು. ಮಕ್ಕಳು ಅಕ್ಕರೆಗೆ ಸಕ್ಕರೆ ಬೊಂಬೆಯಂತೆ ಕರಗುತ್ತಾರೆ.

ಹೆತ್ತವರು ಮಗುವಿನೊಡನೆ ಪ್ರೀತಿ, ವಾತ್ಸಲ್ಯದೊಂದಿಗೆ ಮುಚ್ಚುಮರೆಯಿಲ್ಲದೆಯೂ, ಮುಚ್ಚಟೆಯಿಂದಲೂ ಅಕ್ಕರೆತೋರಬೇಕು. ಮಗುವನ್ನು ಸಮುದಾಯಕ್ಕೆ ಸೂಕ್ತವಾದವರನ್ನಾಗಿ ಬೆಳೆಸುವ ಜವಾಬ್ದಾರಿ ಹೆತ್ತವರದ್ದಾಗಿದೆ.

# ಕಾಯಿಲೆ ಬಾರದಂತೆ ಕಾದುಕೊಳ್ಳಿ



ಪ್ರತಿ ದಿನವೂ ಬೆಳಿಗ್ಗೆ ಒಂದು ಲೋಟ ಹಸಿರು ಎಲೆಯರಸ ತೆಗೆದುಕೊಂಡು ಕುಡಿಯುತ್ತ ಬಂದರೆ ಒಳಿತು. ಅದಕ್ಕೆ ಬೇರೆ ಬೇರೆ ಬಗೆಯ ಹಸಿರೆಲೆಗಳನ್ನು ಬಳಸುವುದು ಮುಖ್ಯ.

ಸಾಕಷ್ಟು ಪರಿಚಯವಿಲ್ಲದ ಎಲೆಗಳನ್ನು ಬಳಸು ವುದು ಕೆಲವೊಮ್ಮೆ ಅಪಾಯವನ್ನು ಅಪ್ಪಿಕೊಂಡಂ ತೆಯೇ ಸರಿ.

ಕುಡಿಯಬಹುದಾದ ಎಲೆಗಳ ಬಗೆಗೆ ಮೊದಲೇ ತಿಳಿದುಕೊಂಡು, ಅವುಗಳ ನಿಖರ ಗುರುತನ್ನು ಉಳಿಸಿ ಕೊಂಡಿರಬೇಕು. ಹೌದೋ ಅಲ್ಲವೋ ಎಂಬ ಸಂಶಯಗಳಿಗೆಲ್ಲ ಅವಕಾಶ ವಿಟ್ಟುಕೊಂಡಿರ ಬಾರದು.

ಹಸುರೆಲೆಗಳು ನಮಗೆ ಅತ್ಯವಶ್ಯಕದ್ದಾಗಿದೆ. ಈ ಎಲೆ ರಸಗಳಲ್ಲಿ ಜೀವಸತ್ವ ಮತ್ತು ಖನಿಜಗಳು ತುಂಬಿವೆ. ಅದರೊಂದಿಗೆ ರೋಗ ನಿವಾರಕ (Healing Power) ಮತ್ತು ರೋಗ ನಿರೋಧಕ ಶಕ್ತಿಯೂ ಲಭ್ಯವಾಗುತ್ತದೆ.

೬೦ರಿಂದ ೭೦ ಗ್ರಾಂ. ತೂಕದ ಎಲೆಗಳನ್ನು ತೆಗೆದು ಕೊಳ್ಳಿ. ಅದನ್ನು ಅರೆದು ರಸ ತೆಗೆಯ ಬೇಕು. ಅತಿ ಮುಖ್ಯವಾಗಿ ಗಮನಿಸಬೇಕಾ ದ್ದೆಂದರೆ, ನಮಗೆ ತಿಳಿದ ಎಲೆಗಳನ್ನು ಮಾತ್ರ ಬಳಸಬೇಕು.

ಆದರೆ ಈ ೭೦ ಗ್ರಾಮ್‌ನಷ್ಟು ಎಲೆಗಳಿಂದ ರಸ ತೆಗೆಯುವಾಗ ಮಿಕ್ಸಿಯನ್ನು ಬಳಸದಿರುವುದೇ ಮೇಲು. ಕಲ್ಲಿನಲ್ಲಿ ಜಜ್ಜಿ, ಅರೆದು ಹಿಂಡಿ ರಸ ತೆಗೆದು ಕೊಳ್ಳುವುದೇ ಆರೋಗ್ಯಕರ.



ಹಾಗೆ ತೆಗೆದ ರಸವನ್ನು ಹೇಗೆ ಕುಡಿಯು ವುದು? ಇದು ಮುಖ್ಯವಾದ ಸಂಗತಿಯಾಗಿದೆ. ಲೋಟವನ್ನು ಬಾಯಲ್ಲಿಟ್ಟುಕೊಂಡು ಆ ರಸವನ್ನು ಒಂದೊಂದು ಚಮಚವನ್ನೇ ಬಾಯಿಗೆ ತೆಗೆದುಕೊಂಡು ಜೊಲ್ಲಿನೊ ಡನೆ ಚೆನ್ನಾಗಿ ಬೆರೆಸಿ ಆ ಬಳಿಕ ನುಂಗಬೇಕು.

ಪ್ರತಿದಿನ ಐದು ನಿಮಿಷ ಇದಕ್ಕಾಗಿಯೇ ತೆಗೆದಿಡಿ. ಈ ಎಲೆರಸಕ್ಕೆ ತುಸು ಶುದ್ಧ ನೀರನ್ನು ಬೆರೆಸಿಯೂ ಕುಡಿ ಯಬಹುದು. ಕೆಲವರು ಎಲೆರಸವನ್ನು ನೇರ ಕುಡಿಯ ಲಾರರು. ಅವರಿಗೆ ಈ ನೀರು ಸೇರಿಕೆ ಸಹಕಾರಿಯಾಗಿ ರುತ್ತದೆ.

**ರಸ ಸೇವನೆಗೆ ಯೋಗ್ಯವಾದ ಎಲೆಗಳೆಂದರೆ :**

೧) ಗರಿಕೆ ಹುಲ್ಲಿನ ರಸ.
೨) ಅಶ್ವತ್ಥ (ಅರಳಿ) ಎಲೆ ರಸ.
೩) ಆಲದ ಎಲೆಯ ರಸ.
೪) ಶುಂಠಿ ರಸ.
೫) ಈಚಲ ರಸ.
೬) ಲಿಂಬೆರಸ.
೭) ಗೆಜ್ಜರಿ (ಕ್ಯಾರೆಟ್) ರಸ.
೮) ನೆಲ್ಲಿ (ಬೆಟ್ಟದ ನೆಲ್ಲಿ) ರಸ.
೯) ಒಂದೆಲಗದ ರಸ.
೧೦) ದೂತುವಳೆ ರಸ.
೧೧) ಮುಸುರೆ ರಸ.
೧೨) ನೆರುಂಜಿ ಎಲೆರಸ.
೧೩) ಬಾಳೆಯ ದಿಂಡಿನ ರಸ.
೧೪) ಕರಿಬೇವಿನ ರಸ.
೧೫) ಪುದಿನಾರಸ.
೧೬) ಮಣತಕಾಳಿ ರಸ.
೧೭) ದಾಸವಾಳದ ಎಲೆರಸ.
೧೮) ನುಗ್ಗೆಸೊಪ್ಪಿನ ರಸ.

> ★ **ಸೊಪ್ಪಿನ ರಸದಲ್ಲಿ ಜೀವಸತ್ವಗಳಿವೆ ಖನಿಜಗಳಿವೆ. ಇವು ರೋಗ ನಿವಾರಕ ಹಾಗೂ ರೋಗ ನಿರೋಧಕ ಶಕ್ತಿ ದಾಯಕ.**
>
> ★ **ಉಪ್ಪು ಹಾಕದೆ ಬೇಯಿಸಿದ ಸೊಪ್ಪಿನ ರಸ ಆರೋಗ್ಯಕಾರಿ.**

> **ಸೊಪ್ಪಿನ ರಸಗಳು ದೇಹವನ್ನು ರೋಗಗಳಿಂದ ಬಚಾವು ಮಾಡುವುದಲ್ಲದೆ, ರೋಗ ಬಾರ ದಂತೆಯೂ ತಡೆಯಬಲ್ಲವು. ಯಾವ ಸೊಪ್ಪುಗಳು, ಹೇಗೆ ಪರಿಣಾಕಾರಿ ? ಇದರ ಬಗ್ಗೆ ಪರಿಚಯ ನೀಡುವ ಉಪಯುಕ್ತ ಲೇಖನ**

೧೯) ಕರಿಸಲಕನ್ನಿ ಎಲೆರಸ.
೨೦) ಪೊನ್ನಾಕನ್ನಿ ರಸ.
೨೧) ಗಂಜಿ ಕತ್ತಾಳೆ ರಸ. (ಇದನ್ನು ವಾರದಲ್ಲಿ ಒಮ್ಮೆ ಮಾತ್ರ ತೆಗೆದುಕೊಳ್ಳಬೇಕು. ಈ ಕತ್ತಾಳೆಯ ಮೇಲಿನ ಸಿಪ್ಪೆ ತೆಗೆದು ಒಳಗಿನ ಗಂಜಿಯನ್ನು ೫೦ ಗ್ರಾಂನಷ್ಟು ತೆಗೆದುಕೊಂಡು, ಅದನ್ನು ಚೆನ್ನಾಗಿ ತೊಳೆದ ಬಳಿಕ ರಸ ಹೀರಬೇಕು.)

ಯಾವುದೇ ಎಲೆ ಸಾರವನ್ನಾದರೂ ನಿಮ್ಮ ಅನು ಕೂಲಕ್ಕೆ ತಕ್ಕಂತೆ ತೆಗೆದುಕೊಳ್ಳಬಹುದು. ಆದಷ್ಟು ಬೇರೆ ಬೇರೆ ಸೊಪ್ಪಿನ ರಸ ಕುಡಿಯುವುದು ಮಾತ್ರ ಮುಖ್ಯ.

ಬೆಳಿಗ್ಗೆ ಎಲೆಯ ರಸ. ಮಧ್ಯಾಹ್ನದ ಊಟಕ್ಕೆ ಒಂದೆರಡು ತರಕಾರಿ. ಅನ್ನ ಕಡಿಮೆಯಿರಲಿ. ರಾತ್ರಿ ಹಣ್ಣುಗಳು. ರಾತ್ರಿ ವೇಳೆ ಹಣ್ಣುಗಳ ಹೊರತು ಬೇರೇನನ್ನೂ ತೆಗೆದುಕೊಳ್ಳದಿರುವುದು ಒಳಿತು.

ಈ ಎಲೆಗಳಲ್ಲಿ ಹಸಿಯಾಗಿಯೇ ತಿನ್ನಬಹು ದಾದ ಎಲೆಗಳನ್ನು ಹಾಗೆಯೇ ಅಗಿದು ಕೂಡ ತಿನ್ನಬಹುದು. ಆದರೆ ರಸ ತೆಗೆದುಕುಡಿಯುವುದು ಹೆಚ್ಚು ಫಲಕಾರಿ ಯಾಗಿದೆ.

ಹಸಿಯಾಗಿ ತಿನ್ನಲಾಗದ ಸೊಪ್ಪುಗಳನ್ನು ಪ್ರತಿದಿನ ಒಂದನ್ನು ತೆಗೆದುಕೊಂಡು ಉಪ್ಪು ಹಾಕದೆ ಬೇಯಿಸಿ, ಅದರ ಒಂದು ಲೋಟ ನೀರನ್ನು ಬಸಿದುಕೊಂಡು ಕುಡಿಯಬೇಕು. ಉಳಿದದ್ದು ಪಲ್ಯವಾಗುತ್ತದೆ. ಸೊಪ್ಪಿನರಸಗಳು ಆರೋಗ್ಯಕ್ಕೆ ಸೋಪಾನಗಳು.



## ವೆಚ್ಚವಿಲ್ಲದ ನಿಮ್ಮ ಕೈಯಲ್ಲೇ ಇರುವ ಚಿಕಿತ್ಸೆ ಮೂತ್ರಚಿಕಿತ್ಸೆ. ಕಲಬೆರಕೆಯ ಭಯವಿಲ್ಲ, ದುಷ್ಪರಿಣಾಮಗಳಾಗುವ ಸಂಭವವಿಲ್ಲ.




ಉಚ್ಚೆ, ಮೂತ್ರ ಎಂದ ಕೂಡಲೆ ಮುಖವನ್ನು ಹಿಂಡಬೇಡಿ, ಹಿಂಜಬೇಡಿ. ಸ್ವಲ್ಪ ತಾಳ್ಮೆಯಿರಲಿ. ಸಮಯದಲ್ಲಿ ಮೂತ್ರವೂ ಮದ್ದೇ.

ದಾರಿಯಲ್ಲಿ ನಡೆದು ಹೋಗುತ್ತಿದ್ದೀರಿ. ದಿಢೀರನೆ ಕಲ್ಲು ತಾಗಿ ಹೆಬ್ಬೆರಳು ಗಾಯವಾಯಿತು, ಯಾವುದಾದರೂ ವಾಹನ ತಾಗಿ ಗಾಯವಾಗಿ ನೆತ್ತರು ಬಂತೆಂದರೆ ಏನು ಮಾಡುತ್ತೀರಿ? ಮೊದಲು ಪಕ್ಕದಲ್ಲಿ ಇರುವ ಯಾವುದಾದರೂ ಬಾತ್ ರೂಮ್ ಹೊಕ್ಕು, ಆ ಗಾಯದ ಮೇಲೆ ನಿಮಗೆ ಆ ಹೊತ್ತು ಎಷ್ಟು ಬರುತ್ತದೋ ಅಷ್ಟು ಮೂತ್ರವನ್ನೂ ಹೊಯ್ಯಿರಿ. ಆದಿನ ಎಷ್ಟು ಬಾರಿ ಉಚ್ಚೆ ಬಂದರೂ, ಗಾಯಕ್ಕೆ ಈ ಮೂತ್ರಾಭಿಷೇಕ ಚಿಕಿತ್ಸೆಯನ್ನು ನಿಲ್ಲಿಸಬೇಡಿ. ರಾತ್ರಿ ಒಮ್ಮೆ ಚೆನ್ನಾಗಿ ತೊಳೆಯಿರಿ.

ಹೀಗೆಯೇ ೩ ದಿನದಿಂದ ಒಂದು ವಾರದವರೆಗೆ ಗಾಯಕ್ಕೆ ಮೂತ್ರ ಸ್ನಾನ ಮಾಡಿಸುತ್ತ ಬಂದರೆ, ಗಾಯವಾದ ಜಾಗದೆಡೆಯನ್ನು ಗುರುತಿಸಲಾಗದಂತೆ ಗಾಯವು ಮಾಯುತ್ತದೆ.

### ಕೆಸರು ಹುಣ್ಣಿಗೆ ಮದ್ದು

ಮಳೆಗಾಲದಲ್ಲಿ ಕೆಸರಿನಲ್ಲಿ ಹೆಚ್ಚು ಓಡಾಡಿದರೆ, ನೀರಿನಲ್ಲೇ ಇಡೀ ದಿನ ನಿಂತು ಕೆಲಸ ಮಾಡಿದರೆ ಕಾಲಿನ ಬೆರಳು ಸಂಧಿಗಳಲ್ಲಿ, ಕೈಬೆರಳ ಸಂಧಿಗಳಲ್ಲಿ ನೀರು ಹುಣ್ಣು ಇಲ್ಲವೇ ಕೆಸರು ಹುಣ್ಣು ಆಗುತ್ತದೆ. ಇದಕ್ಕೂ ಸಹ ಮೂತ್ರ ಮಜ್ಜನವು ಗುಣಕಾರಿ ಮದ್ದಾಗಿದೆ. ಹೀಗೆ ಕೆಸರು ಹುಣ್ಣಿಗೆ ಮೂತ್ರ ಹುಯ್ಯುವ ಪದ್ಧತಿಯು ಹಳ್ಳಿಗಳ ಕಡೆ ಕೆಲವೆಡೆ ಹಿಂದಿನಿಂದಲೂ ರೂಢಿಗತವಾಗಿದೆ.

### ಮೂತ್ರದ ಮಸಾಜ್

ಕಾಲಿನ ಗಂಟುಗಳಲ್ಲಿ ಕೀಲುನೋವು ಬರುವುದು ವಯಸ್ಸಾದವರಲ್ಲಿ ಮಾಮೂಲಿ. ಇದಕ್ಕೂ ಮೂತ್ರ ಚಿಕಿತ್ಸೆ ಪರಿಣಾಮಕಾರಿಯಾದುದಾಗಿದೆ.

ಬಿಸಿ ಮೂತ್ರವನ್ನು ಇಂಥ ಎಲುಬು ಸಂದಿಗಳಿಗೆ ಉಜ್ಜ ಸಣ್ಣಗೆ ಮಸಾಜ್ ಮಾಡಬೇಕು. ಅದೇ ವೇಳೆ ಪ್ರತಿದಿನ ಮೂರು ಸಮಯ ನಿಮ್ಮ ತಾಜಾ ಮೂತ್ರವನ್ನು ಒಂದೊಂದು ಔನ್ಸ್ ಕುಡಿಯಿರಿ. ಇದೇ ವೇಳೆ ಹತ್ತಿಯನ್ನು ಮೂತ್ರದಲ್ಲಿ ನೆನೆಸಿ ನೋವಿರುವ ಗಂಟುಗಳ ಮೇಲೆ ಇಟ್ಟು, ಬಟ್ಟೆಯಿಂದ ಸುತ್ತಿ ಬ್ಯಾಂಡೇಜ್ ಮಾಡುವುದೂ ಪರಿಣಾಮಕಾರಿಯಾಗಿರುತ್ತದೆ. ಒಂದು ವಾರದಿಂದ ಹದಿನೈದು ದಿನಗಳ 'ವರೆಗಿನ ಇಂತಹ ಚಿಕಿತ್ಸೆ ಮಂಡಿ ನೋವುಗಳನ್ನು ಗುಣ ಪಡಿಸಬಲ್ಲದು.

### ಕಣ್ಣಿಗೆ ಹಾಯಿ

ಇನ್ನು ಕಣ್ಣುನೋವು. ಕಣ್ಣುನೋವಿಗೆ ಯಾವುದೇ ಐಡ್ರಾಪ್ಸ್ ಹುಡುಕಿಕೊಂಡು ಹೋಗಬೇಕಾದ ಅಗತ್ಯವಿಲ್ಲ. ಕಣ್ಣುನೋವು ಬಂದರೆ, ಒಮ್ಮೆಗೆ ಎರಡು ತೊಟ್ಟಿನಂತೆ ದಿನದಲ್ಲಿ ಮೂರು ವೇಳೆ ಮೂತ್ರವನ್ನು ಕಣ್ಣಿಗೆ ಬಿಡಿ. ಎರಡೇ ದಿನದಲ್ಲಿ ಕಣ್ಣು ನೋವೆಲ್ಲ ಮಾಯವಾಗಿ ಆರಾಮವಾಗುತ್ತದೆ. ಹೀಗೆ ಯಾವುದೇ ಬಗೆಯ ನೋವುಗಳನ್ನು ನಮ್ಮ ಮೂತ್ರ ಬಳಸಿಯೇ ಗುಣಪಡಿಸಿಕೊಳ್ಳುವುದು ಸಾಧ್ಯವಿದೆ.

### ಸಿದ್ಧ ಚಿಕಿತ್ಸೆ

ದಕ್ಷಿಣ ಭಾರತದಲ್ಲಿ ಪುರಾತನ ಕಾಲದಿಂದಲೂ ಸಿದ್ಧವೈದ್ಯದಲ್ಲಿ ಮೂತ್ರವನ್ನು ಮದ್ದಾಗಿ ಬಳಸಿದ್ದರು. ಈ ಬಗೆಗಿನ ಕೆಲವು ಹಳೆಯ ಮಂತ್ರಗಳು, ಶ್ಲೋಕಗಳು ಲಭ್ಯವಿವೆ. ಇವೆಲ್ಲವೂ ಮೂತ್ರ ಮಹಿಮೆಯನ್ನೂ, ಅದರ ಮಹತ್ವವನ್ನೂ ವಿವರಿಸುತ್ತವೆ. ಒಟ್ಟಾರೆ ಅವೆಲ್ಲವುಗಳಲ್ಲಿನ ಮುಖ್ಯ ಅಂಶವೆಂದರೆ ಮೂತ್ರವು ಅಸಾಮಾನ್ಯ ನೋವು ನಿವಾರಕ.

ಅಂಥಹ ಕೆಲವು ಶ್ಲೋಕಗಳ ಅರ್ಥ ಕೆಳಕಂಡಂತಿವೆ

### ಮೂತ್ರ ಮಂತ್ರಗಳು

ಅ) ಮೂತ್ರವನ್ನು ದಿನವೂ ಕುಡಿದರೆ ಒಂದು ವರ್ಷದೊಳಗೆ ನಿಮ್ಮ ದೇಹವು ಕಾಂತಿಯುತವಾಗುತ್ತದೆ. ದೇಹಕ್ಕೆ ಅಳಿವು ಬಾರದು. ಪ್ರಾಣ, ಮನಸ್ಸು ಬಲಗೊಳ್ಳುತ್ತದೆ. ಸಂತೋಷವುಕ್ಕುತ್ತದೆ. ದೇಹವು ಚೆನ್ನಾಗುತ್ತದೆ.

ಆ) ಮಕ್ಕಳೇ, ಮೂತ್ರವನ್ನು ೧೦೦ ಕಾಳು ಮೆಣಸಿನಷ್ಟು ಕುಡಿಯಿರಿ. ಇದನ್ನು ಮೀರಿಸುವ ಮದ್ದು ಬೇರೆ ಯಾವುದೂ ಇಲ್ಲ. ಇದರ ಹಿರಿಮೆಯನ್ನು ಅರಿತು, ತಲೆನೆತ್ತಿಗೆ ಉಜ್ಜಿಕೊಂಡರೆ, ಬಿಳಿ ಕೂದಲು ಬದಲಾಗಿ ಹೊಸಕೂದಲು ಹುಟ್ಟುತ್ತದೆ.

ಇ) ಕೂದಲನ್ನೂ, ಒಳ್ಳೆಯ ನೆತ್ತಿಯನ್ನೂ ಹೊಂದಿರುವ ಹೆಣ್ಣೆ ನಿನಗೊಂದು ಅಚ್ಚರಿಯನ್ನು ಹೇಳುತ್ತೇನೆ ಕೇಳು! ದೇಹದ ಮರೆಯಲ್ಲಿರುವ ಶಿವ ನೀರಾಗಿರುವ ಈ ಮೂತ್ರಕ್ಕೆ ಕಾಳುಮೆಣಸು, ನೆಲ್ಲಿಕಾಯಿ, ಅರಿಶಿನ, ಬೇವಿನೆಲೆಗಳನ್ನು ಜಜ್ಜಿ, ಬೆರೆಸಿ ಕುಡಿದರೆ ದೇಹದ ಮೆರುಗು ಹೆಚ್ಚುತ್ತದೆ. ಪೀಚು ದೇಹದವರು ಪುಷ್ಟಿಗೊಳ್ಳುತ್ತಾರೆ. ತಲೆಯ ನರೆಕೂದಲು ಕಪ್ಪಾಗುತ್ತದೆ.

### ಏಡ್ಸ್‌ಗೆ ರಾಮಬಾಣ

ದೆಹಲಿಯಲ್ಲಿರುವ ಮೂತ್ರ ಸಂಶೋಧನಾಲಯದ ನಿರ್ದೇಶಕರಾದ ಠಾಕೂರರ ಪ್ರಕಾರ ಜಗತ್ತಿನ ಕ್ರೂರ ಕಾಯಿಲೆಯಾದ ಏಡ್ಸನ್ನು ಉಚ್ಚೆ ಕುಡಿಯುವುದರ ಮೂಲಕ ಗುಣಪಡಿಸಿಕೊಳ್ಳಬಹುದು. ಮೂತ್ರದಲ್ಲಿ ರೋಗ ಎದುರಿಸುವ ಶಕ್ತಿ ಇದೆ. ಇದು ನಾನಾ ಬಗೆಯ ವೈರಸ್‌ಗಳನ್ನು ಮತ್ತು ಬ್ಯಾಕ್ಟೀರಿಯಾಗಳನ್ನು ಕೊಲ್ಲುವ ಸಾಮರ್ಥ್ಯ ಪಡೆದಿದೆ.

### ಧಾತು ಪೋಷಕ

ಶ್ರೇಷ್ಠ ಸಂಶೋಧಕರೂ, ವೈದ್ಯರೂ, ಜೀವತಜ್ಞರೂ ಆದ ಡಾಕ್ಟರ್ ಫೆಹ್ರನ್ ತಮ್ಮ "ಇಂಟ್ರಡಕ್ಷನ್ ಟು ಬಯೋ ಕೆಮಿಸ್ಟ್ರಿ" ಪುಸ್ತಕದಲ್ಲಿ ಹೇಳಿರುವುದನ್ನು ಓದಿದರೆ ಮೂತ್ರದ ಮಹತ್ವ ಅರ್ಥವಾದೀತು. ಉಚ್ಚೆಯಲ್ಲಿ ದೇಹಕ್ಕೆ ಅಗತ್ಯವಾದ ಹತ್ತೊಂಬತ್ತು ಪೋಷಕಾಂಶಗಳು ಇವೆ. ಮೂತ್ರದಲ್ಲಿರುವ ಹತ್ತೊಂಬತ್ತು ಧಾತುಗಳಲ್ಲಿ ಒಂದು ಯೂರಿಯಾ. ಇದು ಉಚ್ಚೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಾಣಬರುತ್ತದೆ. ೩೪೦೦ ಗ್ರಾಂ. ಮೂತ್ರದಲ್ಲಿ ೧೪೫೯ ಮಿ.ಗ್ರಾಂ. ಯೂರಿಯಾ ಇದೆ.

**ಸಂಶೋಧನಾ ರೀತ್ಯಾ ಮೂತ್ರದಲ್ಲಿರುವ ೧೯ ಧಾತುಗಳ ಪ್ರಮಾಣ ಕೆಳಕಂಡಂತಿದೆ. (೩,೪೦೦ ಗ್ರಾಂನಲ್ಲಿ)**

| ವಸ್ತು | ಪ್ರಮಾಣ (ಮಿ.ಗ್ರಾಂ.ಗಳಲ್ಲಿ) |
|---|---|
| ಯೂರಿಯಾ (ನೈಟ್ರೋಜನ್) | ೬೮೨.೦೦ |
| ಯೂರಿಯಾ | ೧,೪೫೯.೦೦ |
| ಕ್ರಿಯ್ಡಿನೀನ್ (ನೈಟ್ರೋಜನ್) | ೩೬.೦೦ |
| ಕ್ರಿಯ್ಡಿನಿನ್ | ೯೭.೨೦ |
| ಯೂರಿಕ್ ಆಸಿಡ್ (ನೈಟ್ರೋಜನ್) | ೧೨.೩೦ |
| ಯೂರಿಕ್ ಆಸಿಡ್ | ೩೬.೯೦ |
| ಅಮಿನೋ (ನೈಟ್ರೋಜನ್) | ೯.೭೦ |
| ಅಮೋನಿಯಾ (ನೈಟ್ರೋಜನ್) | ೫೭.೦೦ |
| ಸೋಡಿಯಂ | ೨೧೨.೦೦ |
| ಪೊಟಾಶಿಯಂ | ೧೩೭.೦೦ |
| ಕ್ಯಾಲ್ಸಿಯಂ | ೧೯.೫೦ |
| ಮೆಗ್ನೇಶಿಯಂ | ೧೧.೩೦ |
| ಕ್ಲೋರೈಡ್ | ೩೧೪.೦೦ |
| ಸಲ್ಫೇಟ್ | ೯೧.೦೦ |
| ಇನ್‌ಆರ್ಗಾನಿಕ್ ಸಲ್ಫೇಟ್ | ೮೩.೦೦ |
| ಇನ್‌ಆರ್ಗಾನಿಕ್ ಫಾಸ್ಫೇಟ್ | ೧೨೭.೦೦ |
| ಪಿ. ಹೆಚ್.(P.H.) | ೬.೪೦ |
| ಆಸಿಡ್ | ೨೭.೮೦ |

### ಸ್ವಯಂ ವೈದ್ಯ

ಆದರೆ ಒಂದು ವಿಷಯ. ಮೂತ್ರ ಮದ್ದಿಗೆ ನಿಮ್ಮಲ್ಲಿರಬೇಕಾದುದು ತುಸು ಸಹನೆ ಅಷ್ಟೆ ಜೊತೆಗೆ ನಂಬಿಕೆ, ಬಿಡದ ಪ್ರಯತ್ನ ಇವುಗಳಷ್ಟೆ.

ಮೂತ್ರದಿಂದ ರೋಗವಿಲ್ಲದ ಬಾಳ್ವೆಯನ್ನು ಬಾಳಬಹುದು. ಬಂದ ಕಾಯಿಲೆಯನ್ನು ಗುಣಪಡಿಸಿಕೊಳ್ಳಬಹುದು. ಎಲ್ಲ ನಿಮ್ಮ ಮೈಯಲ್ಲೇ ಇದೆ, ಕೈಯಲ್ಲೇ ಇದೆ. ಮೂತ್ರ ನಿಜಕ್ಕೂ ಅಮೃತ! ●

# ಹೊಸ ಅಂಕಣ

## "ಸೆಕೆಂಡ್ ಒಪೀನಿಯನ್"

### ತಜ್ಞ ವೈದ್ಯರೊಡನೆ ಆರೋಗ್ಯ ಸಮಾಲೋಚನೆ.

ಓದುಗರೇ,

ಆರೋಗ್ಯದ ಬಗ್ಗೆ ನಿಮಗೆ ಅನೇಕ ವಿಷಯಗಳು ತಿಳಿಯದಿರಬಹುದು. ಅವನ್ನು ಸರಳವಾಗಿ ತಿಳಿಯುವ ಮಾರ್ಗ ನಿಮಗೆ ದೊರೆಯದಿರಬಹುದು. ಹಾಗೂ ನಿಮ್ಮ ರೋಗಕ್ಕೆ ನೀವು ತೆಗೆದುಕೊಳ್ಳುತ್ತಿರುವ ಚಿಕಿತ್ಸೆ ಸರಿಯಾಗಿದೆಯೇ ಇಲ್ಲವೇ ? ಎಂಬ ಸಂಶಯ ನಿಮಗೆ ಬರಬಹುದು. ಅದನ್ನು ನಿವಾರಿಸಿಕೊಳ್ಳಲು ನಿಮಗೆ ಸೂಕ್ತ ಮಾರ್ಗದರ್ಶನ ಸಿಗದಿರಬಹುದು.

ಹಾಗಾಗಿ....

ನಿಮಗಾಗಿ ಆರಂಭಿಸುತ್ತಿದ್ದೇವೆ ಈ ಹೊಸ ಅಂಕಣವನ್ನು. ಪ್ರತಿ ತಿಂಗಳು ಒಬ್ಬೊಬ್ಬ ತಜ್ಞ ವೈದ್ಯರು, ಒಂದೊಂದು ವಿಷಯಕ್ಕೆ ಸಂಬಂಧಿಸಿದಂತೆ ನಿಮ್ಮ ಅನುಮಾನಗಳಿಗೆ ಪರಿಹಾರ ಹಾಗೂ ಮಾರ್ಗದರ್ಶನಗಳನ್ನು ನೀಡುತ್ತಾರೆ.

**ಡಾ। ಎಸ್.ಆರ್.ನಾಗಭೂಷಣ್, ಎಂ.ಡಿ.,**
ವಿಭಾಗದ ಮುಖ್ಯಸ್ಥರು ಹಾಗೂ ಪ್ರಾಚಾರ್ಯರು
ಚರ್ಮರೋಗ ವಿಭಾಗ, ಎಂ.ಎಸ್.ರಾಮಯ್ಯ ವೈದ್ಯಕೀಯ ಮಹಾವಿದ್ಯಾಲಯ ಬೆಂಗಳೂರು

**ಮೇ ತಿಂಗಳ ಸಂಚಿಕೆಯಲ್ಲಿ ಖ್ಯಾತ ತಜ್ಞರಾದ ಇವರು ನಿಮ್ಮ ಚರ್ಮ ರೋಗಗಳಿಗೆ ಸಂಬಂಧಿಸಿದ ಪ್ರಶ್ನೆಗಳಿಗೆ ಉತ್ತರಿಸಲಿದ್ದಾರೆ**

### ನಿಯಮಗಳು

೧)ಪ್ರಶ್ನೆಗಳನ್ನು ನಿಗದಿತ ಫಾರಂನಲ್ಲಿ ಮಾತ್ರ ಕಳುಹಿಸಬೇಕು.

೨)ಪ್ರಶ್ನೆಗಳು ಚುಟುಕಾಗಿರಲಿ, ಸ್ಪಷ್ಟವಾಗಿರಲಿ.

೩)ಪ್ರಶೆಗಳಿಗೆ ಸೂಕ್ತ ವಿವರಗಳನ್ನು ಹಾಗೂ ಮಾಹಿತಿಯನ್ನು ಕೊಡಲಾಗುತ್ತದೆ. ಚಿಕಿತ್ಸಾ ವಿವರಗಳನ್ನು ನೀಡುವುದಿಲ್ಲ. ಆದರೆ ಅವಶ್ಯ ಮಾರ್ಗದರ್ಶನ ನೀಡಲಾಗುತ್ತದೆ.

೪)ಈಗಾಗಲೇ ಪಡೆಯುತ್ತಿರುವ ಔಷಧಗಳ ಸೇವನೆಯ ಬಗ್ಗೆ "ಸೆಕೆಂಡ್ ಒಪೀನಿಯನ್" (ದ್ವಿತೀಯ ವೈದ್ಯರ ಅಭಿಪ್ರಾಯ) ಬೇಕಿದ್ದರೆ, ಔಷಧ ವಿವರಗಳನ್ನು ಒಂದು ಹಾಳೆಯಲ್ಲಿ ಬರೆದು ಫಾರಂ ಜೊತೆ ಲಗತ್ತಿಸಿ.

೫)ಈ ಬಗ್ಗೆ ಯಾವುದೇ ಪತ್ರ ವ್ಯವಹಾರಕ್ಕೆ ಅವಕಾಶವಿಲ್ಲ.

೬)ಏಪ್ರಿಲ್ ೧೯೯೭ರ 'ಸೆಕೆಂಡ್ ಒಪೀನಿಯನ್'ಗೆ ಪ್ರಶ್ನೆಗಳನ್ನು ಕಳುಹಿಸಲು ಕೊನೆಯ ದಿನಾಂಕ ಮಾರ್ಚ್ ೨೫, ೧೯೯೭. ನಂತರ ಬಂದ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ.

ನೀವು ಪತ್ರ ಬರೆಯಬೇಕಾದ ವಿಳಾಸ
**ಜೀವನಾಡಿ**
**'ಸೆಕೆಂಡ್ ಒಪೀನಿಯನ್ ವಿಭಾಗ'**
ದಿಕ್ಸೂಚಿ ಕಾರ್ಯಾಲಯ,
೯೪೦, ೮ನೇ 'ಬಿ' ಮೇನ್,
೩ನೆಯ ಸ್ಟೇಜ್, ೩ನೆಯ ಬ್ಲಾಕ್,
ಬಸವೇಶ್ವರ ನಗರ,
ಬೆಂಗಳೂರು-೫೬೦ ೦೭೯

---

## 'ಸೆಕೆಂಡ್ ಒಪೀನಿಯನ್' ವಿಭಾಗ - ಏಪ್ರಿಲ್-೧೯೯೭

ಹೆಸರು..........................................................................................

ವಯಸ್ಸು.......................................ಲಿಂಗ...........................................

ವಿಳಾಸ..........................................................................................

....................................................................................................

....................................................................................................

ಪ್ರಶ್ನೆಗಳು ೧) ..............................................................................

೨) ..............................................................................

ಸ್ಥಳ...............................

ದಿನಾಂಕ.......................... ಸಹಿ

# ಕೈ ತೊಳೆದುಕೋ.....



ವೈಯಕ್ತಿಕ ಆರೋಗ್ಯ

ಕೈ ತೊಳೆದುಕೊ..... ಎನ್ನುವುದು ಒಂದು ಮಾತು. ಅವನು ಆ ಕೆಲಸದಿಂದ ಕೈತೊಳೆದು ಕೊಂಡನು ಎಂದರೆ, ಆ ಕೆಲಸವನ್ನು ಬಿಟ್ಟನು ಎಂದು ಅರ್ಥ. ಕೈಗೆ ಅಂಟಿದ ಎಲ್ಲ ಪದಾರ್ಥವೂ ತೊಳೆದು ಹೋಗಬೇಕು. ಕೈಗಳೆರಡೂ ನಿರ್ಮಲವಾಗಿರಬೇಕು.

ಹಾಗಾದರೆ ಕೈ ತೊಳೆಯುವುದು ಅಷ್ಟು ಸುಲಭವೇ ಎಂಬ ಪ್ರಶ್ನೆ ಬರುತ್ತದೆ. ರೂಢಿಯಲ್ಲಿ ಜನರು ಸ್ವಲ್ಪ ನೀರನ್ನು ಅಂಗೈಯಲ್ಲಿ ಹಾಕಿಕೊಂಡು, ಗಸಗಸನೇ ತಿಕ್ಕಿ, ನೀರನ್ನು ಅಲ್ಲಿಯೇ ಸಿಂಪಡಿಸಿ ಆಹಾರ ಸೇವಿಸಲು ಹೋಗುವರು. ಸೂಕ್ಷ್ಮವಾಗಿ ನೋಡಿದರೆ ಇಂಥವರ ಕೈಬೆರಳು ತುದಿಗಳೂ ಸಹ ಸರಿಯಾಗಿ ಒದ್ದೆಯಾಗಿರು ವುದಿಲ್ಲ. ಕೈಗಳ ಹಿಂಭಾಗವು ಇನ್ನೂ ಒಣಗಿದ್ದಾಗಿಯೇ ಇರುತ್ತದೆ. ಕೈಗಳನ್ನು ತೊಳೆಯುವ ರೀತಿ ಇದಲ್ಲ. ಹೀಗೆ ಕೈಗಳನ್ನು ತೊಳೆ ಯುವವರು ಹಲವಾರು ಹುಳುಗಳನ್ನು ತಮ್ಮ ಕರುಳಿನಲ್ಲಿ ಸಾಕಿರುತ್ತಾರೆ. ಹಲವಾರು ಸಲ ಆಮಶಂಕೆ ಬೇಧಿಗಳಿಂದ ಬಳಲಿರುತ್ತಾರೆ. ಬಳಲುತ್ತ ಹೋಗು ತ್ತಾರೆ. ತೋರಿಕೆಗೆ ಕೈತೊಳೆ ಯುವ ಇಂಥ ವ್ಯಕ್ತಿಗಳು ತಮ್ಮ ಕೈಗೆ, ಬೆರಳುಗಳಿಗೆ ಅಂಟಿಕೊಂಡಿರಬಹುದಾದ ಹುಳಗಳ ತತ್ತಿಗಳನ್ನು ಹಾಗೂ ರೋಗ ಜಂತುಗಳನ್ನು ಆಹಾರದೊಡನೆ ಸೇವಿಸುತ್ತಾರೆ. ರೋಗದಿಂದ ಬಳಲುತ್ತಾರೆ.

ಕೈತೊಳೆಯುವುದು ವೈಜ್ಞಾನಿಕವಾಗಿರಬೇಕು. ಮೊದಲು ಮುಂಗೈವರೆಗೆ ನೀರಿನಿಂದ ಸರಿಯಾಗಿ ಒದ್ದೆ ಮಾಡಬೇಕು. ಇದರಿಂದ ಚರ್ಮದ ಮೇಲೆ ಅಂಟಿಕೊಂಡಿದ್ದ ರೋಗಕಾರಕ ವಸ್ತುಗಳು ಸಡಿಲಗೊಳ್ಳುವವು, ಆದರೆ ಚರ್ಮದ ಮೇಲಿನ ನೆಣದಲ್ಲಿ ಸಿಕ್ಕಿಕೊಂಡ ರೋಗಕಾರಕ ವಸ್ತುಗಳು ಸಡಿಲಗೊಂಡಿರುವುದಿಲ್ಲ. ಇವನ್ನು ಸಡಿಲಿಸಬೇಕಾದರೆ, ಸೋಪನ್ನು ಬಳಸಬೇಕು. ಸೋಪಿನ ನೊರೆಯು ನೆಣವನ್ನು ಕರಗಿಸುತ್ತದೆ. ನೆಣದೊಡನಿದ್ದ ರೋಗಕಾರಕ ಪದಾರ್ಥಗಳೆಲ್ಲ ನಾಶವಾಗುತ್ತವೆ ಹಾಗೂ ಚರ್ಮದಿಂದ ಸಡಿಲಗೊಳ್ಳುತ್ತವೆ. ಕಾರಣ ಸೋಪು ಬಳಸಿದಾಗ ಅಂಗೈ, ಹಿಂಗೈ, ಬೆರಳುಗಳು, ಬೆರಳುಗಳ ಸಂದುಗಳು, ಬೆರಳುಗಳ ತುದಿ ಹಾಗೂ ಉಗುರಿನ ಕಣ್ಣುಗಳನ್ನು ಸರಿಯಾಗಿ ತಿಕ್ಕಿ ನಿರ್ಮಲಗೊಳಿಸಬೇಕು. ನಂತರ ನೀರು ಸುರುವಿ ಎಲ್ಲ ಕೊಳೆ ಹೋಗುವಂತೆ ಎಚ್ಚರ ವಹಿಸಬೇಕು. ತರುವಾಯ ನಿರ್ಮಲ ಬಟ್ಟೆಯಿದ್ದರೆ ನೀರನ್ನು ಒರೆಸಿ ತೆಗೆಯಬೇಕು. ಇಲ್ಲದೆ ಹೋದರೆ ಗಾಳಿಗೆ ಬಿಟ್ಟು ನೀರೆಲ್ಲ ಕೈಯಿಂದ ಆರಿ ಹೋಗುವವರೆಗೆ ನಿಲ್ಲಬೇಕು. ನಂತರ ತಿಂಡಿ, ತೀರ್ಥ ಮುಟ್ಟಬೇಕು.

ಇದನ್ನು ಸಾಧಿಸಿದರೆ ನಮ್ಮ ದೇಶದಲ್ಲಿಯ ಸುಮಾರು ಪ್ರತಿಶತ ೩೦ರಷ್ಟು ರೋಗಗಳನ್ನು ನಿರ್ಮೂಲ ಮಾಡಬಹುದು. ●

**ಕೈ ತೊಳೆಯುವುದು ಅಷ್ಟು ಸುಲಭವೇ? ವೈಜ್ಞಾನಿಕವಾಗಿ ಕೈ ತೊಳೆಯುವುದರಿಂದ ನಮ್ಮ ದೇಶದಲ್ಲಿಯ ಸುಮಾರು ಪ್ರತಿಶತ ೩೦ರಷ್ಟು ರೋಗಗಳನ್ನು ನಿರ್ಮೂಲ ಮಾಡಬಹುದು.**

## ನಗೆನಾಡಿ

★ ರೋಗಿ: "ನಾನು ಬದುಕ್ತೀನಾ ಡಾಕ್ಟ್ರೆ?"
ಡಾಕ್ಟರ್: "ಹೂಂ, ಆದರೆ ಬೇಡ ಅನ್ಸುತ್ತೆ ನನಗೆ"

★ ರೋಗಿ: "ನನಗೆ ಉಸಿರಾಡೊಕ್ಕೆ ತೊಂದರೆ ಆಗ್ತಾ ಇದೆ ಡಾಕ್ಟ್ರೆ"
ಡಾಕ್ಟರ್: "ಹಾಗಾ? ಅದನ್ನ ನಿಲ್ಲಿಸ್ತೀನಿ ಬಿಡಿ"

★ ಒಬ್ಬ: "ಯಾಕ್ರೀ, ಔಷಧಿ ಕುಡಿದತಕ್ಷಣ ಕುಣಿದಾಡ್ತಾ ಇದ್ದೀರಿ?"
ಇನ್ನೊಬ್ಬ: "ಔಷಧಿ ಬಾಟಲನ್ನ ಕುಲುಕೋದನ್ನೇ ಮರೆತು ಬಿಟ್ಟಿದ್ದೆ. ಅದಕ್ಕೆ ಕುಣಿದು ಕುಲುಕುಸ್ತಾ ಇದೀನಿ"

- ಸಂಪಟೂರು ವಿಶ್ವನಾಥ್




ಸಂಗ್ರಹ: ಚಂದ್ರಶೇಖರ್ ರೆಡ್ಡಿ, ಭಾವಿಕಟ್ಟಿ, ಕವಿತಾಳ

# 'ಆರೋಗ್ಯ ಜ್ಯೋತಿಷ್ಯ'

**ನೂತನ ಅಂಕಣ**

## ರೋಗಗಳಿಗೆ ಜ್ಯೋತಿಷ್ಯ ಪರಿಹಾರ ಮಾರ್ಗದರ್ಶನದ ಪ್ರಾಯೋಗಿಕ ಅಂಕಣ

ಜ್ಯೋತಿಷ್ಯವು ಒಂದು ವಿಜ್ಞಾನ ಎಂದು ಕೆಲವರು ಹೇಳಿದರೆ, ಹಲವರು ಅದು ವಿಜ್ಞಾನವೇ ಅಲ್ಲ ಎಂದು ವಾದಿಸುತ್ತಾರೆ. ಈ ಬಗ್ಗೆ ನಿಖರವಾಗಿ ನಮಗೂ ತಿಳಿದಿಲ್ಲ. ಹಾಗಾಗಿ ನಿಮ್ಮ ನೆರವಿನೊಂದಿಗೆ ಜ್ಯೋತಿಷ್ಯದ ಸತ್ಯಾಸತ್ಯತೆಯನ್ನು ಪರೀಕ್ಷಿಸುವ ಒಂದು ಪುಟ್ಟ ಪ್ರಯೋಗ, ಈ ಹೊಸ ಅಂಕಣ.

ನಿಮಗೆ ಅಥವಾ ನಿಮ್ಮವರಿಗೆ ಇರಬಹುದಾದ ರೋಗಗಳ ಬಗೆಗೆ ಜ್ಯೋತಿಷ್ಯದ ಮೂಲಕ ಪರಿಹಾರ ಬೇಕಾಗಿದ್ದರೆ ಅಥವಾ ಈ ಯುಗಾದಿಯಿಂದ ಮುಂದಿನ ಯುಗಾದಿಯವರೆಗಿನ ನಿಮ್ಮ ಆರೋಗ್ಯ ಭವಿಷ್ಯ ತಿಳಿಯಬೇಕಾಗಿದ್ದರೆ, ನಿಗದಿತ ಫಾರಂ ಭರ್ತಿ ಮಾಡಿ ನಮಗೆ ಕಳುಹಿಸಿ.

---

ನಿಮ್ಮ ಪ್ರಶ್ನೆಗೆ ಉತ್ತರಿಸಲಿದ್ದಾರೆ

**ವಿದ್ವಾನ್ ಶ್ರೀರಾಮಚಂದ್ರ ಶರ್ಮ ತ್ಯಾಗಲಿಯವರು**

'ಆರೋಗ್ಯ ಜ್ಯೋತಿಷ್ಯ' - ಮೇ ೧೯೯೭

೧. ಹೆಸರು..............................................................................................................

೨. ಹೆಸರಿನ ಪ್ರಕಟಣೆ ಬೇಡವಾಗಿದ್ದರೆ ನಿಮ್ಮ ಸಂಕೇತ ನಾಮ.........................................................................

೩. ವಿಳಾಸ ..........................................................................................................

..........................................................................................................

೪. ಲಿಂಗ : ಸ್ತ್ರೀ............................ ಪುರುಷ ..........................

೫. ಜನ್ಮ ದಿನಾಂಕ :........................................................ ದಿನ.....................................

೬. ಜನ್ಮ ಸಮಯ ........................................ ಗಂಟೆ.......................................... ನಿಮಿಷ

೭. ಜನ್ಮ ಸ್ಥಳ.............................ಗ್ರಾಮ. ..................................ತಾಲ್ಲೂಕು ...............................................ಜಿಲ್ಲೆ.................................

೮. ನಿಮಗೇನು ಬೇಕು ? (ಒಂದನ್ನು ಮಾತ್ರ ಆರಿಸಿ) : ★ ರೋಗ ಚಿಕಿತ್ಸಾ ಭವಿಷ್ಯ ☐ ★ ವಾರ್ಷಿಕ ಆರೋಗ್ಯ ಭವಿಷ್ಯ ☐

೯. ರೋಗ ಚಿಕಿತ್ಸಾ ಭವಿಷ್ಯವಾದರೆ, ರೋಗದ ಹೆಸರು..............................................................

೧೦. ರೋಗಗಳಿಗೆ ಜ್ಯೋತಿಷ್ಯದ ಮೂಲಕ ಪರಿಹಾರ ಮಾರ್ಗದರ್ಶನ ನೀಡುವ ಈ ಪ್ರಯೋಗದಲ್ಲಿ ನಾನು ಸ್ವಇಚ್ಛೆಯಿಂದ ಭಾಗವಹಿಸುತ್ತಿದ್ದೇನೆ. ಇಲ್ಲಿನ ಫಲಿತಾಂಶಗಳನ್ನು ಸೈದ್ಧಾಂತಿಕವಾಗಿ ಮಾತ್ರ ಸ್ವೀಕರಿಸುತ್ತೇನೆ. ನಂತರ ಜ್ಯೋತಿಷ್ಯದ ಫಲಾಫಲಗಳ ಬಗ್ಗೆ ಯಾವುದೇ ಪೂರ್ವಾಗ್ರಹವಿಲ್ಲದೇ ಉತ್ತರವನ್ನು ಬರೆಯುತ್ತೇನೆಂದು ಈ ಮೂಲಕ ಪ್ರಮಾಣ ಮಾಡುತ್ತಿದ್ದೇನೆ.

ಸ್ಥಳ.............................

ದಿನಾಂಕ......................... ಸಹಿ

---

### ನಿಯಮಗಳು

೧. ಪ್ರಶ್ನೆಗಳನ್ನು ನಿಗದಿತ ಫಾರಂನಲ್ಲಿಯೇ ಕಳುಹಿಸಬೇಕು.
೨. ಇದೊಂದು ಪ್ರಯೋಗ ಮಾತ್ರ. ಜ್ಯೋತಿಷ್ಯದ ಫಲಿತಾಂಶವನ್ನು ಸೈದ್ಧಾಂತಿಕವಾಗಿ ಮಾತ್ರ ಸ್ವೀಕರಿಸಬೇಕು.
೩. ಫಲ ಜ್ಯೋತಿಷ್ಯದಲ್ಲಿ ಸೂಚಿಸಿರುವ ಅವಧಿ ಮುಗಿದ ನಂತರ, ಜ್ಯೋತಿಷ್ಯವು ನಿಜವಾಯಿತೆ? ಸುಳ್ಳಾಯಿತೆ? ಎಂಬುದನ್ನು ನಮಗೆ ಬರೆದು ತಿಳಿಸಬೇಕು.
೪. ಈ ಬಗ್ಗೆ ಹೆಚ್ಚಿನ ಪತ್ರ ವ್ಯವಹಾರ, ವಾದ ವಿವಾದಗಳಿಗೆ ಅವಕಾಶವಿಲ್ಲ.
೫. ಒಂದು ವರ್ಷದ ನಂತರ, ನಮ್ಮಲ್ಲಿ ಪ್ರಕಟವಾದ ಫಲಿತಾಂಶವನ್ನು ಓದುಗರು ನೀಡಿದ ಉತ್ತರಗಳೊಡನೆ ಹೋಲಿಸಿ ನೋಡುತ್ತೇವೆ. ಪ್ರಕಟಿಸುತ್ತೇವೆ. ಆದುದರಿಂದ ಈ ಪ್ರಯೋಗದಲ್ಲಿ ಸಂಪೂರ್ಣ ಸಹಕಾರ ಕೊಡುವವರು ಮಾತ್ರ ಭಾಗವಹಿಸಬೇಕು.
೬. ನಿಮ್ಮ ಪತ್ರಗಳು ಮಾರ್ಚ್ ೨೫ರೊಳಗೆ ನಮಗೆ ತಲುಪಲಿ.

---

ನಮ್ಮ ವಿಳಾಸ

**ಜೀವನಾಡಿ 'ಆರೋಗ್ಯ ಜ್ಯೋತಿಷ್ಯ' ವಿಭಾಗ**

ದಿಕ್ಸೂಚಿ ಕಾರ್ಯಾಲಯ, ೯೪೦, ೮ನೇ 'ಬಿ' ಮೇನ್, ೩ನೆಯ ಸ್ಟೇಜ್, ೩ನೆಯ ಬ್ಲಾಕ್, ಬಸವೇಶ್ವರ ನಗರ, ಬೆಂಗಳೂರು-೫೬೦ ೦೭೯

| ರಸ ಪ್ರಶ್ನೆ | ವೈದ್ಯಕೀಯ ಕ್ವಿಜ್ | ರಸ ಪ್ರಶ್ನೆ |
|---|---|---|

ಇದೊಂದು 'ಟೂ-ಇನ್-ಒನ್' ಸ್ಪರ್ಧೆ! ಇವು ಆರೋಗ್ಯದ ಬಗ್ಗೆ ನಿಮಗಿರುವ ಸಾಮಾನ್ಯ ಜ್ಞಾನವನ್ನು ತಿಳಿಯಲು ನೆರವಾಗುತ್ತವೆ. ಹಾಗೆಯೇ ಸೂಕ್ತ ಉತ್ತರ ತಿಳಿದವರಿಗೆ ನೂರುರೂಪಾಯಿಗಳನ್ನು ತಂದುಕೊಡುತ್ತವೆ. ಇಲ್ಲಿ ೧೨ ಪ್ರಶ್ನೆಗಳಿವೆ. ಪ್ರಶ್ನೆಗಳು ಹೇಳಿಕೆ ರೂಪದಲ್ಲಿವೆ. ಈ ಹೇಳಿಕೆ ಸರಿಯಾಗಿದ್ದರೆ ಉತ್ತರದ ಬಾಕ್ಸ್‌ನಲ್ಲಿ ✓ ಚಿಹ್ನೆಯನ್ನು ಹಾಕಿ. ತಪ್ಪಾಗಿದ್ದರೆ x ಚಿಹ್ನೆಯನ್ನು ಬರೆಯಿರಿ.

## ನಿಯಮಗಳು :

೧. ಈ ಸ್ಪರ್ಧೆಯಲ್ಲಿ ವೈದ್ಯರಿಗೆ ಅವಕಾಶವಿಲ್ಲ.

೨. ಉತ್ತರಗಳನ್ನು ಇದೇ ಮುದ್ರಿತ ಪುಟದಲ್ಲಿ ಗುರುತಿಸಿ ಕಳುಹಿಸಿ. ನೆರಳು ಪ್ರತಿ (Xerox) ಯನ್ನು ಪರಿಗಣಿಸುವುದಿಲ್ಲ.

೩. ಅರೆಬರೆ ತುಂಬಿದ ಪತ್ರ ಅನರ್ಹವಾಗುತ್ತದೆ.

೪. ಪ್ರವೇಶ ಪತ್ರಕಳುಹಿಸಲು ಕಡೆಯ ದಿನಾಂಕ ಮಾರ್ಚ್ ೧೫,೧೯೯೭..

೫. ತೀರ್ಪುಗಾರರ ಆಯ್ಕೆ ಅಂತಿಮ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ.

ಸಂಪರ್ಕ ವಿಳಾಸ
ಜೀವನಾಡಿ ರಸಪ್ರಶ್ನೆ ವಿಭಾಗ
ದಿಕ್ಸೂಚಿ ಕಾರ್ಯಾಲಯ, ೯೪೦, ೮ನೇ 'ಬಿ' ಮೇನ್,
೩ನೆಯ ಸ್ಟೇಜ್, ೩ನೆಯ ಬ್ಲಾಕ್, ಬಸವೇಶ್ವರ ನಗರ,
ಬೆಂಗಳೂರು-೫೬೦ ೦೭೯

# ಜೀವನಾಡಿ ರಸ ಪ್ರಶ್ನೆ - ೧

೧. ಹಸಿ ಮಾಂಸದ ವಾಸನೆಯನ್ನು ಆಘ್ರಾಣಿಸು ವುದರ ಮೂಲಕ ಅದು ತಿನ್ನಲು ಯೋಗ್ಯವಾಗಿದೆ ಅಥವಾ ಇಲ್ಲ ಎಂದು ಹೇಳಲು ಸಾಧ್ಯವಿದೆ.

೨. ನಾವು ಕುಳಿತಿರುವಾಗ ಬೆನ್ನಿಗೆ ಎಷ್ಟು ಒತ್ತಡ ಬೀಳುತ್ತದೆಯೋ, ಅದಕ್ಕಿಂತಲೂ ಹೆಚ್ಚಿನ ಒತ್ತಡವು ನಿಂತಾಗ ಬೀಳುತ್ತದೆ.

೩. ನಾವು ನಡೆಯುವುದು ಎಂದರೆ, ಕೆಳಗೆ ಬೀಳುವ ಒಂದು ಕ್ರಿಯೆ.

೪. ದೇಹದ ತೂಕವನ್ನು ನಿಯಂತ್ರಣದಲ್ಲಿ ಇಟ್ಟು ಕೊಂಡಾಗ ದೀರ್ಘ ಕಾಲ ಬದುಕಬಹುದು.

೫. ಹ್ಯಾಲೋಜನ್ ಟೇಬಲ್ ಲ್ಯಾಂಪ್ ಚರ್ಮ ವನ್ನು ಸುಡಬಹುದು.

೬. ನಿಮ್ಮ ಕ್ರೀಡಾಸಾಮರ್ಥ್ಯವನ್ನು, ನಿಮ್ಮ ಸ್ನಾಯುತಂತುಗಳ ಸ್ವರೂಪವು ನಿರ್ಣಯಿಸುತ್ತದೆ.

೭. ಕೂದಲುದುರುತ್ತ ಬೋಳುತನ ಕಂಡು ಬರುವವರಲ್ಲಿ ಹೃದಯಾಘಾತ ಹೆಚ್ಚು ಸಂಭವಿಸ ಬಹುದು.

೮. ಒಂದು ಪ್ಲಾಸ್ಟಿಕ್ ಹಲಗೆಯ ಮೇಲಿರುವ ಬ್ಯಾಕ್ಟೀರಿಯಗಳಿಗಿಂತ ಹೆಚ್ಚಿನ ಬ್ಯಾಕ್ಟೀರಿಯಗಳು ಮಂದ ಹಲಗೆಯ ಮೇಲಿರುತ್ತವೆ.

೯. ಧೂಮಪಾನ ಮಾಡುವುದರಿಂದ ಕೆಲವು ರೀತಿಯ ರಕ್ತಾರ್ಬುದ ಬರುವ ಸಾಧ್ಯತೆಯು ಹೆಚ್ಚು.

೧೦. ಅತಿಕೊಬ್ಬಿನಂಶದಿಂದ ಕೂಡಿದ ಆಹಾರವು ನಮ್ಮ ದೇಹದ ವಿನಾವಣಾವ್ಯೂಹ (ಸೋಂಕಿನಿಂದ ರಕ್ಷಣೆ ಒದಗಿಸುವ ವ್ಯವಸ್ಥೆ Immune System) ವನ್ನು ನಿಗ್ರಹಿಸುತ್ತದೆ.

೧೧. ಕರುಳ ಅರ್ಬುದ ಬರದಂತೆ ತಡೆಯಲು ದಣಿಯುವಷ್ಟು ವ್ಯಾಯಾಮ ಮಾಡಬೇಕು.

೧೨. ಕಾಲಿನ ಉಗುರಿಗಿಂತ ಕೈ ಉಗುರುಗಳು ಬೇಗ ಬೆಳೆಯುತ್ತವೆ.

## ಪ್ರವೇಶ ಪತ್ರ

ಹೆಸರು.................................................................

ವಿಳಾಸ.................................................................

.................................................................

.................................................................

ವಯಸ್ಸು ...........ವಿದ್ಯಾರ್ಹತೆ.................... ಉದ್ಯೋಗ.......................

ನಾನು ಜೀವನಾಡಿ ಓದುವುದನ್ನು ಇಷ್ಟ ಪಡುತ್ತೇನೆ.

ಏಕೆಂದರೆ .................................................................

.................................................................

.................................................................

(ಹದಿನೈದು ಶಬ್ದಗಳಲ್ಲಿ ನಿಮ್ಮ ಅನಿಸಿಕೆಯನ್ನು ಬರೆಯಿರಿ)

ದಿನಾಂಕ : ..................

ಸ್ಥಳ : ......................

ಸಹಿ

## ರಸ ಪ್ರಶ್ನೆ - ೧ರ ಉತ್ತರಸೂಚಿ

| | |
|---|---|
| ೧ | |
| ೨ | |
| ೩ | |
| ೪ | |
| ೫ | |
| ೬ | |
| ೭ | |
| ೮ | |
| ೯ | |
| ೧೦ | |
| ೧೧ | |
| ೧೨ | |

# ಕಿವಿಯ ಕಾರ್ಯ ಮತ್ತು ಕಿವುಡುತನಕ್ಕೆ ಕಾರಣ

ಎಂ.ಎಸ್.ಜೆ.ನಾಯಕ್, ವಾಕ್ - ಶ್ರವಣ ತಜ್ಞರು.

ಕಿವಿಯು ಪ್ರಾಣಿಗಳಿಗಿಂತಲೂ ಮನುಷ್ಯನಿಗೆ ಹೆಚ್ಚು ಪ್ರಯೋಜನಕಾರಿ. ಮನುಸ್ಸು ಮತ್ತು ಉನ್ನತ ಬೌದ್ಧಿಕ ಚಟುವಟಿಕೆಗಳ ಅಭಿವೃದ್ಧಿಗೆ ಕಿವಿಯೇ ಮೂಲ ದ್ವಾರವಲ್ಲದೇ, ಮಾತು ಮಾನವನ ಏಕ ಸ್ವಾಮ್ಯಕ್ಕೊಳಪಡಲೂ ಶ್ರವಣ ಶಕ್ತಿಯೇ ಕಾರಣ ಕರ್ತೃ. ಕಿವಿಯ ಮತ್ತೊಂದು ಮಹತ್ವಪೂರ್ಣ ಕೊಡುಗೆಯೆಂದರೆ, ಮನುಷ್ಯ ಶ್ರವಣದಿಂದ ಪದಗಳಿಲ್ಲದ ಸಂಗೀತ ಭಾಷೆಯನ್ನು ಸೃಷ್ಟಿಸಿ, ಬೆಳೆಸಿ ನೇರ ವಾಗಿ ಮಾನವನ ಬೌದ್ಧಿಕ, ಮಾನಸಿಕ ಮತ್ತು ಲಲಿತ ಕಲೆಯೊಂದಿಗೆ ಮಾತನಾಡುವ ನೇರ ಸಂಪರ್ಕವಿಟ್ಟು ಕೊಂಡಿದ್ದಾನೆ. ಪಂಚೇಂದ್ರಿಯಗಳಲ್ಲಿ ಈ ಅದ್ಭುತ ಶ್ರವಣೇಂದ್ರಿಯವೂ ಒಂದು. ಶ್ರವಣ ವ್ಯವಸ್ಥೆಯಲ್ಲಿ ಶ್ರವಣ ಮತ್ತು ಸಮತೋಲದ ಅಂಗಗಳಿವೆ, ಕಿವಿ ಯನ್ನು ಹೊರಕಿವಿ,ನಡುಕಿವಿ ಮತ್ತು ಒಳಕಿವಿ ಎಂದು ಮೂರು ಪ್ರಮುಖ ಭಾಗಗಳಾಗಿ ವಿಂಗಡಿಸಬಹುದು. (ಪ್ರತಿಯೊಂದು ನಿರ್ದಿಷ್ಟ ಕಾರ್ಯದಲ್ಲಿ ಪಾಲ್ಗೊಳ್ಳು ತ್ತವೆ). ಹೊರಗೆ ಕಾಣುವ ಕಿವಿಯ ಆಲೆಯು ಶಬ್ದ ಗಳನ್ನು ಸಂಗ್ರಹಿಸಿ ನಾಳಿಕೆಯ ಒಳತುದಿಯಲ್ಲಿರುವ ತಮಟೆಗೆ ಒಯ್ಯುತ್ತದೆ. ಈ ನಾಳಿಕೆಯಲ್ಲಿರುವ ಸೂಕ್ಷ್ಮ ಗ್ರಂಥಿಗಳಿಂದ ಸ್ರವಿಸುವ ಅಂಟುದ್ರವ ಮತ್ತು ಕೂದಲು ಧೂಳು ಕಣ ಮತ್ತು ಕೀಟಗಳನ್ನು ಹಿಡಿದಿರಿಸಿ ಕಾಲುವೆ ಯನ್ನು ರಕ್ಷಿಸುತ್ತವೆ. ಈ ಹೊರಕಿವಿ ನಾಳಿಕೆಯ ತುದಿಯಲ್ಲಿ ಕಪಾಲ ಮೂಳೆಗಳ ಸುತ್ತ ಅಂಟಿಕೊಂಡಿ ರುವ ತಮಟೆಯು ಒಳಬರುವ ಶಬ್ದದಲೆಗಳಿಂದ ಕಂಪನಕ್ಕೊಳಗಾಗುತ್ತದೆ.

ಇದರಿಂದ ಕರ್ಣಪಟಲಕ್ಕೆ ಹೊಂದಿಕೊಂಡಂತಿರುವ ಮಧ್ಯಕಿವಿಯ ಬಡಿಕಿಮೂಳೆ, ಅಡಿಕೆ ಮೂಳೆ ಮತ್ತು ರಿಕಾಪು ಎಂಬ ಮೂರು ಕಿರು ಮೂಳೆಗಳ ಸರಪಳಿ ಸೇತುವೆಯ ಚಾಲನೆಯುಂಟಾಗುತ್ತದೆ. ಇಡೀ ಶರೀರದಲ್ಲಿಯೇ ಅತಿಸಣ್ಣದಾದ ಕುದುರೆಲಾಳದಂತಿರುವ ಈ ಮೂರನೇ ರಿಕಾಪು ಮೂಳೆಯು ಮಧ್ಯ ಕಿವಿ ಮತ್ತು ಒಳಕಿವಿಯ ನಡುವಿನ ಅಂಡಾಕಾರದ ಕಿಟಕಿಯಲ್ಲಿ ಕುಳಿತಿರುತ್ತದೆ. ಈ ಜಾಲಂಧರವು ಎಲುಬು ಸರಪಳಿ ಸೇತುವೆಯ ಚಾಲನೆಯಿಂದ ಪ್ರಚೋದಿಸಲ್ಪಟ್ಟು ಕಂಪನಕ್ಕೊಳಪಟ್ಟಾಗ, ಶಬ್ದವು ಒಳಕಿವಿಯ ದ್ರವದಲ್ಲಿ ಅಲೆಗಳ ರೂಪದಿಂದ ಕರ್ಣಶಂಖದ, ಶ್ರವಣೇಂದ್ರಿಯವನ್ನು ತಲುಪುತ್ತದೆ. ಈ ಅಪೂರ್ವ ಶ್ರವಣೇಂದ್ರಿಯ ದ್ರವ್ಯತಳದ ಪೊರೆಯಲ್ಲಿ ಸಾಲು ಸಾಲಾಗಿ ಹುದುಗಿರುವ ರೋಮ ದಂಥ ಸಾವಿರಾರು ಇಂದ್ರಿಯ ಅಣುಕೋಶಗಳು ಮತ್ತು ಸಂರಕ್ಷಣ ಕೋಶಗಳು ಅಲೆಗಳಂತೆ ಕಾರ್ಯಾಚರಣೆಯಿಂದ ಬಗ್ಗಿ ವಾಲುವುವು. ತನ್ಮೂಲಕ ಅಣುಕೋಶ ಗಳಿಂದ ಹೊರಡುವ ಟೆಲಿಫೋನ್ ತಂತಿಗಳಂತಿರುವ ಶ್ರವಣನರದ ನರ ಸಂದೇಶಗಳು ಮೆದುಳಿನ ಶ್ರವಣ ಕೇಂದ್ರವನ್ನು ತಲುಪುತ್ತವೆ. ಮೆದುಳಿನ ಶ್ರವಣ ಕೇಂದ್ರವು ಆ ನರ ಸಂದೇಶಗಳನ್ನು ಮೆದುಳು ಸುಲಭವಾಗಿ ಗ್ರಹಿಸಬಲ್ಲ ಅರ್ಥಪೂರ್ಣ ಶಬ್ದ ರೂಪಕ್ಕೆ ಅನುವಾದಿಸುತ್ತದೆ.

ಹೀಗೆ ನಾವು ಮಾತನಾಡಿದ ಶಬ್ದ ಇಲ್ಲವೇ ಪರಿ ಸರದ ಇನ್ನಾವುದೇ ಶಬ್ದ ಗದ್ದಲಗಳನ್ನು ನಮಗರಿ ವಿಲ್ಲದೆಯೇ ಕ್ಷಣಮಾತ್ರದೊಳಗೆ ಭಾಷಾಂತರಿಸುವ ಕ್ರಿಯೆಯೇ ಶ್ರವಣ ವ್ಯವಸ್ಥೆಯಲ್ಲಿ ಎಡೆಬಿಡೆಯಿಲ್ಲದೆ ಹೃದಯದಂತೆಯೇ ಕಾರ್ಯನಿರ್ವಹಣೆಯಾಗುತ್ತಿ ರುತ್ತದೆ.

ಒಳಕಿವಿಯು ಶ್ರವಣ ಮತ್ತು ಸಮತೋಲನ ಕಾಪಾಡುವ ಎರಡು ಪರಸ್ಪರ ಸಂಬಂಧಗಳನ್ನು ಹೊಂದಿದ ಅಂಗಗಳನ್ನೊಳಗೊಂಡಿದೆ. ದೇಹಭಂಗಿ ಮತ್ತು ಚಲನೆಯ ಸಮತೋಲನವನ್ನು ಕಾಪಾಡುವ ಗ್ರಾಹಕಗಳು ಮೂರು (ಅರ್ಧಚಂದ್ರಾಕೃತಿಯ) ಅರೆಸುತ್ತು ಕಾಲುವೆಗಳಲ್ಲಿವೆ. ಇವುಗಳಲ್ಲಿರುವ ಒಂದು ವಿಶಿಷ್ಟ ದ್ರವ್ಯ ನಡೆದಾಡುವ ಓಡುವ, ಏರುವ, ತಿರುಗುವ, ಹಾರುವ ಬೇರೆ ಬೇರೆ ಭಂಗಿ ಗಳನ್ನು ಗ್ರಹಿಸಿ ದೇಹದ ಚಲನೆಯಲ್ಲಿ ಯಾವುದೇ ಬದಲಾವಣೆಯಾ ದರೂ ಶ್ರವಣ ನರದ ಮೂಲಕ ಮಿದುಳಿಗೆ ದೇಹದ ಸಮತೋಲನವನ್ನು ಕಾಯುತ್ತವೆ.

ಚಿಕ್ಕವರಿಂದ-ಮುಪ್ಪಿನವರೆಗೆ (ಇಳಿವಯಸ್ಸಿನ ತನಕ) ಶ್ರವಣ ಶಕ್ತಿಯು ಈ ಕೆಳಕಂಡ ಕಾರಣಗಳಿಂದ ಹಾನಿಗೊಳಗಾಗಬಹುದು.

### ೧) ಮಧ್ಯಕಿವಿಯ ಸೋಂಕು (ಕಿವಿ ಸೋರುವಿಕೆ)

ಕಿವಿ ಸೋರುವವರಲ್ಲಿ ತಮಟೆಯು ಒಡೆದು ರಂಧ್ರವೇರ್ಪಟ್ಟಿರುವ ಕಾರಣ ಇಲ್ಲವೆ ಮಧ್ಯ ಕಿವಿಯ ಮೂರು ಎಲುಬುಗಳು ಸೋಂಕಿನಿಂದ ಆವರಿಸಲ್ಪಟ್ಟು ಪೂರ್ತಿಯಾಗಿ, ಇಲ್ಲವೇ ಅರ್ಧಂಬರ್ಧವಾಗಿ ನಾಶ ವಾಗಿದ್ದಲ್ಲಿ ಹೊರಕಿವಿಯಿಂದ



ಒಳಕಿವಿಗೆ ಶಬ್ದ ಪ್ರಸಾರ ವಾಗದ ಕಾರಣ ತಾತ್ಕಾಲಿಕ ಕಿವುಡುತನವೇರ್ಪಡು ತ್ತದೆ. ಸೂಕ್ತ ಚಿಕಿತ್ಸೆ ನೀಡದಿದ್ದಲ್ಲಿ, ಕ್ರಮೇಣ ಶಾಶ್ವತ ನರಸಂಬಂಧ ಕಿವುಡುತನ ಉಂಟಾಗುತ್ತದೆ.

**೨) ಕಿವಿಯ ಗಡಸು ರೋಗ**

ನಿಧಾನಗತಿಯಲ್ಲಿ ಪ್ರಾಯದಲ್ಲಿ ಕಾಣಿಸಿಕೊಳ್ಳುವ ಮಧ್ಯಕಿವಿಯ ಖಾಯಿಲೆಯೇ ರಿಕಾಪು ಎಲುಬಿನ ಗಡಸುರೋಗ. ತಂದೆತಾಯಿಗಳಿಬ್ಬರಲ್ಲಿ ಯಾರಾದರೂ ಈ ರೋಗಕ್ಕೆ ಗುರಿಯಾಗಿದ್ದರೆ, ಅವರ ಮಕ್ಕಳಲ್ಲಿ ಈ ನ್ಯೂನ್ಯತೆ ಕಾಣುವ ಸಂಭವ ಜಾಸ್ತಿ. ಕಿವುಡುತನದ ಜೊತೆಗೆ, ಕಿವಿಯಲ್ಲಿ ಮೊರೆತ ಕಾಣಿಸಿಕೊಳ್ಳಬಹುದು. ಗರ್ಭಿಣಿ ಸ್ತ್ರೀಯರಲ್ಲಿ ಈ ರೋಗ ಉಲ್ಬಣಗೊಂಡು ಹೆರಿಗೆ ನಂತರ ಕಿವುಡುತನ ತೀವ್ರ ಸ್ವರೂಪ ಪಡೆಯಬಹುದು. ಮುಖ್ಯವಾಗಿ ಶಬ್ದ-ಗದ್ದಲ ಅಧಿಕವಿರುವ, ಹಗಲು ವೇಳೆಯಲ್ಲಿ ಸಂತೇಪೇಟೆ ಬಸ್ ನಿಲ್ದಾಣದಂಥ ಪರಿಸರದಲ್ಲಿ ಚೆನ್ನಾಗಿ ಕೇಳಿಸಿಕೊಳ್ಳುತ್ತಾರೆ. ಹಾಗೂ ನಿಶ್ಯಬ್ಧ ಸಮಯಗಳಲ್ಲಿ, ರಾತ್ರಿ ವೇಳೆಯಲ್ಲಿ ಕೇಳಿಸುವುದು ಕಡಿಮೆ.

**೩) ವಂಶಪಾರಂಪರ್ಯದ ಕಿವುಡುತನ : ತಳಿಸಂಬಂಧ ಕಿವುಡುತನ**

ತಂದೆ ತಾಯಿಗಳ ಅಥವಾ ಅವರ ವಂಶ ತಳಿಗಳ ಹಲವಾರು ಹಿಂದಿನ ಪೀಳಿಗೆಗಳಲ್ಲಿನ ಜನಿಕ ದೋಷಗಳು ಮಕ್ಕಳು-ಮರಿಮಕ್ಕಳೂ ಇಲ್ಲವೆ ಮುಂದಿನ ಯಾವ ಪೀಳಿಗೆಗಳಲ್ಲಾದರೂ ವಂಶಪಾರಂಪರ್ಯ ವಾಗಿ ಕೆಲವು ವ್ಯಕ್ತಿಗಳಲ್ಲಿ ಕಾಣಿಸಿಕೊಳ್ಳಬಹುದು.

**೪) ಶಬ್ದ ಮಾಲಿನ್ಯ :**

ವರ್ಷಗಟ್ಟಲೇ ಸತತವಾಗಿ ೭೦ ರಿಂದ ೮೦ ಡೆಸಿಬಲ್‌ಗಿಂತ ತೀವ್ರಮಟ್ಟದ ಶಬ್ದ-ಗದ್ದಲಗಳ ಒತ್ತಡಕ್ಕೆ ಕರ್ಣಶಂಖದ ಇಂದ್ರಿಯ ಅಣು ಕೋಶಗಳು ಹಾಗೂ ಸಂರಕ್ಷಣ ಕೋಶಗಳು ಶರಣಾಗಿ ನಶಿಸಿ ಹೋಗುವ ಕಾರಣದಿಂದ ಕಾಲಕ್ರಮೇಣ ಶಾಶ್ವತ ಕಿವುಡುತನ ಉಂಟಾಗುತ್ತದೆ. (ಕೈಗಾರಿಕ ಕ್ಷೇತ್ರದ ಯಂತ್ರೋಪಕರಣಗಳು, ಪಾಪ್‌ಸಂಗೀತ, ವಾಕ್ ಮನ್ ಹಾಗೂ ವಾಹನದಿಂದ ಬರುವ ಹಾರನ್ ಶಬ್ಧಗಳು ಮತ್ತು ದೈನಂದಿನ ಸದ್ದು ಗದ್ದಲಗಳ ಮೊತ್ತ ಪರಿಣಾಮವಾಗಿ).

**೫) ಹುಟ್ಟು ವಿಕಲಾಂಗತೆ**

ಬಸಿರಿನಲ್ಲಿ ತಾಯಿಗೆ ತಗಲುವ ರೋಗಗಳು ಅಥವಾ ಹುಟ್ಟಿದ ನಂತರ ಮಗುವಿಗೆ ತಗಲುವ ಸೋಂಕಿನಿಂದ ಮಂಗಬಾವಿನ ವೈರಸ್ ಖಾಯಿಲೆ, ಮಲೇರಿಯ, ಟೈಫಾಯಿಡ್ ರೋಗಗಳು, ಕಾಮಾಲೆ ರೋಗ, ಇಲ್ಲವೆ ಈ ಖಾಯಿಲೆಗಳನ್ನು ಗುಣಪಡಿಸಲು ಉಪಯೋಗಿಸುವ ಔಷಧಗಳ ಕಾರ್ಯಪ್ರತಿ ಕೂಲತೆಯಿಂದ ಕಿವುಡುತನ ಉಂಟಾಗುವ ಸಂಭವಗಳಿವೆ (ಗರ್ಭನಿರೋಧಕ ಔಷಧಿಗಳಿಂದಲೂ). ಹುಟ್ಟು ವಿಕಲಾಂಗತೆಯಲ್ಲಿ ಶ್ರವಣ ವ್ಯವಸ್ಥೆಯ ಕರ್ಣಪಟಲ, ಕಿರು ಎಲುಬುಗಳ ಕರ್ಣಶಂಖದೊಳಗಿನ ಶ್ರವಣೇಂದ್ರಿಯ ಅಪೂರ್ಣವಾಗಿ ರೂಪುಗೊಂಡು ಕಾರ್ಯ ನಿರ್ವಹಿಸುತ್ತಿರಬಹುದು.

**೬) ಅಪಘಾತ :**

ತಲೆ ಅಥವಾ ಕಿವಿಯ ಅಪಘಾತದಿಂದ ಕರ್ಣ ಪಟಲ, ಕರ್ಣಅಸ್ಥಿಗಳು ಹಾಗೂ ಶ್ರವಣೇಂದ್ರಿಯ ಮತ್ತು ಶ್ರವಣ ನರದ ತಂತುಗಳು ಹಾನಿಗೊಳಗಾಗ ಬಹುದು.

**೭) ಮುಪ್ಪು ಕಿವುಡು :**

ಸ್ವಾಭಾವಿಕ ಮುಪ್ಪಿನಿಂದ ಇಳಿವಯಸ್ಸಿನಲ್ಲಿ ದೇಹದ ಇತರ ಅಂಗಗಳ ಸಾಮರ್ಥ್ಯ ಕುಗ್ಗುವಂತೆ (ದೃಷ್ಠಿದೋಷದಂತೆಯೇ) ಶ್ರವಣ ಇಂದ್ರಿಯ ಜೀವಕೋಶಗಳು- ಸಂರಕ್ಷಣ ಕೋಶಗಳ ಸವಕಳಿಯಿಂದ ಶ್ರವಣ ಸಾಮರ್ಥ್ಯ, ಕಾಲ ಕ್ರಮೇಣ ಕಡಿಮೆ ಯಾಗಿ ಶಾಶ್ವತವಾಗಿ ಅರಿವು ಕಿವುಡು ಬರುತ್ತದೆ. ಈ ರೀತಿಯಿಂದ ಉಂಟಾದ ಶ್ರವಣ ಕೊರ ತೆಯು ಎರಡು ಕಿವಿಗಳಲ್ಲಿಯೂ ಏಕ ಸ್ವರೂಪದ್ದಾಗಿಯೂ ಇದ್ದು ಗರಿಷ್ಠ ಶೃತಿಗಳನ್ನು ಹಾನಿಗೊಳ ಪಡಿಸಿ, ಮಾತು ಮತ್ತು ಧ್ವನಿ ಅಸ್ಪಷ್ಟವಾಗಿ ಕೇಳು ವಂತೆ ಮಾಡುತ್ತದೆ. ಹಲವು ಜನರಿಗೆ ಸಮೀಪದ ಗಂಡಸರ ಧ್ವನಿ ಮತ್ತು ಇತರ ಸದ್ದು ಗದ್ದಲಗಳು ಕೇಳಿ ಸುತ್ತಿದ್ದರೂ ಹೆಂಗಸರ ಮತ್ತು ಮಕ್ಕಳ ಮಾತು (ಗರಿಷ್ಠ ಶೃತಿಯಿಂದ ಕೂಡಿದ ಕಾರಣ) ಕೇಳಿದಂತಾಗಿ ಮನೆಯ ಹೆಂಗಸರು ಅವರನ್ನು ಅಲಕ್ಷಿ ಸುತ್ತಿರು ವರೆಂಬ ತಪ್ಪು ಅಭಿಪ್ರಾಯಕ್ಕೊಳಗಾಗ ಬಹುದು.

**೮) ಶ್ರವಣೇಂದ್ರಿಯದ ಖಾಯಿಲೆಯ ಕಿವುಡುತನ :**

ಮೀನಿಯರ್ ಲಕ್ಷಣಾವಳಿಯಲ್ಲಿ ಆರೋಗ್ಯವಂತ ವ್ಯಕ್ತಿಯಲ್ಲಿ ಇದ್ದಕ್ಕಿದ್ದಂತೆ ತಲೆ ಸುತ್ತುವಿಕೆಯೊಂದಿಗೆ (ಒಂದೆರಡು ನಿಮಿಷ ಅಲ್ಲದೆ ಕೆಲವು ಗಂಟೆಗಳ ಕಾಲ) ಪದೇ ಪದೇ ಹಿಂಸೆ ಕೊಡುವ ಈ ವ್ಯಕ್ತಿಗಳಲ್ಲಿ (ಶ್ರವಣೇಂದ್ರಿಯದೊಳಗಿನ ಲವಣಾಂ ಶಗಳಲ್ಲಿ ಸೋಡಿಯಂ ಉಪ್ಪಿನ ಅಂಶ ಅಧಿಕವಾ ಗುವ ಸೂಚನೆಗಳಿವೆ). ಕಿವಿಯಲ್ಲಿ ಗುಂಯ್ ಗುಟ್ಟುವ ಮೊರೆತದೊಂದಿಗೆ ತಾತ್ಕಾಲಿಕವಾಗಿ ಶ್ರವಣ ಕೊರತೆಯೂ ಕಂಡು ಬರುವುದುಂಟು. ಕಾಲಕ್ರಮೇಣ ಶಾಶ್ವತ ಕಿವುಡುತನ ಹಾಗೂ ದೊಡ್ಡ ಸದ್ದು-ಗದ್ದಲ ಗಳನ್ನು ಸಹಿಸಲಾರದೆ ಆಯಾಸ ಗೊಳ್ಳುವ ಪರಿಸ್ಥಿತಿಯನ್ನು ಅನುಭವಿಸುತ್ತಾರೆ.

**೯) ಶ್ರವಣ ನಂಜಿನ ಕಿವುಡು :**

ಕೆಲವೊಮ್ಮೆ ಖಾಯಿಲೆ ಬಿದ್ದಾಗ ನಾವು ಉಪಯೋಗಿಸುವ ಹಲವು ತರಹದ ಔಷಧಿಗಳು (ಉದಾ ಹರಣೆಗೆ ಪೆನ್ಸಿಲಿನ್, ಜೆಂಟಾಮೈಸಿನ್, ಕ್ವಿನೈನ್) ಕೆಲವರಲ್ಲಿ ಶ್ರವಣೇಂದ್ರಿಯಕ್ಕೆ ನಂಜಾಗಿ ಕಿವುಡು ತನವನ್ನುಂಟು ಮಾಡುವುದಾಗಿ ಖಚಿತವಾಗಿ ತಿಳಿದು ಬಂದಿದೆ. ಇಷ್ಟಲ್ಲದೆ ಕಾಲ ಕ್ರಮೇಣ ಅಮಲು ಸಾಮ ಗ್ರಿಗಳು ಮದ್ಯಪಾನ, ಧೂಮಪಾನ ವಿಟಮಿನ್ ಕೊರತೆ (ಇ-ಅನ್ನಾಂಗ) ಪೌಷ್ಟಿಕಾಂಶದ ಕೊರತೆ, ಎಲ್ಲವೂ ಸೂಕ್ಷ್ಮ ಶ್ರವಣ ವ್ಯವಸ್ಥೆ ಮತ್ತು ಸಾಮರ್ಥ್ಯದ ಮೇಲೆ ಪರಿಣಾಮ ಬೀರುವುದೆಂಬುದರಲ್ಲಿ ಸಂದೇಹವಿಲ್ಲ.

**★ಕಾಂಟ್ಯಾಕ್ಟ್ ಲೆನ್ಸ್ ಹುಶಾರ್ !**

ಕಾಂಟ್ಯಾಕ್ಟ್ ಲೆನ್ಸ್ ಉಪಯೋಗಿಸುವವರ ಕಣ್ಣಿನಲ್ಲಿ ಹುಣ್ಣು ಆಗಿ, ಕಣ್ಣು ಕುರುಡಾಗುವ ಸಾಧ್ಯತೆ ಇದೆ. ಇದಕ್ಕೆ ಕಾರಣವೇನು ? ಅಜಾಗ್ರತೆಯಲ್ಲ. ಇದಕ್ಕೆ ಕಾರಣ ಲೆನ್ಸ್ ಶುದ್ಧ ಮಾಡಲು ಬಳಸುವ ದ್ರವದಲ್ಲಿ ಸೂಕ್ಷ್ಮಕ್ರಿಮಿಗಳು ತಂಗುವುದೇ ಆಗಿದೆ.

ಈ ಕ್ರಿಮಿಗಳು ಕಣ್ಣುಗಳನ್ನು ಕುರುಡಾಗಿಸುವ ಗುಣ ಹೊಂದಿದವುಗಳಾಗಿವೆ ಎಂಬುದನ್ನು ಲಂಡನ್ನಿನ 'ಮೂರ್‌ಫೀಲ್ಡ್' ಆಸ್ಪತ್ರೆಯ ಸಂಶೋಧನಾ ವರದಿ ತಿಳಿಸಿದೆ.

ಆದ್ದರಿಂದ ಉಪಯೋಗಿಸುವ ಲೆನ್ಸ್ ಶುದ್ಧ ಪಡಿಸುವಾಗ ಎಚ್ಚರ ವಹಿಸಿ. ಸಾಕಷ್ಟು ಪ್ರಮಾಣದಲ್ಲಿ ಹೈಡ್ರೋಜನ್‌ಪೆರಾಕ್ಸೈಡ್ ಬಳಸಿ ಶುದ್ಧೀಕರಿಸಿ.

**★ನರಪೇತಲರ ಭೂತ !**

ಸಿಗರೇಟು ಸೇದುವುದರಿಂದ ಬರುವ ಶ್ವಾಸ ಕೋಶದ ಕ್ಯಾನ್ಸರ್ ಕಾಯಿಲೆಯು ದಪ್ಪಗಿರುವವರಿಗಿಂತ ತೆಳ್ಳಗಿನವರನ್ನೇ ಹೆಚ್ಚಾಗಿ ಕಾಡಿಸುತ್ತದೆ. ಆದ್ದ ರಿಂದ ನರಪೇತಲರೇ, ಸಿಗರೇಟ್ ನಿಮ್ಮನ್ನು ಬೇಗ ಕೊಲ್ಲುತ್ತದೆಂಬುದು ನೆನಪಿರಲಿ.

# ಅಗಡಿಯಲ್ಲಿ ಜ್ವರದ ತಾಂಡವ

ಅಗಡಿ ಒಂದು ಸಣ್ಣ ಹಳ್ಳಿ, ಇದು ಹಾವೇರಿ ತಾಲ್ಲೂಕಿಗೆ ಸೇರಿದೆ. ಅಂದರೆ ಧಾರವಾಡ ಜಿಲ್ಲೆಯಲ್ಲಿ ಬರುವುದು. ಸುಮಾರು ನವೆಂಬರ್ ತಿಂಗಳಿನ ಕೊನೆಯ ಎರಡು ವಾರಗಳಲ್ಲಿ ಅಗಡಿಯ ಜನರು ಒಂದು ಪ್ರಕಾರದ ಜ್ವರದಿಂದ ಬಳಲ ಹತ್ತಿದರು. ಪ್ರತಿಯೊಂದು ಓಣಿಯಲ್ಲಿ ಹತ್ತಾರು ಜನರು ಜ್ವರದಿಂದ ಹಾಸಿಗೆ ಹಿಡಿದರು. ಜ್ವರವು ಜನರನ್ನು ಜರ್ಜರಿತರನ್ನಾಗಿಸಿತು. ಆಗ ದೆಹಲಿಯಲ್ಲಿ ಡೆಂಗು ಜ್ವರವು ಹಾವಳಿ ನಡೆಸಿತ್ತು. ಅಲ್ಲಿಂದ ಅದು ಬೇರೆ ಬೇರೆ ಪ್ರಾಂತ್ಯಗಳಿಗೆ ಕೈ ಚಾಚತೊಡಗಿತ್ತು. ಬೆಂಗಳೂರಿನಲ್ಲಿ ಒಂದೆರಡು ವ್ಯಕ್ತಿಗಳು ಮರಣಹೊಂದಿದಾಗ, ಇಡೀ ಕರ್ನಾಟಕ ತಲ್ಲಣಗೊಂಡಿತು. ಡೆಂಗು ಮಾರಿ ನಮ್ಮಲ್ಲಿಗೂ ಬಂದೇ ಬಿಟ್ಟಿತು ಎಂದು ಹೆದರಿಕೆ ಹೆಪ್ಪುಗಟ್ಟಿತು. ವೈದ್ಯ ಸಮೂಹವೆಲ್ಲ ಡೆಂಗು ಮಾರಿಯನ್ನು ಹೇಗೆ ಎದುರಿಸ ಬೇಕು ಎಂದು ಯೋಚಿಸ ತೊಡಗಿತು. ಸರಕಾರಿ ಹಾಗೂ ಅರೆಸರಕಾರಿ ಸಂಸ್ಥೆಗಳು ಗಲಿಬಿಲಿಗೊಂಡವು. ಅಗಡಿಯ ಜನರನ್ನು ಪೀಡಿಸುತ್ತಿರುವ ಜ್ವರ ಡೆಂಗು ಜ್ವರವೇ ಇರಬಹುದೆಂದು ಹಲವು ವೈದ್ಯರು ಅಭಿಪ್ರಾಯ ವ್ಯಕ್ತಪಡಿಸಿದರು.

ಆಗ ಜಿಲ್ಲಾ ವೈದ್ಯಾಧಿಕಾರಿಗಳಾದ ಡಾ। ಗಾಯಕವಾಡ ಅವರು ನೇರವಾಗಿ ಕಿಮ್ಸ್ ನಿರ್ದೇಶಕರ ಬಳಿ ಬಂದು ಸಹಾಯಕ್ಕಾಗಿ ವಿನಂತಿಸಿದರು. ಕಿಮ್ಸ್ ನಿರ್ದೇಶಕರು ತಕ್ಷಣವೇ ಒಂದು ತಂಡವನ್ನು ಮಾಡಿ, ಈ ತೊಂದರೆಯನ್ನು ವಿವರವಾಗಿ ಅಭ್ಯಸಿಸಲು ಆದೇಶ ವಿತ್ತರು. ತಂಡದ ನೇತಾರರೆಂದು ಡಾ. ಜಿ.ಎನ್. ಪ್ರಭಾಕರ ಅವರನ್ನು ನೇಮಿಸಿದರು. ತಂಡದ ಉಳಿದ ಪ್ರಮುಖರೆಂದರೆ ಡಾ. ಜೆ.ಎನ್. ಮಾಕಣ್ಣನವರ (ಪೆಥಾಲಜಿಸ್ಟ್) ಡಾ. ಎಮ್. ಆರ್. ಬೆಲ್ಲದ (ವೈದ್ಯರು) ಡಾ. ಆರ್. ವೈ. ದೊಡವಾಡ (ಸರ್ಜನರು) ಡಾ. ಎ. ಎಲ್. ಬೆಟದೂರ (ಫಿಜಿಶಿಯನ್‌ರು) ಹಾಗೂ ಡಾ. ಶಹಾಪೂರಕರು (ಮೈಕ್ರೋಬಯೋಲಜಿಸ್ಟ್) ಇದ್ದರು.

ಎಲ್ಲ ವೈದ್ಯರೂ ಸೇರಿ ತಾವು ನಡೆಸಬೇಕಾದ ಸಂಶೋಧನೆಯ ರೂಪ-ಹೊಳಹುಗಳನ್ನು ಚರ್ಚಿಸಿ ದರು. ಸಂಶೋಧನೆಗೆ ಬೇಕಾದ ಸಲಕರಣೆಗಳನ್ನೆಲ್ಲ ಸಂಗ್ರಹಿಸಿಕೊಂಡು ದಿನಾಂಕ ೩೦-೧೧-೯೬ರಂದು ಅಗಡಿಗೆ ಹೋದರು. ಅಲ್ಲಿ ಪ್ರತಿಯೊಬ್ಬ ರೋಗಿಯನ್ನು ಪರೀಕ್ಷಿಸಿದರು. ಸ್ಥಾನಿಕ ವೈದ್ಯರೊಡನೆ, ತಾಲ್ಲೂಕು ವೈದ್ಯರೊಡನೆ ಚರ್ಚಿಸಿದರು. ಊರೆಲ್ಲ ಸುತ್ತಿದರು. ಕೆರೆ, ಬಾವಿಗಳನ್ನು ನೋಡಿ ಬಂದರು. ರೋಗಿಗಳ ರಕ್ತ ಸಂಗ್ರಹಿಸಿ ಅದನ್ನು ಹಲವಾರು ಪರೀಕ್ಷೆಗಳಿಗೆ ಗುರಿಪಡಿಸಿದರು. ಊರಿನ ಬಾವಿಗಳ ನೀರನ್ನು ಮನೆಯಲ್ಲಿ ಶೇಖರಿಸಿಟ್ಟ ನೀರನ್ನೂ ತಪಾಸಣೆಗೆ ತೆಗೆದುಕೊಂಡರು.

ಒಟ್ಟಿನಲ್ಲಿ ೫೧ ಜನರು ರೋಗಕ್ಕೆ ಗುರಿಯಾಗಿದ್ದರು: ಅವರಲ್ಲಿ ೨೪ ಜನರು ವಯಸ್ಕರು, ೧೨ ಜನ ಮಕ್ಕಳು ಇದ್ದರು. ಬೇರೆ ತರದ ಕಾಯಿಲೆಯಿಂದ ಬಳಲುತ್ತಿದ್ದ ೬ ಜನ ಇದ್ದರು. ಮನೆ ಮನೆಗೆ ಹೋಗಿ ಪರೀಕ್ಷಿಸಿದಾಗ, ಮತ್ತೆ ೪ ಜನ ಜ್ವರದಿಂದ ಬಳಲುವುದು ಪತ್ತೆಯಾಯಿತು. ಅಗಡಿಯಿಂದ ಹಾವೇರಿ ಆಸ್ಪತ್ರೆಗೆ ಸೇರಿದವರು ೫ ಜನರಿದ್ದರು.

ಪರೀಕ್ಷಿಸಿದ ಒಟ್ಟು ರೋಗಿಗಳಲ್ಲಿ ಪ್ರತಿಶತ ೯೨ ರಷ್ಟು ಜನರಿಗೆ ಜ್ವರ ಬರುತ್ತಿತ್ತು. ಜ್ವರವು ಕ್ರಮೇಣ ಪ್ರಾರಂಭವಾಗಿತ್ತು. ಚಳಿ, ನಡುಗುವಿಕೆ, ಬೆವರುವಿಕೆ ಗಳು ಯಾರಲ್ಲಿಯೂ ಕಾಣಲಿಲ್ಲ. ಜ್ವರ ಪ್ರಾರಂಭವಾ ಗುವಾಗ ಪ್ರತಿಶತ ೭೬ ರಷ್ಟು ರೋಗಿಗಳಲ್ಲಿ ತಲೆನೋವು ವಿಪರೀತವಿತ್ತು. ಮೂಗು ಸೋರುವಿಕೆ, ಸೀನು ಒಬ್ಬರಲ್ಲಿಯೂ ಇರಲಿಲ್ಲ. ಮೆದುಳಿನ ಮಂಪರು ಪ್ರತಿಶತ೭೬ ರಷ್ಟು ಜನರಿಗೆ ಬಂದಿತ್ತು. ಸುಮಾರು ಅಷ್ಟೇ ಪ್ರಮಾಣದ ಜನರಲ್ಲಿ ಮಂದವಾದ ಭೇದಿಯೂ ಕಂಡಿತ್ತು. ಬೇರೆ ಯಾವ ತೊಂದರೆ ಗಳಿಂದ ರೋಗಿಗಳು ಬಂದಿರಲಿಲ್ಲ. ಜ್ವರವು ಒಂದೇ ಸಮನೆ ಇಡೀ ಹಗಲು ರಾತ್ರಿ ಇತ್ತು.

ಹೃದಯ ಬಡಿತವು ಸುಮಾರು ಪ್ರತಿಶತ ೬೦ ಜನ ರೋಗಿಗಳಲ್ಲಿ ಕುಗ್ಗಿತ್ತು. ಒಬ್ಬರಲ್ಲೂ, ಹಾಲ್ರಸಗ್ರಂಥಿ ಗಳು ಊದಿಕೊಂಡಿರಲಿಲ್ಲ. ಕಾಮಾಲೆಯಾಗಲೀ, ಬೇರೆ ತೊಂದರೆಯಾಗಲೀ ಇರಲಿಲ್ಲ. ಆದರೆ ಒಂದು ವಿಶೇಷ ಲಕ್ಷಣ ಬಹುತೇಕ ರೋಗಿಗಳೆಲ್ಲರಲ್ಲಿ ಕಂಡಿತ್ತು ಅದೆಂದರೆ ತ್ವಚೆಯಲ್ಲಿ ಚಿಕ್ಕ, ಚಿಕ್ಕ ರಕ್ತ ಒಸರುವಿಕೆಯ ಕಲೆಗಳಿದ್ದವು. ಇವುಗಳೊಡನೆ ಗಾದರಿಗಳೂ ಇದ್ದವು. ಅರ್ಧಕ್ಕಿಂತ ಹೆಚ್ಚು ರೋಗಿಗಳಲ್ಲಿ (೫೩%) ಪ್ಲೀಹ ಊದಿಕೊಂಡಿತ್ತು. ಮತ್ತು ಸ್ಪರ್ಶವೇದನೆ ತೋರಿತ್ತು.

ರೋಗಿಗಳ ರಕ್ತವನ್ನು ಪರೀಕ್ಷಿಸಿದಾಗ ಕೆಳಕಾಣಿಸಿದ ಸಂಗತಿಗಳು ಪ್ರಕಟಗೊಂಡವು.

೧. ಪ್ರತಿಶತ ೬೦ ಜನ ರೋಗಿಗಳಲ್ಲಿ ರಕ್ತದ ಶ್ವೇತ ಗೋಲಕಗಳು ಕಡಿಮೆಯಾಗಿದ್ದವು. ಯಾವ ರಕ್ತ ದಲ್ಲೂ ಮಲೇರಿಯಾ ಪರಾನ್ನಜೀವಿ ಕಾಣಲಿಲ್ಲ.

ಮೂತ್ರ ಹಾಗೂ ಮಲ ಪರೀಕ್ಷೆಗಳು ಯಾವ ಸೂಚನೆಯನ್ನು ಕೊಡಲಿಲ್ಲ.

ಆದರೆ ಇನ್ನೊಂದು ರಕ್ತ ಪರೀಕ್ಷೆ ಬಹಳ ಉಪಯುಕ್ತ ಸಂಗತಿಯನ್ನು ಹೊರಗೆಡಹಿತ್ತು. ಅದೆಂದರೆ 'ವೈಡಾಲ್' ಪರೀಕ್ಷೆ. ಈ ಪರೀಕ್ಷೆಯನ್ನು ಮೊಟ್ಟ ಮೊದಲು 'ವೈಡಲ್' ಎಂಬ ವೈದ್ಯವಿಜ್ಞಾನಿ ಬಳಕೆಯಲ್ಲಿ ತಂದಕಾರಣ ಈ ಪರೀಕ್ಷೆಗೆ ಅವರ ಹೆಸರನ್ನೇ ಇಡಲಾ ಗಿದೆ. ವೈಡಾಲ್ ಪರೀಕ್ಷೆಯಲ್ಲಿ ರಕ್ತದಲ್ಲಿರುವ ಟೈಫಾಯಿಡ್ ರೋಗ ಪ್ರತಿರೋಧಕ ಘಟಕಗಳನ್ನು ಪತ್ತೆ ಮಾಡುತ್ತಾರೆ. ಅಗಡಿಯ ರೋಗಿಗಳ ರಕ್ತವನ್ನು ವೈಡಾಲ್ ಪರೀಕ್ಷೆಗೆ ಗುರಿಪಡಿಸಿದಾಗ, ಪ್ರತಿಶತ ೬೧ ರಷ್ಟು ಜನರು ನಿಧಾನಕ್ಕೆ ಬೇಕೆನಿಸುವಷ್ಟು ಪ್ರತಿರೋಧಕ ಘಟಕ ತೋರಿಸಿದರು. ಅಂದರೆ ಜ್ವರವು ಟೈಫಾಯಿಡ್ ಜ್ವರವೇ ಎಂದಾಯಿತು.

ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ನೋಡಿದಾಗ ೫ ಜನ ರೋಗಿಗಳ ರಕ್ತದಲ್ಲಿ ಟೈಫಾಯಿಡ್ ರೋಗ ಜಂತುಗಳೇ ಸಿಕ್ಕವು. ಈ ಫಲಿತಾಂಶಗಳನ್ನು ನೋಡಿ ವೈದ್ಯರೆಲ್ಲರೂ ನಿಟ್ಟುಸಿರು ಬಿಟ್ಟರು. ಮೊದಲ ಸಮಾಧಾನ ಎಂದರೆ ಬಂದ ಜ್ವರಡೆಂಗು ಜ್ವರ ಅಲ್ಲ ಎಂಬುದು. ಇದು ಟೈಫಾಯಿಡ್ ಜ್ವರ ಎಂದೇ ಖಚಿತ ವಾಯಿತು.

ಮುಂದಿನ ಕಾರ್ಯವೆಂದರೆ ಊರಿನ ಶುಚಿತ್ವ ಪರೀಕ್ಷೆಯಾಗಿತ್ತು. ವೈದ್ಯರೆಲ್ಲರೂ ಇಡೀ ಊರನ್ನು ಸುತ್ತಿದರು. ಊರಿನಲ್ಲಿ ಅಂದಾಜು ೧೨,೦೦೦ ಜನ ವಸತಿ ಇದೆ. ಊರಲ್ಲಿ ಒಂದು ಪ್ರಾಥಮಿಕ ಆರೋಗ್ಯಕೇಂದ್ರವಿದೆ. ಅದರಲ್ಲಿ ೪ ವಾರ್ಡ್ ಗಳಿವೆ.

ಊರು ಮುಖ್ಯವಾಗಿ ಒಕ್ಕಲುತನವನ್ನು ಮುಖ್ಯ ಕಸುಬನ್ನಾಗಿಸಿಕೊಂಡಿದೆ. ಜ್ವರವು ಪಿಡುಗಿನ ರೂಪ ತಳೆದಾಗ ಊರಲ್ಲಿ ಯಾವುದೇ ಜಾತ್ರೆ, ಉತ್ಸವ ಇರಲಿಲ್ಲ. ಇಡೀ ಊರಿನಲ್ಲಿ ಕೆಲವೇ ಮನೆಗಳಲ್ಲಿ ಸುಧಾರಿತ ಕಕ್ಕಸುಗಳಿವೆ, ಸುಮಾರು ಊರಲ್ಲಿಯ ಜನರೆಲ್ಲ ಬಯಲನ್ನೇ ಕಕ್ಕಸುಗಳಂತೆ ಉಪಯೋಗಿಸುತ್ತಾರೆ. ಎರಡನೆಯ ಸಂಗತಿ ಎಂದರೆ ಊರಲ್ಲಿಯ ಮಲಿನ ನೀರು ತೆರೆದ ಗಟಾರಗಳಲ್ಲಿ ಹರಿಯುತ್ತದೆ. ಇದರಿಂದ ಊರ ತುಂಬ ಗಟಾರದ ನೀರು ನಿಲ್ಲುತ್ತದೆ. ಇಂಥ ನೀರು ಸೊಳ್ಳೆ ಹಾಗೂ ನೊಣಗಳು ವೃದ್ಧಿಗೊಳ್ಳುವ ಸ್ಥಾನವಾಗಿದೆ. ಊರಲ್ಲಿ ಸೊಳ್ಳೆ ಹಾಗೂ ನೊಣ ಗಳ ಕಾಟವೂ ಜಾಸ್ತಿ ಇದೆ.

ಜನರಿಗೆ ಬಳಸಲು ಹಾಗೂ ಕುಡಿಯಲು ಮೂರು ಬೋರ್‌ವೆಲ್‌ಗಳನ್ನು ತೆಗೆದಿದ್ದಾರೆ. ಈ ಮೂರೂ ಬಾವಿಗಳಿಂದ ನೀರನ್ನು ಒಂದು ದೊಡ್ಡ ಸಂಗ್ರಹಾಲಯಕ್ಕೆ ಏರಿಸುತ್ತಾರೆ. ಅಲ್ಲಿಂದ ನೀರು ಕಿರಿ ಸಂಗ್ರಹಾಲಯಗಳಿಗೆ ಹೋಗುವುದು, ಈ ಕಿರಿ ಸಂಗ್ರಹಾಲಯಗಳಿಂದ ನೀರು ಜನರಿಗೆ ತಲುಪುವುದು. ಮುಖ್ಯ ಸಂಗ್ರಹಾಲಯದಲ್ಲಿ ನೀರಿಗೆ ಕ್ಲೋರಿನ್ ಕೂಡಿಸುವ ವ್ಯವಸ್ಥೆ ಇದೆ.

ಮೂರು ಬೋರ್‌ವೆಲ್‌ಗಳನ್ನು ಪ್ರತ್ಯೇಕವಾಗಿ ಪರೀಕ್ಷಿಸಿದರು. ಇವುಗಳಲ್ಲಿ ಒಂದು ಬಾವಿ ಅನಾರೋಗ್ಯಕರ ಸ್ಥಿತಿಯಲ್ಲಿದೆ. ಈ ಬಾವಿಯ ಸುತ್ತಲೂ ಕೊಳಕು ನೀರು ಹಿಂಗದಂತೆ ಸಿಮೆಂಟ್ ಕಟ್ಟೆ ಕಟ್ಟಿಸಿಲ್ಲ. ಸುತ್ತಲಿನ ಪ್ರದೇಶಕ್ಕಿಂತ ಬಾವಿ ತಗ್ಗಿನಲ್ಲಿದೆ. ಸುತ್ತಲೂ ಜನರು ಮಲ ವಿಸರ್ಜಿಸುವರು. ಅಕಸ್ಮಾತ್ತಾಗಿ ಮಳೆ ಆದರೆ ನೀರು ಎಲ್ಲ ಕಲ್ಮಶವನ್ನು ಬಳಿದುಕೊಂಡು ಬಾವಿಯ ಕಡೆಗೆ ಹರಿಯುತ್ತದೆ ಹಾಗೂ ಅದು ಬಾವಿಯ ನೀರಿನಲ್ಲಿ ಕೂಡಿ ನೀರನ್ನು ಕಲ್ಮಶಗೊಳಿಸುವುದು. ದುರ್ದೈವದಿಂದ ಅಕ್ಟೋಬರ್ ತಿಂಗಳು ೧೯೯೬ರಲ್ಲಿ ಅಕಾಲಿಕ ಮಳೆಯು ಸುರಿಯಿತು. ಈ ಮಳೆಯ ನೀರು ಹರಿದು ಬಂದು ಬಾವಿಯ ನೀರನ್ನು ಸೇರಿತು. ಕಲ್ಮಶಗೊಂಡ ಈ ನೀರನ್ನು ಕುಡಿದವರೆಲ್ಲರಿಗೂ ತೊಂದರೆ ಕಂಡಿತು. ಮೂರೂ ಬಾವಿಗಳ ನೀರು ಒಂದೇ ಕಡೆಗೆ ಸೇರಿ ಊರಿಗೆಲ್ಲ ಹಂಚಲ್ಪಡುತ್ತಿದ್ದ ಕಾರಣ ರೋಗವು ಊರಲ್ಲಿಯ ಎಲ್ಲ ಭಾಗಗಳಲ್ಲೂ ತಲೆ ಎತ್ತಿತು.

ಬಾವಿಯ ನೀರು ಮಲಕಲ್ಮಶಗೊಂಡಿದೆಯೋ ಇಲ್ಲವೋ ? ಎಂಬುದು ನಂತರದ ಪ್ರಶ್ನೆ. ಇದನ್ನು ಖಚಿತಗೊಳಿಸಲು ಹಲವಾರು ಮನೆಗಳಿಗೆ ಹೋಗಿ ಅವರು ಬಳಸುತ್ತಿರುವ ನೀರನ್ನು ಪರೀಕ್ಷಿಸಿದ್ದಾಯಿತು. ಬಾವಿಯ ನೀರಿನಲ್ಲಿ ಕಂಡ ಕಲ್ಮಶವೇ ಇಲ್ಲಿಯೂ ದೊರೆಯಿತು. ಉಳಿದೆರಡು ಬಾವಿಯ ನೀರು ಕಲ್ಮಶಗೊಂಡಿರಲಿಲ್ಲ. ಆದರೆ ಮೂರನೆಯ ಬಾವಿಯ ನೀರು ಸೇರಿ ಎಲ್ಲವನ್ನೂ ಕಲ್ಮಶಗೊಳಿಸಿತು.

ಟೈಫಾಯಿಡ್ ರೋಗದ ಕಾರಣ, ರೋಗ ಪ್ರಸಾರ, ರೋಗ ಪ್ರಸಾರದಲ್ಲಿ ನೀರಿನ ಪಾತ್ರಗಳ ಬಗ್ಗೆ ನಮಗೆ ಮೂರು ವರ್ಷಗಳ ಹಿಂದೆಯೇ ತಿಳಿದಿದೆ, ಆದರೆ ನಮ್ಮ ಜನರು ಅನಕ್ಷರಸ್ಥರು, ಓದಿ ತಿಳಿಯಲಿಲ್ಲದ ಕಾರಣ ಇಂದಿಗೂ ಸಹ ಇಂಥ ಪಿಡುಗುಗಳು ನಮ್ಮ ದೇಶದಲ್ಲಿ ತಲೆ ಎತ್ತುತ್ತಲೇ ಇರುತ್ತವೆ. ಜನರನ್ನು ಪೀಡಿಸುತ್ತಲೇ ಇರುತ್ತವೆ.

ಮಹಾರಾಷ್ಟ್ರ ರಾಜ್ಯದ ಸಾಂಗ್ಲಿಯಾನ

## ಆಧುನಿಕತೆ ತಂದ ಆಪತ್ತು

ಅಂದು ಮಧ್ಯಾಹ್ನ ಜಪಾನಿನಲ್ಲಿ ೬,೫೦೦ ಶಾಲಾ ಮಕ್ಕಳು ಮಧ್ಯಾಹ್ನದ ಊಟವನ್ನು ಮಾಡಿದರು. ಸ್ವಲ್ಪ ಹೊತ್ತಿನಲ್ಲಿ ಆರಂಭವಾಯಿತು. ವಾಂತಿ ಭೇದಿ ! ಎಲ್ಲರನ್ನು ಆಸ್ಪತ್ರೆಗೆ ಸೇರಿಸಿದರು. ಇದು ನಡೆದ ಸ್ವಲ್ಪ ಹೊತ್ತಿನಲ್ಲಿಯೇ ಜಪಾನಿನ ಇತರ ಕಡೆಗಳಲ್ಲೂ ವಾಂತಿಭೇದಿಗಳ ಸುದ್ದಿ ಬಂತು.... ಎಲ್ಲರನ್ನು ಆಸ್ಪತ್ರೆಗೆ ಸೇರಿಸಿದರು. ಸುಮಾರು ೬,೫೦೦ ಜನ!.... ಅವರಲ್ಲಿ ೧೧ ಜನರು ಸತ್ತರು.

ತನಿಖೆಗಳು ಆರಂಭವಾದವು. ವಾಂತಿಭೇದಿಗೆ ಕಾರಣ ವಿಷಾಹಾರ ಸೇವನೆ ಎಂದರು. ಕೊನೆಗೆ ಆ ವಿಷವಿದ್ದ ಆಹಾರವನ್ನೂ ಪತ್ತೆ ಹಚ್ಚಿದರು. ಅದು ಮೂಲಂಗಿಯಾಗಿತ್ತು. ಮೂಲಂಗಿಯಲ್ಲಿದ್ದ ಎಷಿರಿಯ ಕೋಲೈ ೦೧೫೭ : H೭ ಎಂಬ ಬ್ಯಾಕ್ಟೀರಿಯವಾಗಿತ್ತು. ಈ ಬ್ಯಾಕ್ಟೀರಿಯ ಉತ್ಪಾದಿಸಿದ ವಿಷವಸ್ತುಗಳ ಫಲವಾಗಿ ವಾಂತಿ ಭೇದಿಗಳು ತಲೆದೋರಿದ್ದವು.

ಎಷಿರಿಯ ಕೋಲೈ ೦೧೫೭-H೭ ಸಾಮಾನ್ಯವಾಗಿ ದನಗಳ ಕರುಳಿನಲ್ಲಿ ವಾಸಿಸುವ ಒಂದು ಸಹಜ ಜೀವಿ. ಇಂತಹ ದನಗಳ ಮಾಂಸವನ್ನು ಸೂಕ್ತ ಎಚ್ಚರಿಕೆಗಳಲ್ಲಿ ಸೇವಿಸಿದರೆ, ಅಥವಾ ಇಂತಹ ದನಗಳ ಗೊಬ್ಬರ ಬಳಸಿ ಬೆಳೆಸಿದ ತರಕಾರಿಗಳನ್ನು ಹಸಿಯಾಗಿ ತಿಂದರೆ, ಇಲ್ಲವೆ ಇಂತಹ ಕ್ರಿಮಿಭರಿತ ನೀರಿನಿಂದ ಮಾಡಿದ ಆಹಾರವನ್ನು ಸೇವಿಸಿದರೆ, ಬ್ಯಾಕ್ಟೀರಿಯವು ವಾಂತಿಭೇದಿಗಳಿಗೆ ಎಡೆ ಮಾಡಿಕೊಡುತ್ತದೆ.



ಅಮೆರಿಕದಲ್ಲಿ ಪ್ರತಿವರ್ಷ ಇಂತಹ ೨೦,೦೦೦ ಪ್ರಕರಣಗಳು ನಡೆಯುತ್ತಿವೆ. ಅವರಲ್ಲಿ ಸುಮಾರು ೨೫೦ ಜನರಾದರೂ ಸಾಯುತ್ತಾರೆ. ಇವರಲ್ಲಿ ಬಹುಪಾಲು ಮಕ್ಕಳು ಹಾಗೂ ವೃದ್ಧರಿರುತ್ತಾರೆ.

ವಿಶ್ವ ಆರೋಗ್ಯ ಸಂಸ್ಥೆಯ ಕಜೌಕಿ ಮಿಯಾಗಿಶಿಮ ಅವರ ಅಭಿಪ್ರಾಯದಂತೆ ''ಆಧುನಿಕ ಆಹಾರ ವಿತರಣಾ ಪದ್ಧತಿಯೇ ಇಂತಹ ವಿಷಪ್ರಾಶನ ಪ್ರಕರಣಗಳಿಗೆ ಕಾರಣ''. ಉದಾಹರಣೆಗೆ ಸಕಾಯ್ ನಗರದಲ್ಲಿರುವ ಒಂದು ಸಂಸ್ಥೆಯು ಪ್ರತಿದಿನವು ೪೮,೦೦೦ ಮಕ್ಕಳಿಗೆ ಮಧ್ಯಾಹ್ನದ ಊಟವನ್ನು ಸರಬರಾಜು ಮಾಡುತ್ತದೆ. ಅವರಲ್ಲಿ ೬,೫೦೦ ಮಕ್ಕಳು ವಾಂತಿಭೇದಿಗೆ ತುತ್ತಾದದ್ದು ಆಶ್ಚರ್ಯವೇನಿಲ್ಲ ಎನ್ನುತ್ತಾರೆ.

ನಗರಗಳಲ್ಲಿ ಕೆಲವು ವರ್ಷಗಳ ಹಿಂದೆ ಕಂಡ ಟೈಫಾಯಿಡ್ ಪಿಡುಗು ಅನೇಕ ಸಾವಿರ ಜನರನ್ನು ಪೀಡಿಸಿತ್ತು.

ಇವೆಲ್ಲವನ್ನು ನಾವು ತಡೆಯಬೇಕು. ಇದರಿಂದ ದೇಶದ ಜನರ ಆರೋಗ್ಯ ಚೆನ್ನಾಗಿರುತ್ತದೆ.

**ಅಗಡಿಯ ಜನರಿಗೆ ಸೂಚಿಸಲ್ಪಟ್ಟ ಸಲಹೆಗಳು.**

೧. ನಿಯಮಿತವಾಗಿ ಕುಡಿಯುವ ನೀರು ಕಲ್ಮಶಗೊಂಡಿದೆಯೋ, ಇಲ್ಲವೋ ಎಂಬುದನ್ನು ಪರೀಕ್ಷಿಸುತ್ತಿರಬೇಕು.

೨. ಕೊಳವೆಬಾವಿಗಳ ಸುತ್ತಲೂ ಸಿಮೆಂಟು ಕಟ್ಟೆ ಕಟ್ಟಿ ಮಲಿನ ನೀರು ಈ ಕೊಳವೆಬಾವಿಗಳಲ್ಲಿ ಸೇರದಂತೆ ನೋಡಬೇಕು.

೩. ರೋಗವಾಹಕರನ್ನು ಪತ್ತೆ ಹಚ್ಚಿ ಅವರಿಗೆ ಉಪಚಾರ ಮಾಡಿಸಬೇಕು.

೪. ಅಗಡಿ ಊರು ಟೈಫಾಯಿಡ್ ರೋಗದ ಮನೆ ಎಂದು ಎಚ್ಚರಿಕೆ ಕೊಟ್ಟು ಒಂದು ವರ್ಷದವರೆಗೆ ವೈದ್ಯರು ಜಾಗರೂಕರಾಗಿರಬೇಕು.

೫. ಊರಿನ ಜನರಿಗೆಲ್ಲ ಆರೋಗ್ಯ ಶಿಕ್ಷಣವನ್ನು ಕೊಡಬೇಕು. ಸುರಕ್ಷಿತ ನೀರು ಎಂದರೇನು? ಎಂಬುದನ್ನು ತಿಳಿಸಬೇಕು.

೬. ದೂರದರ್ಶನ ಇಲ್ಲವೆ ಸಿನೀಮಾದಲ್ಲಿ ನೀರಿನಿಂದ ಹರಡುವ ರೋಗಗಳ ಬಗ್ಗೆ ಜನರಿಗೆ ತಿಳಿಸಿ ಕೊಡಬೇಕು.

ರೋಗಿಗಳಲ್ಲಿ ಕಂಡ ಎಲ್ಲ ತೊಂದರೆಗಳೂ ಟೈಫಾಯಿಡ್ ಜ್ವರದಲ್ಲಿ ಕಾಣುತ್ತವೆ. ತ್ವಚೆಯಲ್ಲಿ ಕಂಡ ಚುಕ್ಕೆಗಾದರಿಗಳು ಹಾಗೂ ಜ್ವರ ಡೆಂಗುವಿನಂತೆ ಕಂಡಿದ್ದವು. ಊರಲ್ಲಿಯ ತೆರೆದ ಗಟಾರ, ಸೊಳ್ಳೆಗಳು ಇದನ್ನು ಪುಷ್ಟೀಕರಿಸಿದವು. ಆದರೆ ದೀರ್ಘಕಾಲೀನ ಜ್ವರ, ತಲೆನೋವು, ಮಿದುಳಿನ ಮಂಪರು, ತ್ವಚೆಯಲ್ಲಿಯ ಚುಕ್ಕೆಗಳು, ಊದಿಕೊಂಡ ಪ್ಲೀಹ, ಹೊಟ್ಟೆ ಜಾಡಿಸುವಿಕೆಗಳು ಟೈಫಾಯಿಡ್‌ದ ರೋಗ ಲಕ್ಷಣಗಳು. •






# ‘‘ನನಗೂ ಒಂದು ಎನಿಮಾ ಕೊಡ್ರಿ....’’

ದೊಡ್ಡ ಆಸ್ಪತ್ರೆ. ವಿವಿಧ ರೋಗಿಗಳು ತಮ್ಮ ತಮ್ಮ ಹಾಸುಗೆಯ ಮೇಲೆ ಮಲಗಿದ್ದರು, ವೈದ್ಯರು ಒಬ್ಬೊಬ್ಬ ರೋಗಿಯನ್ನು ಮಾತಾಡಿಸುತ್ತ ಅವರಿಗೆ ಬೇಕಾದ ಔಷಧೋಪಚಾರ ಹೇಳುತ್ತ ಮುಂದೆ ಮುಂದೆ ಹೋಗುತ್ತಿದ್ದರು.

ಒಬ್ಬ ರೋಗಿ ‘‘ಸಾಹೇಬ್ರ, ಇಂದ ನನ್ನ ಹೊಟ್ಟೆ ಸಾಫ ಆಗೆತ್ರಿ. ಆರಾಮ ಭಾಳ ಆಗೆತ್ರಿ’’ ಅಂದ. ಆ ರೋಗಿಯನ್ನು ಪರೀಕ್ಷಿಸಿ, ಮುಂದೆ ಹೋಗುವಷ್ಟರಲ್ಲಿ ಮಗ್ಗುಲಿನಲ್ಲಿರುವ ರೋಗಿಯೊಬ್ಬ ‘‘ಸಾಹೇಬ್ರ ನನ್ನದೂ ಹೊಟ್ಟೆ ಸಾಫ ಆಗುವಂಗ ಮಾಡ್ರಿ. ನನಗ ಹೊಟ್ಟೆ ಸರಿ ಉಳಿದಿಲ್ಲ’’ ಎಂದ.

‘‘ವೈದ್ಯರು ನಿನಗೆ ಬೇರೆ ಔಷಧ ಕೊಡಿಸುವೆ. ಸರಿಯಾಗುವುದು’’ ಎಂದರು.

ರೋಗಿ ‘‘ಇಲ್ರಿ ಅವನಿಗೆ ಕೊಟ್ಟದ್ದನ ನನಗೆ ಕೊಡ್ರಿ. ನನಗೂ ಅಷ್ಟ ಆರಾಮ ಆಗುವಂಗ ಮಾಡ್ರಿ’’ ವೈದ್ಯರು ನಾಳೆ ನೋಡೋಣ ಎಂದು ಹೋದರು. ಮರುದಿನ ಮತ್ತೆ ರೋಗಿ ವೈದ್ಯರನ್ನು ಗೋಳು ಹೊಯ್ದುತೊಡಗಿದ. ಆಗ ವೈದ್ಯರು ‘‘ಅವನಿಗೆ ಎನಿಮಾ ಕೊಟ್ಟಿದ್ದೆವು ನಿನಗೇಕೆ?’’ ಎಂದರು.

ರೋಗಿ: ‘‘ನನಗೂ ಒಂದು ಎನಿಮಾ ಕೊಡ್ರಿ’’ ಎಂದು ಅಂಗಲಾಚ ತೊಡಗಿದ.

ವೈದ್ಯರು ದಾಯಿ ಕಡಗೆ ನೋಡಿ ‘‘ಸಿಸ್ಟರ್, ಇವನಿಗೊಂದು ಎನಿಮಾ ಕೊಡಿರಿ’’ ಎಂದು ಹೇಳಿದರು.

ರೋಗಿಗೆ ಸಂತೋಷವೇ ಸಂತೋಷ. ವೈದ್ಯರು ಹೊರಗೆ ಹೋಗುವ ದಾರಿಯನ್ನೇ ಕಾಯುತ್ತಿದ್ದ ರೋಗಿ ಈಗ ದಾಯಿಯ ಬೆನ್ನು ಹತ್ತಿದ. ದಾಯಿ ಹೋದ ಕಡೆಗೆಲ್ಲ ಹೋಗಿ ತನ್ನ ಕೈಚಾಚಿ ‘‘ಸಿಸ್ಟರ್ ಬಾಯಿ ನನಗೊಂದ ಎನಿಮಾ ಕೊಡ್ರಿ’’ ಎಂದು ಕೇಳುತ್ತಿದ್ದ. ಅವರು ಹೇಳಿದರು ‘‘ನೋಡು, ನಿನ್ನ ಹಾಸಿಗೆಯಲ್ಲಿರು. ನಾನು ಕರೆದು ನಿನಗೆ ಎನಿಮಾ ಕೊಡುತ್ತೇನೆ’’.

ರೋಗಿ: ‘ಈಗಲೇ ಕೊಟ್ಟುಬಿಡ್ರೀ. ಲಗೂನ ತೆಗೆದುಕೊಳ್ಳುವೆ.’

ದಾಯಿ:‘ಏ ಸುಮ್ಮನಿರೋ’ ಎಂದು ಕೊಂಚ ಕೋಪದ ಧ್ವನಿಯಲ್ಲಿಯೇ ಹೇಳಿದಳು.

ರೋಗಿ: ಜೋಲು ಮೋರೆ ಹಾಕಿಕೊಂಡು ಮರಳಿ ತನ್ನ ಹಾಸಿಗೆಯ ಮೇಲೆ ಕುಳಿತನು. ದೇವರು ಕೊಟ್ಟರೂ, ಪೂಜಾರಿ ಕೊಡಲಿಲ್ಲ ಎಂದು ಗೊಣಗುತ್ತಿದ್ದನು. ಅರ್ಧ ಗಂಟೆ ಆಯಿತು. ದಾಯಿ ರೋಗಿಯನ್ನು ಕರೆದರು. ರೋಗಿ ಓಡುತ್ತ ಅವಸರವಾಗಿ ಹೋಗಿ ಮತ್ತೆ ಕೈಮುಂದೆ ಮಾಡಿ ‘ಕೊಡ್ರಿ’ ಎಂದನು.

ದಾಯಿ: ‘ಈ ರೂಮಿನಲ್ಲಿ ನಡೆ ’ಎಂದರು.

ರೋಗಿ: ‘ಹೊರಗ ಕೊಡ್ರಿ. ಮತ್ಯಾಕೆ ಒಳಗ’.

ದಾಯಿ:‘ಸುಮ್ಮನೆ ಒಳಗೆ ನಡಿ’ ಎಂದು ಗದರಿಸಿದರು.

ರೋಗಿ ಅವರು ತೋರಿಸಿದ ರೂಮಿನಲ್ಲಿ ಮೆಲ್ಲಗೆ ಸೇರಿಕೊಂಡು, ಅಲ್ಲಿ ಎಂಥ ಗುಳಿಗೆಯ ಬಾಟಲಿಯಾಗಲೀ, ಇಂಜೆಕ್ಷನ್ ವಸ್ತುಗಳಾಗಲೀ ಇಲ್ಲದ್ದನ್ನು ನೋಡಿ ಸುಮ್ಮನೇ ನಿಂತ. ದಾಯಿ ಬಂದಳು. ರೋಗಿಯನ್ನು ನೋಡಿ, ‘ಇಲ್ಲಿ ಟೇಬಲ್ಲಿನ ಮೇಲೆ ಮಲಗು’’ ಎಂದರು.

ರೋಗಿ: ‘‘ನಾನು ನಿಂತೆ ತೆಗೆದುಕೊಳ್ಳುವೆ’’

ದಾಯಿ: ‘‘ಹುಚ್ಚಪ್ಪ, ನಿಂತ್ರ ಎನಿಮಾ ಹೆಂಗ ಕೊಡಲಿಕ್ಕೆ ಬರುತ್ತದೆ. ಮಲಗು.’’

ರೋಗಿ: ‘‘ ನಾನು ಕುಳಿತು ತೆಗೆದಕೊಂಡರೆ ಆಗದೆ?’’

ದಾಯಿ: ‘‘ಊಹುಂ, ಬೇಗ ಮಲಗು. ಎಷ್ಟು ಗಡಿ ಬಿಡಿ ಮಾಡಿ ಎನಿಮಾ ಕೊಡ್ರಿ ಅಂದಾವನು ಈಗ ತಡ ಯಾಕೆ?’’

ರೋಗಿ: ‘‘ಸಿಸ್ಟರ್, ಎನಿಮಾ ಎಲ್ಲಿದೆ ತೋರಿಸಿರಿ, ನೋಡುತ್ತೇನೆ ?’’

ದಾಯಿ: ‘‘ನೋಡು ಈ ಸ್ಟಾಂಡು, ಇದಕ್ಕೆ ಜೋತುಬಿದ್ದ ಈ ಡಬ್ಬಿ, ಅದಕ್ಕಿರುವ ರಬ್ಬರಿನ ಕೊಳವೆ, ಡಬ್ಬಿಯಲ್ಲಿ ಸೋಪಿನ ನೀರು ಇದೆ.’’

ರೋಗಿ ಕುಸಿದೇ ಹೋದ. ‘‘ಏನು ಸಿಸ್ಟರ್, ಇದನ್ನೆಲ್ಲ ನುಂಗುವುದು ಹೇಗೆ?’’ ಎಂದು ಆಶ್ಚರ್ಯ ವ್ಯಕ್ತಪಡಿಸಿದ.

ದಾಯಿ: ‘‘ನೀನೊಬ್ಬ, ಎನಿಮಾ ಬಾಯಿಂದ ತಗೊಳ್ಳುದಲ್ಲ. ಅದನ್ನ ಕೆಳಗಿನಿಂದ ಕೊಡಬೇಕು’’.

ರೋಗಿ: ‘‘ಅಲ್ರೀ, ಇದೆಲ್ಲ ಕೆಳಗಿಂದ ಒಳಗ ಹಾಕಾವ್ರ?’’

ದಾಯಿ: ‘‘ಮತ್ತ, ಎನಿಮಾ ಅಂದ್ರನ ಇದು’’.

ರೋಗಿ: ‘‘ಸಿಸ್ಟರ್, ಎನಿಮಾ ಅಂದ್ರ ಗುಳಿಗೆ ಅಲ್ಲೇನ್ರಿ? ನಾನೊಲ್ರಿ. ಇದನ್ನೆಲ್ಲ (ಕಬ್ಬಿಣದ ಸ್ಟಾಂಡು, ಡಬ್ಬಿ, ಟ್ಯೂಬುಗಳ ಕಡೆಗೆ ಕೈತೋರಿಸುತ್ತ) ಕೆಳಗಿಂದ ಒಳಗ ಹಾಕಿದ್ರ ಹೊಟ್ಟೆಯಾಕ್ರ ಮನಿಸ್ಯಾನ ಸಾಫ ಆಗ್ತನ’’ ‘‘ಎನಿಮಾ ಅಂದ್ರ ನಾನು ಗುಳಿಗೆ ಅಂದಿದ್ದೆ. ಅದು ಗುಳಿಗೆ ಅಲ್ಲ ಅದು ಕಬ್ಬಿಣದ ಬಡಿಗೆ’’ ಎಂದು ಗುನುಗುತ್ತ ತನ್ನ ಸಾಮಾನು ಸರಕುಗಳನ್ನು ಆಸ್ಪತ್ರೆಯಲ್ಲಿಯೇ ಬಿಟ್ಟು ಹೊರಗೆ ಓಡಿ ಹೋದ. ●

Edited, Printed, Published and Owned by : Adanagouda T. Patil
940, I Floor, 8th B Main, III Block, III stage, Basaveshwaranagara, Bangalore-560 079 Ph : 3357198
Printed at : DIKSOOCHI PRINTERS No. 97, West of Chord Road, III Stage, II Block, Basaveshwaranagara, BANGALORE- 560 079. Ph : 3386606




ಜನವರಿ ೨೩ರಂದು ಕಲ್ಬುರ್ಗಿಯ ಜಿಲ್ಲಾ ವಿಜ್ಞಾನ ಕೇಂದ್ರದಲ್ಲಿ ದೇಸಾಯಿ ಸಹೋದರವರು ಏರ್ಪಡಿಸಿದ್ದ ಜೀವನಾಡಿ ಉದ್ಘಾಟನಾ ಸಮಾರಾಂಭದಲ್ಲಿ ಪ್ರಖ್ಯಾತ ವೈದ್ಯರಾದ ಡಾ. ಮಲ್ಲಾರಾವ್ ಮಲ್ಲೆ ಪತ್ರಿಕೆಯನ್ನು ಬಿಡುಗಡೆ ಮಾಡಿದರು. ಅಧ್ಯಕ್ಷ ಸ್ಥಾನ ವಹಿಸಿದ್ದ ಉಪನ್ಯಾಸಕ ವಿಜಯ ಕುಮಾರ್‌ರವರ ಜೊತೆ ಮುಖ್ಯ ಅತಿಥಿಗಳಾದ ಎಸ್.ಕೆ. ಮಾವನೂರ್ ರೊಡನೆ ದಿಕ್ಸೂಚಿ ಸಂಸ್ಥೆಯ ಏಜೆಂಟರಾದ ವಿ.ವಿ. ದೇಸಾಯಿ ಸಹೋದರರುಉಪಸ್ಥಿತರಿದ್ದರು.

# ಸಮುದಾಯ ಆರೋಗ್ಯದ ಹೆಗ್ಗುರಿಯ 'ಜೀವನಾಡಿ'ಯ ಪ್ರಥಮ 'ಮಿಡಿತ'

**ಡಾ॥ ವಸಂತ. ಅ. ಕುಲಕರ್ಣಿ ಎಂ.ಡಿ.,**

ಕನ್ನಡ ಪತ್ರಿಕೋದ್ಯಮವೇ ಕಬ್ಬಿಣದ ಕಡಲೆ. ಅದರಲ್ಲೂ ಓದುಗರನ್ನು ಸೃಷ್ಟಿಸಿ ಬದುಕುವುದು ಕೂಡ ಒಂದು ಪವಾಡವೇ ಸರಿ. ಇದನ್ನು ಸಾಧಿಸಿ ತೋರಿಸಿದವರು ಈಗಾಗಲೇ ಜನಪ್ರಿಯ ಪತ್ರಿಕೆಯಾದ ದಿಕ್ಸೂಚಿಯ ಸಂಪಾದಕ ಶ್ರೀ ಎ.ಟಿ. ಪಾಟೀಲರು. ಜನರ ಮನಕ್ಕೆ ಒಪ್ಪುವ ರೀತಿಯಲ್ಲಿ ಅವರ ಮನದಲ್ಲಿ ಸೇರಿ, ನೂರಾರು ವೈವಿಧ್ಯಮಯ ವಿಷಯಗಳನ್ನು ಬುದ್ಧಿಗೆ ಗ್ರಾಸವಾಗುವ ರೀತಿಯಲ್ಲಿ ಹೇಳುವ ಕಲೆಯನ್ನು ಸಾಧಿಸಿಕೊಂಡ ದಿಕ್ಸೂಚಿಯ ಬಳಗದ ಇನ್ನೊಂದು ಸಾಹಸವೇ 'ಜೀವನಾಡಿ.' ಬೆಂಗಳೂರಿನ ಬಸವೇಶ್ವರನಗರದ ಎಸ್.ಡಿ.ಎ. ಕಲ್ಯಾಣ ಮಂಟಪ ದಲ್ಲಿ ಆತ್ಮೀಯ ಲೇಖಕರ ಬಳಗದಲ್ಲಿ ನಗರದ ಖ್ಯಾತ ಹಿರಿಯ ವೈದ್ಯರ ಸಮ್ಮುಖದಲ್ಲಿ 'ಜೀವನಾಡಿ' ಜನವರಿ ೪ ರಂದು ಜನ್ಮ ಪಡೆಯಿತು. ಸರಳ ಸಮಾರಂಭದಲ್ಲಿ ಶ್ರೀ ಎ.ಟಿ. ಪಾಟೀಲರ 'ದಿಕ್ಸೂಚಿ' ನಡೆದು ಬಂದ ದಾರಿಯ ಅನುಭವದ ಹಂದರ ಮೇಲೆ 'ಜೀವನಾಡಿ' ಬಳ್ಳಿ ಚಿಗುರತೊಡಗಿದ್ದನ್ನು ನೂರಾರು ಜನರು ಉಪಸ್ಥಿತರಿದ್ದು, ಕಂಡು ಶುಭ ಹಾರೈಸಿದರು. ವೈದ್ಯ ಶಿಕ್ಷಣದಲ್ಲಿ ದೊಡ್ಡ ಹೆಸರು ಮಾಡಿದ ಹಾಗೂ ಲೇಖಕ ಡಾ.॥ಸ.ಜ. ನಾಗಲೋಟಿಮಠ ಅವರು ಇದರ ಗೌರವ ಸಂಪಾದಕರು. ಅವರ ಹಿಂದೇ ಇದ್ದ ನೂರಾರು ಶಿಷ್ಯರು -ಸ್ನೇಹಿತರು ಈ 'ಜೀವನಾಡಿ' ಸುಂದರ ಮಾಸಪತ್ರಿಕೆಯ ಬೆಂಗಾವಲಿಗೆ ನಿಂತು ಹರಸಿದ್ದಾರೆ. ವಿವಿಧ ವೈದ್ಯ ವಿಚಾರಗಳ ಭ್ರೂಣಸಂಜೀವಿನಿ ಬೆಳೆದು ಸುಂದರ ಮಗುವಾಗಿ ಜನಿಸಿದ 'ಜೀವನಾಡಿ' ಯನ್ನು, ಅಂದು ಹರಕೆಯ ಮಾತುಗಳಲ್ಲಿ ಆಶೀರ್ವದಿಸಿ 'ತೊಟ್ಟಿಲಲ್ಲಿ' ಇಟ್ಟು ''ತೂಗಿಸಿದವರು'' ಹಿರಿಯ ಶಿಕ್ಷಣ ತಜ್ಞ, ಬೆಂಗಳೂರು ವಿಶ್ವವಿದ್ಯಾಲಯ ಮಾಜಿ ಕುಲಪತಿ ಡಾ॥ ಹೆಚ್ ನರಸಿಂಹಯ್ಯನವರು. ಅವರು ತಮ್ಮ ಜೀವನದ ಆರೋಗ್ಯ ದೃಷ್ಟಾಂತಗಳನ್ನು ಹೇಳಿ ಪತ್ರಿಕೆಗೆ ತುಂಬು ಮನದಿಂದ ಶುಭ ಕೋರಿದರು. ಡಾ॥ ಸ.ಜ. ನಾಗಲೋಟಿಮಠರು ಕೂಡ ಪತ್ರಿಕೆಯ ಭವಿಷ್ಯದ ಯೋಜನೆಗಳನ್ನು ವಿವರಿಸಿದರು.

ಅಂದಿನ ಸಡಗರ-ಶುಭಸಂಜೆಗೆ ಹೋದದ್ದೇ ಆಕಸ್ಮಿಕ ಹಾಗೂ ಅದೃಷ್ಟ. ಶುಕ್ರವಾರ ದಿನಾಂಕ ೩ ಜನವರಿಯಂದು ವಿದ್ಯಾಭಾರತಿ ಶಾಲೆಯ ಪಾಲಕರ ದಿನಾಚರಣೆಯ ಮುಖ್ಯ ಅತಿಥಿಯಾಗಿ ಹೋಗಿ ಮರಳಿ ಬಂದು ವಿಶ್ರಮಿಸುತ್ತಾ, ಇಂದಿನ ಶಿಕ್ಷಣ ಸಮಸ್ಯೆಗಳ ಕುರಿತು ಮೆಲುಕು ಹಾಕುತ್ತಿದ್ದಾಗ, ಶ್ರೀ ಎ.ಟಿ. ಪಾಟೀಲರ 'ಅರ್ಜೆಂಟ್ ಫೋನ್.' ಮರುದಿನ ಕಾರ್ಯಕ್ರಮಕ್ಕೆ ಬರಲು ಒತ್ತಾಯದ ಕರೆ. ಸಾಧ್ಯವಾದರೆ ಬರುವೆ ಎಂದು ಹೇಳಿ ಫೋನ್ ಇಟ್ಟು, ಇದ್ದುಬಿದ್ದ ಬಟ್ಟೆ ಬರೆ ತುಂಬಿಕೊಂಡು ಬಸ್‌ಸ್ಟ್ಯಾಂಡಿಗೆ ಬಂದಾಗ, ಬೆಂಗಳೂರಿಗೆ ಟಿಕೇಟ್ ಇಲ್ಲ. ಅಲೆದಾಡಿದ್ದೇ ಅಲೆದಾಡಿದ್ದು.

ಕೊನೆಯ ಗಳಿಗೆಯಲ್ಲಿ ಯಾರೋ ಮಹಾನುಭಾವರು 'ಕ್ಯಾನ್ಸಲ್' ಮಾಡಿದ ಟಿಕೇಟು ದೊರೆತು, ಬೆಂಗಳೂರು ತಲುಪುವ ಭಾಗ್ಯ ದೊರಕಿತು. 'ಜೀವನಾಡಿ' ಉದಯಿಸುವುದನ್ನು ಕಣ್ಣಾರೆ ಕಾಣುವ ಭಾಗ್ಯ ದೊರೆಯಿತು ಹಾಗೂ ಅಲ್ಲಿಯ ಸಂಭ್ರಮ-ಸಡಗರವು ಮದುವೆಯ ನೆನಪನ್ನು ಮರುಕಳಿಸಿತು. ನಾನು ಹಾಗೂ ನನ್ನ ಚಿರಂಜೀವಿ ರಾಘವೇಂದ್ರ ಎಲ್ಲರೂ ಪಾಲ್ಗೊಂಡೆವು.

ಆರಂಭದಲ್ಲಿ ಕುಮಾರಿ ಸುಚೇತಾ ಅವರ ಇಂಪಾದ ಹಾಗೂ ಸುಶ್ರಾವ್ಯ ಭಾವಗೀತೆ ಗಾಯನ ಹಾಗೂ ಕುಮಾರಿ ರಮ್ಯ ಅವರಿಂದ ಭರತನಾಟ್ಯ ಕಾರ್ಯಕ್ರಮಕ್ಕೆ ಮುದ ನೀಡಿದವು. ಅವರ ಕಲಾ ಪ್ರದರ್ಶನ ನಿಜವಾಗಿಯೂ ಅರಳಿದ ಪ್ರತಿಭೆಯ ಸಂಕೇತವಾಗಿತ್ತು. ಸಮಾರಾಂಭದ ಕರ್ಣಧಾರತ್ವ ವಹಿಸಿದ್ದ ಶ್ರೀ ಎ.ಟಿ. ಪಾಟೀಲರು ಎಲ್ಲರನ್ನು ಆತ್ಮೀಯವಾಗಿ ಬರಮಾಡಿಕೊಂಡ ನಂತರ 'ಜೀವನಾಡಿ' ಸಂಪಾದಕ ಡಾ. ನಾ. ಸೋಮೇಶ್ವರ ಅವರು ಪತ್ರಿಕೆಯು ಇಟ್ಟ ಹೆಜ್ಜೆ ಹಾಗೂ ಧ್ಯೇಯೋದ್ದೇಶಗಳನ್ನು ಹೃದ್ಯವಾಗಿ ವಿವರಿಸಿದರು. ಅವರು ಸಂಕಲ್ಪಿಸಿದ ಹಾಗೂ ಕಲ್ಪಿಸಿದ ರೂಪರೇಷೆಗಳು ಭವ್ಯ ಭವಿಷ್ಯಗಳ ಆಶಯದಿಂದ ಒಡಗೂಡಿದ್ದವು.

ಬಿಡುಗಡೆ ಸಮಾರಿಂಭದ ಇನ್ನೊಂದು ಆಕರ್ಷಣೆಯೆಂದರೆ, ಹಿರಿಯ ವೈದ್ಯ ಶಿಕ್ಷಕ ಹಾಗೂ ಸಾವಿರಾರು ವೈದ್ಯರಿಗೆ ಗುರುಗಳಾಗಿದ್ದ ಡಾ. ವಿ. ವ್ಹಿ. ರಾಮಪ್ರಸಾದ ಅವರ ಉಪಸ್ಥಿತಿ ಹಾಗೂ ಅವರು ಸಂಪಾದಕ ಮಂಡಳಿಯ ಸದಸ್ಯರಾಗಿದ್ದು ಎಲ್ಲರಿಗೂ ಸಂತಸ ತಂದಿತು.

ಕಾರ್ಯಕ್ರಮಕ್ಕೆ ಆಕಸ್ಮಿಕವಾಗಿ ಆಗಮಿಸಿದ್ದ ಹಿರಿಯ ವಿಜ್ಞಾನ ಲೇಖಕ ಹಾಗೂ ಪ್ರಾಚಾರ್ಯ ಡಾ॥ ಆರ್.ಎಸ್. ಭೂಸನೂರಮಠ ಅವರು ಶಾಂತರಸರ ಅನುಪಸ್ಥಿತಿಯಲ್ಲಿ ಅಧ್ಯಕ್ಷತೆ ವಹಿಸಿ 'ಜೀವನಾಡಿ'ಯ ಅಂಗವಿನ್ಯಾಸ ಹಾಗೂ ಅದರ ಹೆಗ್ಗುರುತುಗಳನ್ನು ವಿಶ್ಲೇಷಿಸಿ ಕೆಲ ಎಚ್ಚರಿಕೆಯ ಸೂಚನೆಗಳನ್ನು ಹೇಳಿ ''ಮಾಸಪತ್ರಿಕೆ ಜನತೆಯ ಜೀವನದಿಯಾಗಲಿ'' ಎಂದೂ ಹಾರೈಸಿದರು. ಇನ್ನೋರ್ವ ಲೇಖಕಿ ಡಾ॥ ಸಿ. ಅನ್ನಪೂರ್ಣಮ್ಮ ಅವರು ಪತ್ರಿಕೆಯ ಕುರಿತು ಮೆಚ್ಚುಗೆ ವ್ಯಕ್ತಪಡಿಸಿ ಮಾರ್ಗದರ್ಶಿ ಮಾತುಗಳನ್ನು ಹೇಳಿದರು. ನಾನು ಸಂಪಾದಕ ಮಂಡಲಿಯ ಪರವಾಗಿ ಮಾತನಾಡಿ ಉಪಯುಕ್ತ ಸಲಹೆಗಳನ್ನಿತ್ತೆ.

ಕುಮಾರಿ ಮಂಜಳಾ ರೆಡ್ಡಿಯವರ ಕಾರ್ಯಕ್ರಮ ನಿರೂಪಣೆಯಲ್ಲಿ ಮೂಡಿಬಂದ ಈ ಬಿಡುಗಡೆ ಸಮಾರಂಭದ ಕೊನೆಯಲ್ಲಿ ಟಿ.ಟಿ. ಕಸ್ತೂರಿಯವರು ವಂದಿಸಿದರು. ಸುಮಾರು ೨೫ ವರ್ಷಗಳಿಂದಲೂ ನಾವು ಬಯಸುತ್ತಿದ್ದ ಮೈದುಂಬಿದ ಪತ್ರಿಕೆ ಹೊರಬಂದ ಸಮಾಧಾನದ ಮನದಿಂದ ಮರಳಿದೆ.

JEEVANAADI RNI NO 10/01/96 TCI KAN 092
SAMAGRA KUTUMBA AAROGYA MANJARI Kannada Monthly

# ದಿಕ್ಸೂಚಿ

## ಸಾಮಾನ್ಯಜ್ಞಾನ ಮಂಜರಿ



### ಭೂಮಿಯ ಭೀಕರ ಅಂತ್ಯಕ್ಕೆ ಹತ್ತು ಕಾರಣಗಳು

ಮಾರ್ಚ್ ಸಂಚಿಕೆಯಲ್ಲಿ.....

- ★ ಮಂಗಳ ಗ್ರಹಕ್ಕೆ ಮಾನವನ ಲಗ್ಗೆ
- ★ ಮೂರನೇ ವಿಶ್ವದಲ್ಲಿ ಸ್ತ್ರೀ ಶೋಷಣೆ
- ★ ನೆಹರೂ ಕುಟುಂಬದ ಪ್ರೇಮ ವಿವಾಹಗಳು
- ★ ವಿಮಾನ ಯಾನ ಎಷ್ಟು ಸುರಕ್ಷಿತ?
- ★ ಬಜೆಟ್ ಕೊರತೆ : ಕೆಲವು ಕಲ್ಪನೆಗಳು
- ★ ಸ್ವಾಯತ್ತತೆಯ ಕನಸಿನಲ್ಲಿ ರಾಜ್ಯಗಳು
- ★ ಭಾರತೀಯ ಬ್ಯಾಂಕಿಂಗ್
- ★ ಸಾಲದ ಸುಳಿಯಲ್ಲಿ ಸಿಕ್ಕ ಭಾರತ
- ★ ಚಿತ್ರಕಲೆಯಲ್ಲಿ ಮಾನವತಾವಾದ
- ★ ಬೋಧಕರ ವೇದಿಕೆ : ಪರೀಕ್ಷೆಗಳು
- ★ ಸ್ಪರ್ಧಾತ್ಮಕ ಪರೀಕ್ಷೆಯ ಯಶಸ್ಸಿನ ಸಿದ್ಧ ಸೂತ್ರಗಳು
- ★ ಜನರಲ್ ಇಂಗ್ಲಿಷ್, ತಿಂಗಳ ತಿರುಳು, ಕ್ರೀಡೆ, ಪ್ರಬಂಧ ಸ್ಪರ್ಧೆ, ಬುದ್ಧಿಮಟ್ಟ ಪರೀಕ್ಷೆ.....

**ಭಾರತದ ಪ್ರಪ್ರಥಮ ವಿದ್ಯುಚ್ಚಾಲಿತ ಕಾರು : ರೇವಾ**

ಇತ್ಯಾದಿ ಅನೇಕ ವಿಷಯಗಳ ಸಮೃದ್ಧ ಸಂಚಿಕೆ

ಉಚಿತ ಕೊಡುಗೆ

**ಎಸ್.ಡಿ.ಎ./ಎಫ್.ಡಿ.ಎ. ಮತ್ತು ಕೆ.ಇ.ಎಸ್.**

ಸ್ಪರ್ಧಾತ್ಮಕ ಪರೀಕ್ಷೆಗಳ ಸಿದ್ಧತೆಗಾಗಿ

ಸಂಪರ್ಕ ವಿಳಾಸ: ದಿಕ್ಸೂಚಿ ಕಾರ್ಯಾಲಯ,
೯೪೦, ೮ನೇ 'ಬಿ' ಮೇನ್, ೩ ಸ್ಟೇಜ್, ೩ ಬ್ಲಾಕ್, ಬಸವೇಶ್ವರ ನಗರ, ಬೆಂಗಳೂರು-೫೬೦ ೦೭೯.